# ನವಕರ್ನಾಟಕ ೬೦ರ ಸಂಭ್ರಮ : ೧೨ ಕೃತಿಗಳ ಲೋಕಾರ್ಪಣೆ
# ಪುಸ್ತಕ ಪ್ರದರ್ಶನದ ಉದ್ಘಾಟನೆ ಮತ್ತು ಲೇಖಕರೊಂದಿಗೆ ಸಂವಾದ ಕಾರ್ಯಕ್ರಮ

ನವಕರ್ನಾಟಕದ ೬೦ನೇ ವರ್ಷದ ಸಂಭ್ರಮಾಚರಣೆಯು ೧೨ ಪುಸ್ತಕಗಳ ಲೋಕಾರ್ಪಣೆ, ಪುಸ್ತಕ ಪ್ರದರ್ಶನದ ಉದ್ಘಾಟನೆ ಹಾಗೂ ಲೇಖಕರೊಂದಿಗೆ ಸಂವಾದ ಎಂಬ ಮೂರು ವಿನೂತನ ಕಾರ್ಯಕ್ರಮಗಳೊಂದಿಗೆ ೨೦-೯-೨೦೧೯ರಂದು ಮೈಸೂರಿನ ಇನ್ಸ್ಟಿಟ್ಯೂಷನ್ ಆಫ್ ಎಂಜಿನಿಯರ್ಸ್ ಸಭಾಂಗಣದಲ್ಲಿ ನಡೆಯಿತು. ಉದ್ಘಾಟನೆ ಮತ್ತು ಕೃತಿಗಳ ಲೋಕಾರ್ಪಣೆ ಸಾರ್ವಜನಿಕ ಗ್ರಂಥಾಲಯ ಇಲಾಖೆಯ ಮೈಸೂರು ಜಿಲ್ಲಾ ಉಪನಿರ್ದೇಶಕರಾದ ಶ್ರೀ ಮಂಜುನಾಥ್ ಬಿ. ಅವರಿಂದ, ಕೃತಿಗಳ ಪರಿಚಯ ಶ್ರೀ ಯು. ಎಸ್. ಶ್ರೀಧರ ಆಚಾರ್ಯ, ಶ್ರೀಮತಿ ನಿವೇದಿತಾ ಎಚ್. ಹಾಗೂ ಶ್ರೀ ಪ್ರಾಣೇಶ್ ಕೆ. ಎಸ್. ಅವರಿಂದ. 'ಶಾಲೆಗೆ ಬಂದ ಚಿರತೆ ಮತ್ತು ಇತರ ಕಥೆಗಳು' ಪುಸ್ತಕದ ಕುರಿತು ಸಂವಾದದಲ್ಲಿ ಶ್ರೀ ಸಂಜಯ್ ಗುಬ್ಬಿ ಹಾಗೂ ಶ್ರೀ ಕೃಪಾಕರ – ಸೇನಾನಿ ಪಾಲ್ಗೊಂಡಿದ್ದರು. ನವಕರ್ನಾಟಕದಿಂದ ಡಾ॥ ಸಿದ್ದನಗೌಡ ಪಾಟೀಲ, ಶ್ರೀ ರಮೇಶ ಉಡುಪ, ಶ್ರೀ ಎನ್. ಕೆ. ಸತ್ಯನಾರಾಯಣ ಉಪಸ್ಥಿತರಿದ್ದರು.











# ಹೊಸತು

ಒಳಗೇನಿದೆ?

## ನೆಮ್ಮದಿಯ ನಾಳೆ ನಮ್ಮದು


ಗಾಂಧೀಜಿ ಹೀಗೂ ಇದ್ದರು — *ಜಿ. ರಾಮಕೃಷ್ಣ* ... ೯

---

ಅವರು ಕಾಲದ ಕೂಸುಗಳಾಗಿದ್ದರು... — *ಮ. ಶ್ರೀ. ಮುರಳಿ ಕೃಷ್ಣ* ... ೪೫

ಇನ್ನೇಲೆ ನಾನೂ ನೀನೂ ದೂರ ಇರೋಣ — *ಡಾ॥ ಎಚ್. ಎಸ್. ಅನುಪಮಾ* ... ೫೭

---

ಸಂದರ್ಶನ :

ಕಾಂಗ್ರೆಸ್–ಬಿಜೆಪಿ ಎರಡೂ ಪಕ್ಷಗಳು ಆರ್ಥಿಕ ಉದಾರವಾದಿ ನೀತಿಯ ಪರ – ಪ್ರಭಾತ್ ಪಟ್ನಾಯಕ್ — *ಎಂ. ಸತ್ಯಾನಂದ, ಎಂ. ಸಿ. ಡೋಂಗ್ರೆ* ... ೨೧

"ದಲಿತರ ನೋವನ್ನು ಹಾಡುವ ಹಕ್ಕಿ" — *ಡಾ॥ ಸುಭಾಷ್ ರಾಜಮಾನೆ* ... ೪೭

---

ಮಾದಳ್ಳಿಯ ಗೋ ಯಜ್ಞ — *ಭದ್ರಪ್ಪ ಶಿ. ಹೆನ್ಲಿ* ... ೨೫

ಕನಸು ಕನವರಿಕೆ — *ವಿಜಯಾ ಶ್ರೀಧರ್* ... ೬೧

---

ಕಾವ್ಯಲೋಕ — ೨೦, ೨೮, ೩೮, ೪೩, ೪೬, ೫೪, ೫೬, ೬೦, ೬೨

---

ಕರ್ನಾಟಕದ ಗಾರ್ಮೆಂಟ್ಸ್ ಉದ್ಯಮದಲ್ಲಿ ವಲಸೆ ಕಾರ್ಮಿಕರು — *ಪ್ರತಿಭಾ ಆರ್.* ... ೧೩

ಹೆಜ್ಜೆಗಳು ಮೂಡಿಸಿದ ಹಾದಿ — *ಡಾ॥ ವಿನಯಾ ಒಕ್ಕುಂದ* ... ೩೫

---

ಏಕರೂಪವಾದ ಮತ್ತು ಬಹುತ್ವದ ಟಿಪ್ಪಣಿಗಳು — *ರಹಮತ್ ತರೀಕೆರೆ* ... ೧೭

ಜನಸಂಖ್ಯೆಯ ಬೆಳವಣಿಗೆ ಮತ್ತು ಅಲ್ಪಸಂಖ್ಯಾತರ ಜನಸಂಖ್ಯೆ — *ಡಾ॥ ಟಿ. ಆರ್. ಚಂದ್ರಶೇಖರ* ... ೩೧

---

ಗಿರೀಶ ಕಾರ್ನಾಡನ ನೆನೆಯುತ್ತಾ... — *ಎಂ. ಎಸ್. ಪ್ರಭಾಕರ* ... ೨೯

ಬಾಹ್ಯಾಕಾಶದಲ್ಲಿ ಮಿನುಗಿದ ಭಾರತದ ರತ್ನ... ವಿಕ್ರಮ್ ಸಾರಾಭಾಯಿ — *ರಾಜೀವ್ ಎನ್. ಮಾಗಲ್* ... ೩೯

ಬೇಂದ್ರೆಯವರ 'ಬೆಳಗು' ಕವಿತೆಗೆ ಈಗ ನೂರು ವರುಷ — *ಡಾ॥ ಚೆನ್ನವೀರ ಕಣವಿ* ... ೫೫

---

ಶಿಕ್ಷಣ : ವಾಸ್ತವದ ಕೆಲವು ಸಮಸ್ಯೆಗಳು — *ಕಲ್ಲುಗುಂಡಿ ನವೀನ್* ... ೪೧

---

ನಾನು ಓದಿದ ಪುಸ್ತಕ : ಎದೆ ತುಂಬ ನಕ್ಷತ್ರ — *ಭಾರತೀ ಕಾಸರಗೋಡು* ... ೫೩

ವಿಶ್ವವೀಕ್ಷಣೆ : ಬ್ರೆಕ್ಸಿಟ್–ಕವಲುದಾರಿಯಲ್ಲಿ ಬ್ರಿಟನ್ — *ಸೀಯಾರ್ಕೆ* ... ೫೨

ನಭಾವಲೋಕನ : ತುಲಾ ಸಂಕ್ರಮಣ – ಚಿತ್ರಾ ನಕ್ಷತ್ರ – ಯಾವುದು ಸರಿ? — *ಡಾ॥ ಬಿ. ಎಸ್. ಶೈಲಜಾ* ... ೪೦

ಹೊಸ ಓದು — *ಇಂದಿರಾಕುಮಾರಿ* ... ೪೪


---


**ಚಿತ್ರಗಳು :** ಕಮಲಂ ಅರಸು, ನಾಮದೇವ ಕಾಗದಗಾರ, ಗೋಪಿ ಹಿರೇಬೆಟ್ಟು, ಆದರ್ಶ ಪೈ, ಜಿ. ಎಂ. ಬೊಮ್ಮಳ್ಳಿ.

**ಮುಖಪುಟ : ಕಸ್ತೂರ್‌ಬಾ ಗಾಂಧಿ**

**ವಿನ್ಯಾಸ :** ನವಕರ್ನಾಟಕ ವಿನ್ಯಾಸ

**ಕಚೇರಿ ಸಹಕಾರ :** ಜಿ. ವಿ. ತೇಜೋವತಿ


## ಈ ತಿಂಗಳು



ಇಡಿ (ಎನ್‌ಫೋರ್ಸ್‌ಮೆಂಟ್ ಡೈರೆಕ್ಟರೇಟ್) ಆದಾಯ ತೆರಿಗೆ ಇಲಾಖೆಯ ಒಂದು ವಿಭಾಗ. ತೆರಿಗೆಗಳ್ಳರ ಮೇಲೆ ನಿಗಾ ಇರಿಸುವುದು, ಕ್ರಮ ಕೈಗೊಳ್ಳುವುದು ಇದರ ಕಾರ್ಯ. ನಮ್ಮ ದೇಶದಲ್ಲಿ ತೆರಿಗೆಗಳ್ಳರಿಗೆ ಕೊರತೆ ಏನಿಲ್ಲ. ಆದಾಯ ತೆರಿಗೆ ಪಾವತಿಸುವವರು ಸಂಬಳ ಪಡೆಯುವ ನೌಕರರು. ಇವರಿಗೂ ನಾನಾ ಬಗೆಯ ರಿಯಾಯಿತಿಗಳು, ಮಾರ್ಗಗಳೂ ಇವೆ. ಇನ್ನು ತೆರಿಗೆದಾರರೆಂದರೆ ವ್ಯಾಪಾರಸ್ಥರು, ಉದ್ಯಮಿಗಳು ಮತ್ತು ರಾಜಕಾರಣಿಗಳು. ಇವರುಗಳು ಯಾರೂ ಪ್ರಾಮಾಣಿಕವಾಗಿ ಆದಾಯ ತೆರಿಗೆ ಸಲ್ಲಿಸುವುದಿಲ್ಲ. ಇನ್ನು ಅಧಿಕಾರದಲ್ಲಿರುವವರು ತೆಗೆದುಕೊಳ್ಳುವ ಲಂಚಕ್ಕೆ ಲೆಕ್ಕವೇ ಇಲ್ಲ. ಇವರುಗಳನ್ನೆಲ್ಲ ಪತ್ತೆ ಹಚ್ಚಿ ಕ್ರಮ ಕೈಗೊಳ್ಳುವುದೇ 'ಇಡಿ' ಕಾರ್ಯ. ಇದು ಹಣಕಾಸಿನ ಸಚಿವಾಲಯದ ಸುಪರ್ದಿಯಲ್ಲಿರುತ್ತದೆ. ಇದೊಂದು ಅಧಿಕಾರ ದಲ್ಲಿರುವ ರಾಜಕೀಯ ಪಕ್ಷ 'ಸದುಪಯೋಗ'ಪಡಿಸಿಕೊಳ್ಳಲು ಇರುವ ಅಸ್ತ್ರ.

ಈ ಅಸ್ತ್ರವನ್ನು ವಿಪಕ್ಷಗಳನ್ನು ಮಣಿಸಲು ಧಾರಾಳವಾಗಿ ಉಪಯೋಗಿಸಿ ಕೊಳ್ಳುತ್ತದೆ ಅಧಿಕಾರಾರೂಢ ಪಕ್ಷ. ಕಾಂಗ್ರೆಸ್ ಅಧಿಕಾರದಲ್ಲಿದ್ದಾಗ ಮಾಡಿದ್ದನ್ನೇ ಈಗ ಅನುಭವಿಸುತ್ತಿದೆ. ತನಗೆ ಪ್ರಿಯವಾದ ಅಧಿಕಾರಿಗಳಿಗೆ ನಿವೃತ್ತರಾದ ಮೇಲೆ ಪೊಗದಸ್ತಾದ ಸ್ಥಾನಗಳಲ್ಲಿ ನೇಮಕಾತಿ ಮಾಡುವುದು, ಬೇಡದವರ ಮೇಲೆ ಇಡಿ ಅಸ್ತ್ರ ಪ್ರಯೋಗಿಸುವುದು ನಡೆದೇ ಇದೆ. ಬೇಕಾದಷ್ಟು ಅಂದರೆ ಕೋಟಿಗಟ್ಟಲೆ ಅಕ್ರಮ ಹಣ, ಒಡವೆ, ವಸ್ತುಗಳು ಮತ್ತು ಸ್ಥಿರ ಆಸ್ತಿಗಳನ್ನು ವಶ ಮಾಡಿಕೊಂಡು ಪಂಚನಾಮೆಯಾದರೂ ಆಮೇಲೆ ಏನಾಯಿತು ಎನ್ನುವುದು ಮಾತ್ರ ನಿಗೂಢ. ಇದುವರೆಗೂ ಯಾವ ಅಧಿಕಾರಿಯೂ, ರಾಜಕಾರಣಿಯೂ, ಶಿಕ್ಷೆ ಅನುಭವಿಸಿದ್ದನ್ನು ಕಾಣಲಾಗದು. ತಮಿಳುನಾಡು ಮುಖ್ಯಮಂತ್ರಿ ಜಯಲಲಿತ ತೀರ್ಪು ಬರುವ ಮುನ್ನವೇ ತೀರಿಕೊಂಡರು. ಅವರ ಆಪ್ತಸಖಿ ಮಾತ್ರ ಈಗ ಪರಪ್ಪನ ಅಗ್ರಹಾರ ಸೇರಿದ್ದಾರೆ. ರಾಜಕಾರಣಿಗಳ ಪೈಕಿ ಕಾರಾಗೃಹಕ್ಕೆ ಭ್ರಷ್ಟಾಚಾರದ ಆರೋಪ ಹೊತ್ತು ಹೋಗಿಬಂದ ಯಡಿಯೂರಪ್ಪ ಈಗ ಮತ್ತೆ ಮುಖ್ಯಮಂತ್ರಿ. ಅವರ ಸಹೋದ್ಯೋಗಿಗಳು ಖುಲಾಸೆಯಾಗಿ ಆರಾಮವಾಗಿದ್ದಾರೆ. ಹಣವಿದ್ದವರು ಒಳ್ಳೆ ವಕೀಲರನ್ನು ನೇಮಿಸಿಕೊಂಡು ಬಚಾವಾಗುತ್ತಾರೆ. ಇಲ್ಲದವರು ಅನುಭವಿಸುತ್ತಾರೆ. ಇದು ನಿಯಮ. ಈಗ ಕೇಂದ್ರದಲ್ಲಿ ಕಾಂಗ್ರೆಸ್ ಮುಖಂಡ ಪಿ. ಚಿದಂಬರಂ ಮತ್ತು ರಾಜ್ಯದಲ್ಲಿ ಸಕ್ರಿಯ ರಾಜಕಾರಣಿ ಡಿ. ಕೆ. ಶಿವಕುಮಾರ್ ಸರದಿ. ಹಾಗೆ ಸೋನಿಯಾ ಗಾಂಧಿ, ರಾಹುಲ್ ಗಾಂಧಿ, ರಾಬರ್ಟ್ ವಾದ್ರಾ ಮೊದಲಾದವರೆಲ್ಲ ಮೊಕದ್ದಮೆಗಳನ್ನು ಎದುರಿಸುತ್ತಿದ್ದಾರೆ. 'ಮಾಡಿದ್ದುಣ್ಣೋ ಮಹರಾಯ' ಎಂಬ ನುಡಿಗಟ್ಟು ಅನ್ವಯಿಸುತ್ತದೆ ಇಂಥವರಿಗೆಲ್ಲ.

✶ ✶ ✶

ಅಸ್ಸಾಮ್‌ನಲ್ಲಿ ರಾಷ್ಟ್ರೀಯ ನಾಗರಿಕತ್ವದ ಪಟ್ಟಿ ಸಿದ್ಧವಾಗುತ್ತಿದ್ದ ಹಾಗೆ ಹತ್ತೊಂಬತ್ತು ಲಕ್ಷ ಮಂದಿ ಪೌರತ್ವ ಕಳೆದುಕೊಂಡಿದ್ದಾರೆ. ಕೇಂದ್ರ ಸರಕಾರದ ಸುಪರ್ದಿನಲ್ಲಿ ಈ ಕಾರ್ಯ ಎಷ್ಟೋ ದಿನಗಳಿಂದ ಚಾಲ್ತಿಯಲ್ಲಿದೆ. ಇದು ಅಂತಿಮವಲ್ಲ ಎಂಬುದಾಗಿ ಸರಕಾರ ಭರವಸೆ ನೀಡಿದೆ ಅತಂತ್ರರಿಗೆ. ಅಸ್ಸಾಮ್‌ಅನ್ನು ಒಳಗೊಂಡಂತೆ ಈಶಾನ್ಯ ಭಾರತದಲ್ಲಿ ಅಕ್ರಮ ವಲಸೆಗಾರರ ಸಮಸ್ಯೆ ಬೇಕಾದಷ್ಟಿದೆ. ಬಾಂಗ್ಲಾದೇಶದ ನಿರಾಶ್ರಿತರು ಬಹು ಮಂದಿ ಇದ್ದಾರೆ. ಈಗ ಪೌರತ್ವ ಕಳೆದುಕೊಂಡಿರುವವರ ಪಾಡೇನು? ಅವರನ್ನು ಹಿಂದಿರುಗುವಂತೆ ಮಾಡುವುದು ಸಾಧ್ಯವೇ? ಹೀಗೆ ನಾನಾ ಪ್ರಶ್ನೆಗಳು ಹುಟ್ಟಿಕೊಂಡಿವೆ. ಅಕ್ರಮ ವಲಸೆಗಾರರು ಎನಿಸಿಕೊಂಡಿರುವವರೆಲ್ಲ ಅಸ್ಸಾಮ್‌ನಲ್ಲಿ ಸಾಕಷ್ಟು ಕಾಲದಿಂದ ನೆಲೆಸಿದ್ದಾರೆ. ಉದ್ಯೋಗ ಮಾಡಿಕೊಂಡು ಆಸ್ತಿಪಾಸ್ತಿ ಗಳಿಸಿರುವವರೂ ಇದ್ದಾರೆ.

ಗೃಹ ಸಚಿವ ಅಮಿತ್ ಷಾ ಅಸ್ಸಾಮ್‌ನಲ್ಲಿ ಪೌರತ್ವ ನಿಷ್ಕರ್ಷಿಸುವ ರೀತಿಯಲ್ಲೇ ರಾಷ್ಟ್ರವ್ಯಾಪಿಯಾಗಿ ಮಾಡುವ ಸರಕಾರದ ಯೋಜನೆಯನ್ನು ಹೊರಗೆಡಹಿದ್ದಾರೆ. ಅಂಥ ಪ್ರಯತ್ನಕ್ಕೆ ಕೈ ಹಾಕಿದರೆ ಜೇನುಗೂಡಿಗೆ

**(೬ನೇ ಪುಟಕ್ಕೆ)**



# ಸಂಪಾದಕೀಯ

## ಹಿಂದಿ ಭಾಷೆ ಒಡನಾಡಿಯಾಗಿರಲಿ, ಒಡೆಯನಾಗದಿರಲಿ

ಭಾಷೆ ಮಾನವಕುಲದ ಅಪೂರ್ವ ಸಂಶೋಧನೆ. ಸಂಖ್ಯೆಯಲ್ಲಿ ಎಷ್ಟೇ ಜನ ಮಾತನಾಡುವ ಭಾಷೆಯಾಗಿರಲಿ, ಅದು ಕೇವಲ ಶಬ್ದಗಳ ಉಚ್ಚಾರಣೆಯಲ್ಲ. ಒಂದು ಗುಂಪಿನ ಅಸ್ಮಿತೆಯನ್ನೂ ಸಂಸ್ಕೃತಿಯನ್ನೂ ಪರಂಪರೆಯನ್ನೂ ಹೊಂದಿರುತ್ತದೆ. ಅದಕ್ಕೆ ಶತಶತಮಾನಗಳ ಇತಿಹಾಸವಿರುತ್ತದೆ. ವ್ಯಕ್ತಿಯ ಮಾಲಿಕತ್ವ ಅಥವಾ ಗುಲಾಮಗಿರಿ ಭಾಷೆಗೆ ಅನ್ವಯವಾಗುವುದಿಲ್ಲ. ಸಂವಹನವೇ ಅದರ ಗುರಿ. ಸಂವಹನ ಕ್ರಿಯೆ ಮಾನವನ ಸಾಮೀಪ್ಯಕ್ಕೆ ಮಾಧ್ಯಮವಾಗಬೇಕೇ ಹೊರತು ಸಂಘರ್ಷಕ್ಕೆ ಕಾರಣವಾಗಬಾರದು. ಈಗ ಭಾರತದಲ್ಲಿ ಭಾಷೆ ಆಳುವ ಆಳಿಸಿಕೊಳ್ಳುವ ಪ್ರಕ್ರಿಯೆಗೆ ವಸ್ತುವಾಗಿ ಸಾಮಾಜಿಕ ಅಶಾಂತಿಗೆ ಕಾರಣವಾಗುತ್ತಿದೆ. ಇದಕ್ಕೆ ಕಾರಣ ಆಳುವ ವರ್ಗದ ದುರಾಲೋಚನೆ. ವಾಸ್ತವದಲ್ಲಿ ಇಂದು ನಡೆಯುತ್ತಿರುವ ಹಿಂದಿ ಹೇರಿಕೆಯ ವಿವಾದ ಆಳುವ ವರ್ಗದ ತಕ್ಷಣದ ಕಾರ್ಯಸೂಚಿಯಲ್ಲ. ಇದು ಆಡಳಿತ ಪಕ್ಷ ಜನರ ಮೂಲಭೂತ ಸಮಸ್ಯೆಗಳನ್ನು ಪರಿಹರಿಸುವಲ್ಲಿ ವಿಫಲವಾಗಿ ಜನರ ಗಮನ, ಸಾರ್ವಜನಿಕ ಚರ್ಚೆಯನ್ನು ಬೇರೆಡೆಗೆ ತಿರುಗಿಸುವ ಪ್ರಯತ್ನ. ಈ ಥರದ ಭಾವುಕ ವಿಷಯಗಳ ವಿವಾದಗಳನ್ನು ಹುಟ್ಟುಹಾಕಿ ಹಸಿವು, ನಿರುದ್ಯೋಗ, ಬಡತನಗಳಂತಹ ಮೂಲಭೂತ ಸಮಸ್ಯೆಗಳ ಮೇಲೆ ಅಪಾರದರ್ಶಕ ಹೊದಿಕೆ ಹೇರುವ ಕುತಂತ್ರ. ಇಂದು ಕೇಂದ್ರದ ಗೃಹಸಚಿವ ಎತ್ತಿದ ಈ ಭಾಷಾ ವಿವಾದವನ್ನು ಸಂದರ್ಭಕ್ಕೆ ಬಳಸಿಕೊಂಡರೂ ಎಂಥದೆ ಸಮರ್ಥನೆ ಕೊಟ್ಟರೂ ಇದು ಅವರ ಪಕ್ಷದ ದೂರಗಾಮಿ ಕಾರ್ಯಸೂಚಿಯಾಗಿದ್ದರಿಂದ ಸಂಕ್ಷಿಪ್ತವಾಗಿ ಪ್ರತಿಕ್ರಿಯಿಸಿ ಜನರನ್ನು ಮೂಲಭೂತ ಸಮಸ್ಯೆಗಳತ್ತ ತಿರುಗುವಂತೆ ಮಾಡುವುದು ಜನಪರ ಚಳುವಳಿಗಳ ಮುಂದಿರುವ ಗುರಿಯಾಗಬೇಕು.

ಭಾರತದ ಸಂವಿಧಾನಶಿಲ್ಪಿಗಳು ಭಾರತಕ್ಕೊಂದು ಸಂವಹನ ಭಾಷೆ ಇರಬೇಕು, ಅದು ಇಂಗ್ಲಿಷ್ ಭಾಷೆಗೆ ಪರ್ಯಾಯವಾಗಿ ರೂಪುಗೊಳ್ಳಬೇಕು, ಈ ಪ್ರಕ್ರಿಯೆ ೧೯೬೫ರೊಳಗೆ ಮುಗಿಯಬೇಕು ಎಂದು ಬಯಸಿದ್ದು ನಿಜ. ಇಂಥ ಪರ್ಯಾಯ ಹಿಂದಿ ಭಾಷೆ ಆಗಬೇಕೆಂದು ನಿರೀಕ್ಷಿಸಿದ್ದೂ ಸತ್ಯ. ಭಾರತದಂಥ ಬಹುಭಾಷೆಯ, ಬಹುಸಂಸ್ಕೃತಿಯ ದೇಶಕ್ಕೆ ಒಂದು ಭಾಷೆಯನ್ನು ಆಡಳಿತಾತ್ಮಕ ಕಾರಣಗಳಿಂದ ಸಂವಹನ ಭಾಷೆಯನ್ನಾಗಿ ವಿಸ್ತರಿಸುವುದು ಸಾಮಾನ್ಯ ಸಂಗತಿಯಾಗಿರಲಿಲ್ಲ. ಇಷ್ಟಕ್ಕೂ ಹಿಂದಿ ಭಾಷೆ ಅಂದಿನ ಭಾರತದ ಒಟ್ಟು ಜನಸಂಖ್ಯೆಯನ್ನು ಹೋಲಿಸಿದರೆ ಬಹುಸಂಖ್ಯಾತರ ಭಾಷೆಯೇನೂ ಆಗಿರಲಿಲ್ಲ, ಇಂದಿಗೂ ಅಲ್ಲ. ೧೯೫೦ರಲ್ಲಿ ಭಾರತದ ಸಂವಿಧಾನ ೧೪ ಭಾಷೆಗಳನ್ನು ಮನ್ನಿಸಿತ್ತು. ಇತರ ಎಲ್ಲ ಭಾಷೆಗಳಿಗೆ, ಅವುಗಳ ಅಸ್ಮಿತೆ, ಅಧ್ಯಯನ ವಿಸ್ತರಣೆಗೆ, ಲಿಪಿರಹಿತ ಭಾಷೆಗಳಿಗೆ ಲಿಪಿ ಹೊಂದುವ ಅವಕಾಶ ಕಲ್ಪಿಸಿತ್ತು. ೧೯೬೧ರ ಜನಗಣತಿಯ ಪ್ರಕಾರ ಭಾರತದಲ್ಲಿ ೧,೫೪೯ ಭಾಷೆಗಳನ್ನು ಮಾತೃಭಾಷೆಗಳೆಂದು ಪಟ್ಟಿ ಮಾಡಲಾಗಿತ್ತು. ಇಂಥ ವೈವಿಧ್ಯಮಯ ಭಾಷಾ ಸಂಪತ್ತನ್ನು ಹೊಂದಿರುವ, ತನ್ನ ವೈವಿಧ್ಯತೆಗಳಿಂದ ವಿಶ್ವದಲ್ಲೊಂದು ವಿಶ್ವವಾಗಿರುವ ಭಾರತಕ್ಕೆ 'ಒಂದು' ಸಂವಹನ ಭಾಷೆ ರೂಪಿಸಬೇಕಾದರೆ ಆ 'ಒಂದು' ಭಾಷೆ ಆಳುವ ವರ್ಗದ ಹೇರಿಕೆ, ಅಹಂಕಾರದ ಅಭಿವ್ಯಕ್ತಿಯ ಸಾಧನವಾದರೆ ದೇಶದ ಬಹುತ್ವ ಮತ್ತು ಏಕತೆಗೆ ಅಪಾಯ.

೧೯೪೬ರಲ್ಲಿ ಗಾಂಧೀಜಿ 'ಇಂಗ್ಲಿಷ್ ಭಾಷೆಯನ್ನು ನಾನು ಅದರ ಸ್ವಂತ ಸ್ಥಳದಲ್ಲಿ ಪ್ರೀತಿಸುತ್ತೇನೆ. ಆದರೆ ಅದು ತನ್ನದಲ್ಲದ ಪ್ರದೇಶದಲ್ಲಿ ಸ್ಥಾನವೊಂದನ್ನು ಅತಿಕ್ರಮಿಸಿದಲ್ಲಿ ನಾನು ಅದನ್ನು ಖಂಡಿತವಾಗಿ ವಿರೋಧಿಸುತ್ತೇನೆ' ಎಂದು ಹೇಳುತ್ತಾರೆ. ಈ ಮಾತು ಹಿಂದಿಗೂ ಅನ್ವಯವಾಗುತ್ತದೆ. ಇಷ್ಟಕ್ಕೂ ಹಿಂದಿ ಭಾಷೆ ನಮ್ಮ ದೇಶದ ಭಾಷೆ, ಸ್ವಾತಂತ್ರ್ಯ ಹೋರಾಟದಲ್ಲಿ ಹೆಚ್ಚು ಜನರನ್ನು ಸಂಪರ್ಕಿಸಲು ಸಾಧ್ಯವಾದ ಭಾಷೆಯಾದರೂ ಎಲ್ಲರಿಗೂ ಅರ್ಥವಾದ ಭಾಷೆಯಲ್ಲ. ತುಲನಾತ್ಮಕವಾಗಿ ಹಿಂದಿ ಭಾರತದ ಒಂದು ದೊಡ್ಡ ಜನಸಮೂಹದ ಸಂವಹನ ಭಾಷೆಯಾಗಿದ್ದರೂ ಅಸಾಮಾನ್ಯ ಸಾಹಿತ್ಯ, ಸಂಸ್ಕೃತಿಯನ್ನು ಹೊಂದಿದ್ದರೂ ಇಂದಿನ ಆಡಳಿತ ಪಕ್ಷದ ಪುರಾತನರು ಆ ಭಾಷೆಗೆ ಒಂದು ಕಳಂಕವನ್ನು ಅಂಟಿಸಿದ್ದಾರೆ. ಆರ್.ಎಸ್.ಎಸ್.ನ ಗೋಳವಲ್ಕರ ಅವರ ಕಾಲದಿಂದಲೇ 'ಹಿಂದಿ ಹಿಂದು ಹಿಂದುಸ್ತಾನ್' ಎಂಬ ಘೋಷಣೆ ಕೊಡುವುದರ ಮೂಲಕ ಒಂದು ಅದ್ಭುತವಾದ ಭಾಷೆಯನ್ನು, ಒಂದು ವಿಶಾಲ ದೇಶದ ಸಂವಹನ ಮಾಧ್ಯಮವಾಗಬಹುದಾಗಿದ್ದ ಭಾಷೆಯನ್ನು ಒಂದು ಧರ್ಮಕ್ಕೆ, ಅದೂ ವರ್ಣಾಶ್ರಮದ ತಾರತಮ್ಯ ವಿರುವ ಧರ್ಮಕ್ಕೆ ಸಮೀಕರಣಗೊಳಿಸಿದ್ದರಿಂದ, ರಾಜಕೀಯಕರಣಗೊಳಿಸಿದ್ದರಿಂದ ಇಂದು ಹಿಂದಿಯೇತರ ವಲಯದಿಂದ ಹಿಂದಿ ಭಾಷೆ ತಮ್ಮದಲ್ಲ ಎನ್ನುವ ಭಾವನೆ ಬೆಳೆದಿದೆ. ಬಹುತೇಕ ದಕ್ಷಿಣ ಭಾರತದ ಜನತೆಗೆ ಹಿಂದಿ ಮೊದಲೇ ಅಪರಿಚಿತ. 'ಹಿಂದಿ ಹಿಂದು ಹಿಂದುಸ್ತಾನ್' ಎಂಬ ಘೋಷಣೆ ರಾಷ್ಟ್ರೀಯ ಸ್ವಯಂಸೇವಕ ಸಂಘ ಮತ್ತು ಜನಸಂಘಗಳಿಂದ ಬಂದ ಮೇಲೆ ಅದು ಒಂದು ಸಂಸ್ಕೃತಿಯನ್ನು ಇನ್ನೊಂದು ಸಂಸ್ಕೃತಿಯ ಮೇಲೆ ಹೇರುವ ಮಾಧ್ಯಮವಾಗಿ ಬಿಂಬಿತವಾಯಿತು. ಸಹಜವಾಗಿಯೇ ದ್ರಾವಿಡ, ಬುಡಕಟ್ಟು ಸಂಸ್ಕೃತಿಯ ಜನಸಮೂಹ, ಹಿಂದಿಯೇತರ ಜನಸಮೂಹದಿಂದ ವಿರೋಧವನ್ನು ಎದುರಿಸಿತು. ಹಿಂದಿ ಭಾಷೆ





ಸಂಪುಟ-೨೧ ಸಂಚಿಕೆ-೩ ಅಕ್ಟೋಬರ್ ೨೦೧೯

**ಗೌರವ ಸಂಪಾದಕ**
ಜಿ. ರಾಮಕೃಷ್ಣ

**ಸಂಪಾದಕ-ಮುದ್ರಕ-ಪ್ರಕಾಶಕ**
ಸಿದ್ದನಗೌಡ ಪಾಟೀಲ

**ಸಹಸಂಪಾದಕರು**
ಎಂ. ಅಬ್ದುಲ್ ರೆಹಮಾನ್ ಪಾಷ
ಇಂದಿರಾ ಕುಮಾರಿ
ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಎಸ್. ಸುರೇಂದ್ರ

**ವ್ಯವಸ್ಥಾಪಕ**
ಎ. ರಮೇಶ ಉಡುಪ

**ಮುದ್ರಣ**
ಶ್ರೀ ವಿನಾಯಕ ಪ್ರಿಂಟರ್ಸ್
೭೩೮/೧೦, ೭೦ನೇ ಅಡ್ಡರಸ್ತೆ
೫ನೇ ಬ್ಲಾಕ್, ರಾಜಾಜಿನಗರ
ಬೆಂಗಳೂರು – ೫೬೦ ೦೧೦

**ಹೊಸತು ಕಚೇರಿಯ ವಿಳಾಸ**




ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೯೮
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು – ೫೬೦ ೦೦೧
ದೂರವಾಣಿ : ೨೨೧೬೧೯೧೧, ೨೨೧೬೧೯೧೨
e-mail : navakarnataka@gmail.com
hosathu@gmail.com
hosathu.nkp@gmail.com
URL : www.navakarnataka.com
http : //navakarnataka.blogspot.in
http : //hosathumonthly.blogspot.in

ಹೇರಿಕೆಯ ಭಾಷೆ ಎಂದು ಪರಿಭಾವಿಸಲ್ಪಟ್ಟಿತು. ಇದು ಕೇವಲ ಭಾಷೆಯ ಹೇರಿಕೆಯಾಗದೇ ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ, ರಾಜಕೀಯ ಆಧಿಪತ್ಯ ಸ್ಥಾಪಿಸಲು ದಾರಿ ಮಾಡಿಕೊಡುತ್ತದೆ ಎಂಬ ವಿಶ್ಲೇಷಣೆಗೆ ಗುರಿಯಾಯಿತು. ಸ್ವಾತಂತ್ರ್ಯಪೂರ್ವ ದಿಂದಲೂ ಇಂಥ ಹೇರಿಕೆ ರಾಜಕಾರಣದ ವಿರುದ್ಧ ಪ್ರತಿರೋಧ ನಡೆದಿದೆ. ಸಾಮಾನ್ಯವಾಗಿ ಆರ್ಯ–ದ್ರಾವಿಡ ಸಾಂಸ್ಕೃತಿಕ ಭಿನ್ನತೆಗಳು ಇಂಥ ವಾತಾವರಣಕ್ಕೆ ಕಾರಣವಾಗಿವೆ.

ನಮ್ಮ ಸಂವಿಧಾನ ರಚನಾ ಸಮಿತಿ ೧೯೬೫ರಷ್ಟರ ಹೊತ್ತಿಗೆ ಹಿಂದಿ ಭಾಷೆ ಇಂಗ್ಲಿಷ್ ಭಾಷೆಗೆ ಪರ್ಯಾಯವಾಗಿ ಭಾರತದ ಆಡಳಿತ, ಸಂವಹನ ವ್ಯವಸ್ಥೆಗೆ ರೂಪಗೊಳ್ಳುತ್ತದೆ ಎಂದು ನಿರೀಕ್ಷಿಸಿದ್ದರು. ಆದರೆ ಅದು ಸಾಧ್ಯವಾಗಲಿಲ್ಲ. ಅಂದಿನ ಪ್ರಧಾನಿ ಜವಾಹರಲಾಲ್ ನೆಹರೂ ಅವರು ಹಿಂದಿಯನ್ನು ಸಾರ್ವತ್ರಿಕ ಭಾಷೆಯನ್ನಾಗಿ ಬೆಳೆಸಲು ಆಶಿಸಿದರೂ ಆಡಳಿತಾತ್ಮಕವಾಗಿ ಪ್ರಯತ್ನಿಸಿದರೂ ಸಾಧ್ಯವಾಗಲಿಲ್ಲ. ಹಿಂದಿ ಭಾಷೆ ಭಾರತದ ಎಲ್ಲ ಜನತೆಯ ಎದೆಯ ಭಾವನೆಗಳಿಗೆ ಸ್ಪಂದಿಸಲಿಲ್ಲ. ಸರಕಾರದ ಎಲ್ಲ ಪ್ರಯತ್ನಗಳೂ ಅಧಿಕಾರಶಾಹಿಯ ಪ್ರಯತ್ನಗಳಾದುವೇ ಹೊರತು ಇಂಗ್ಲಿಷ್ ಭಾಷೆಗೆ ಪರ್ಯಾಯ ರೂಪಿಸುವ ಪ್ರಯತ್ನ ನಡೆಯಲಿಲ್ಲ. ಇನ್ನೊಂದೆಡೆ ತೀವ್ರವಾದ ಪ್ರತಿರೋಧ ಭಾವನಾತ್ಮಕವಾಗಿ ಬೆಳೆಯುತ್ತಿತ್ತು. ಖ್ಯಾತ ಇತಿಹಾಸಕಾರ ಬಿಪಿನ್‌ಚಂದ್ರ ಅವರು ಹಿಂದಿಯನ್ನು ಭಾರತದ ಪ್ರಾತಿನಿಧಿಕ, ಅಧಿಕೃತ ಭಾಷೆಯಾಗಿ ರೂಪಿಸುವಲ್ಲಿ ಆದ ವೈಫಲ್ಯಗಳನ್ನು ಹೀಗೆ ಹೇಳುತ್ತಾರೆ: "ಹಿಂದಿ ಸಾಹಿತ್ಯಿಕ ಭಾಷೆಯಾಗಿ ಬೆಳೆದಿತ್ತೇ ಹೊರತು ವೈಜ್ಞಾನಿಕ, ಶೈಕ್ಷಣಿಕ ಕ್ಷೇತ್ರದಲ್ಲಿ ಬೆಳವಣಿಗೆಯನ್ನು ಹೊಂದಿರಲಿಲ್ಲ. ಹಿಂದಿ ಭಾಷೆಯನ್ನು ಬೆಳೆಸುವ ಉತ್ಸಾಹದಲ್ಲಿ ಅದನ್ನು ಸಂಸ್ಕೃತೀಕರಣಗೊಳಿಸಲು ಹೆಚ್ಚು ಒತ್ತುಕೊಡಲಾಯಿತು." ದಕ್ಷಿಣ ಭಾರತದಲ್ಲಿ ಪ್ರಾಮಾಣಿಕವಾಗಿ ಹಿಂದಿಯ ಬೆಳವಣಿಗೆಗೆ ಕೆಲಸ ಮಾಡಲು ಖ್ಯಾತನಾಮ ವ್ಯಕ್ತಿಗಳಿರಲಿಲ್ಲ. ಆಡಳಿತ ವ್ಯವಸ್ಥೆಯ ಭಾಗವಾಗಿ ಬಂದ ಹಿಂದಿ ಸಹಜವಾಗಿಯೇ ಪ್ರತಿರೋಧವನ್ನು ಎದುರಿಸಿತು.

ಒಂದು ಭಾಷೆಯನ್ನು ಒಪ್ಪಿಕೊಳ್ಳಲು ಸಾಂಸ್ಕೃತಿಕ, ಭಾವನಾತ್ಮಕ, ಆರ್ಥಿಕ, ಔದ್ಯೋಗಿಕ, ಶೈಕ್ಷಣಿಕ ಕಾರಣ ಗಳಿರುತ್ತವೆ. ಆದರೆ ಹಿಂದಿ ಭಾಷೆ ಈ ಎಲ್ಲ ಮಾರ್ಗಗಳ ಬದಲಾಗಿ ಕೇವಲ ರಾಜಕೀಯ, ಆಡಳಿತಾತ್ಮಕ ಮಾರ್ಗದಿಂದ ಬಂದಾಗ ತಿರಸ್ಕರಿಸಲ್ಪಟ್ಟಿತು. ೧೯೫೮ ಮಾರ್ಚ್ ತಿಂಗಳಲ್ಲಿ ದಕ್ಷಿಣ ಭಾರತದಲ್ಲಿ ಹಿಂದಿ ಪ್ರಚಾರಿಣಿ ಸಭಾ ಮಾಜಿ ಅಧ್ಯಕ್ಷ ಸಿ. ರಾಜಗೋಪಾಲಾಚಾರಿಯವರು 'ಹಿಂದಿ ಭಾಷೆ ಪ್ರತಿಪಾದಕರಿಗೆ ಇಂಗ್ಲಿಷ್ ವಿದೇಶಿ ಭಾಷೆ ಎನಿಸುವಷ್ಟೇ, ಹಿಂದಿಯೇತರ ಭಾಷಿಕರಿಗೆ ಹಿಂದಿ ಭಾಷೆ ಅಷ್ಟೇ ವಿದೇಶಿ ಎನಿಸುತ್ತದೆ' ಎಂದು ಹೇಳಿದ್ದರು. ದಕ್ಷಿಣ ಭಾರತ ಅದರಲ್ಲೂ ತಮಿಳುನಾಡು ಜನತೆ ಮತ್ತು ಅವರ ನಾಯಕರು ಹಿಂದಿ ಹೇರಿಕೆಯನ್ನು ಅಂದಿಗೂ ಇಂದಿಗೂ ತೀವ್ರವಾಗಿ ವಿರೋಧಿಸುತ್ತಾರೆ. ತಮಿಳುನಾಡಿನಲ್ಲಿ ಇರುವಷ್ಟು ಪ್ರತಿರೋಧದ ತೀವ್ರತೆ ಬೇರೆ ಕಡೆಗಿಲ್ಲವಾದರೂ ಹಿಂದಿ ಭಾಷಿಕ ರಾಜ್ಯಗಳನ್ನು ಹೊರತುಪಡಿಸಿ, ದಕ್ಷಿಣ ಭಾರತ, ಈಶಾನ್ಯ ಭಾರತದಲ್ಲಿ ಹಿಂದಿಯನ್ನು ಅಧಿಕೃತ ರಾಷ್ಟ್ರಭಾಷೆ ಮಾಡಲು ವಿರೋಧವಿದೆ. ನೆಹರೂ ಜೀವಿತಕಾಲದಲ್ಲಿ ಹಿಂದಿ ಭಾಷೆಗೆ ಪೂರಕವಾಗಿ ಮನವೊಲಿಸುವ ಪ್ರಯತ್ನ ಮಾಡಿದರು. ಸಂವಿಧಾನ ವಿಧಿಸಿದ ೧೯೬೫ರ ಗಡುವು ಸಮೀಪಿಸು ತ್ತಿದ್ದಂತೆಯೇ ದಕ್ಷಿಣದಲ್ಲಿ ಹಿಂದಿ ಹೇರಿಕೆ ವಿರೋಧಿ ಆಂದೋಲನವೇ ಆರಂಭವಾಯಿತು. ಆ ಸಂದರ್ಭದಲ್ಲಿ ನೆಹರೂ ನಿಧನರಾದರು. ಲಾಲ್‌ಬಹದ್ದೂರ ಶಾಸ್ತ್ರಿಯವರ ಸೀಮಿತ ಆಡಳಿತದಲ್ಲಿ ಅಂಥ ಬದಲಾವಣೆಯೇನೂ ಆಗಲಿಲ್ಲ. ೧೯೬೭ರಲ್ಲಿ ಶ್ರೀಮತಿ ಇಂದಿರಾ ಗಾಂಧಿಯವರು ಒಂದು ಮಸೂದೆ ಮಂಡಿಸಿ ಅಧಿಕೃತ ಭಾಷಾ ಕಾಯ್ದೆ ಮಾಡಿ ಹಿಂದಿ ಹಾಗೂ ಇಂಗ್ಲಿಷ್ ಎರಡೂ ಭಾಷೆಗೆ ಮನ್ನಣೆ ಕೊಟ್ಟು ರಾಜ್ಯಗಳಿಗೆ ಆಯ್ಕೆ ಸ್ವಾತಂತ್ರ್ಯ ಕೊಟ್ಟು ಸಮಸ್ಯೆಗೆ ಅಂತ್ಯ ಹಾಡಿದರು. ಇಂದು ಅಧಿಕಾರಕ್ಕೆ ಬಂದಿರುವ ಬಿ.ಜೆ.ಪಿ. ಒಂದು ಕಲ್ಲಿನಿಂದ ಎರಡು ಉದ್ದೇಶ ಈಡೇರಿಸುವ ಪ್ರಯತ್ನಕ್ಕೆ ಕೈಹಾಕಿದೆ. ಒಂದನೆಯದು ಭಾಷೆಯಂಥ ಭಾವನಾತ್ಮಕ ವಿಷಯವನ್ನು ಮುನ್ನೆಲೆಗೆ ತಂದು ದೇಶದಲ್ಲಿ ಉಂಟಾದ ಆರ್ಥಿಕ ಹಿಂಜರಿತ, ಬೆಳೆಯುತ್ತಿರುವ ನಿರುದ್ಯೋಗ, ಹೆಚ್ಚುತ್ತಿರುವ ಆರ್ಥಿಕ ಅಸಮಾನತೆಗಳ ವಿರುದ್ಧದ ಆಕ್ರೋಶವನ್ನು ಮರೆಮಾಚುವುದು. ಎರಡನೆಯದಾಗಿ : ಆರ್.ಎಸ್.ಎಸ್.ನ ಕಾರ್ಯಸೂಚಿಯನ್ನು ಜಾರಿಯಲ್ಲಿಟ್ಟಿದ್ದೇವೆಂದು ನಾಗಪೂರ ಒಡೆಯರಿಗೆ ಸಂತೃಪ್ತಿಯನ್ನುಂಟುಮಾಡುವುದು.

ಭಾರತಕ್ಕೆ ಒಂದು ಸಂವಹನ ಭಾಷೆ ಬೇಕೆಂಬುದು ನಿಜ. ಆದರೆ ಇಂದು ಇವೇ ಪ್ರಭುತ್ವಗಳು ಜಾರಿಗೆ ತಂದ ಜಾಗತೀಕರಣ ಹಿಂದಿಯನ್ನೂ ಒಳಗೊಂಡು ಎಲ್ಲ ಭಾಷೆಗಳನ್ನೂ ನಾಶ ಮಾಡುತ್ತಿದೆ. ಶಿಕ್ಷಣ, ಉದ್ಯೋಗ, ಕೈಗಾರಿಕೆ, ವ್ಯಾಪಾರದಲ್ಲಿ ಇಂಗ್ಲಿಷ್ ಭಾಷೆ ಯಜಮಾನಿಕೆಯನ್ನು ಪಡೆಯುತ್ತಿದೆ. ಮಾತೃಭಾಷೆಗಳು ಅಪಾಯದಲ್ಲಿವೆ. ಇಂಥ ಸಂದರ್ಭದಲ್ಲಿ ಹಿಂದಿಯಂಥ ಭಾಷೆ ಇತರ ಭಾಷೆಗಳಿಗೆ ಒಡನಾಡಿಯಾಗಬೇಕೇ ಹೊರತು ಒಡೆತನದ ಭಾಷೆ ಯಾಗಬಾರದು. ಇಂದು ಎಲ್ಲ ಭಾರತೀಯ ಭಾಷೆಗಳು ಮಾತೃಭಾಷೆಯ ಶಿಕ್ಷಣ, ವೈಜ್ಞಾನಿಕ ಶಿಕ್ಷಣ ಎಲ್ಲ ಭಾಷೆಗಳ ಉಳಿವು – ಬೆಳವಣಿಗೆಗೆ ಪೂರಕವಾದ ಪರಸ್ಪರ ಸಹಕಾರಿ ನೀತಿಯನ್ನು ರೂಪಿಸಬೇಕೇ ಹೊರತು ರಾಜಕೀಯ, ಧಾರ್ಮಿಕ ಕಾರಣಕ್ಕೆ ಒಂದು ಭಾಷೆಯನ್ನು ಒತ್ತಾಯದಿಂದ ಹೇರಿದರೆ ದೇಶದ ಏಕತೆಗೆ ಧಕ್ಕೆ ಬರುತ್ತದೆ. ಅನ್ನ ಕೊಡುವ ಭಾಷೆ ಉಳಿದು ಬೆಳೆಯುತ್ತದೆ. ಅನ್ನ ಕೇಳುವ ಭಾಷೆ ಅಳಿಯುತ್ತದೆ. ಭಾರತದ ಎಲ್ಲ ಭಾಷಿಕರು ಅನ್ನ ಕೊಡುವ ಮಟ್ಟಕ್ಕೆ ಬೆಳೆದರೆ ಅವರ ಭಾಷೆ ಉಳಿಯುತ್ತದೆ, ಬೆಳೆಯುತ್ತದೆ. ಭಾರತದ ಆರ್ಥಿಕತೆಯನ್ನು ಬಹುರಾಷ್ಟ್ರೀಯ ಕಂಪನಿಗಳ ಲಾಭಕ್ಕೆ ಬಲಿ ಕೊಡುವ ನಮ್ಮ ಆಡಳಿತ ಪಕ್ಷ ಹಿಂದಿಯನ್ನೂ ಒಳಗೊಂಡು ಎಲ್ಲ ಭಾಷಿಕರನ್ನು ಬಡತನಕ್ಕೆ ತಳ್ಳುತ್ತಿದೆ. ಈ ಕುರಿತು ಜನಜಾಗೃತಿ ಆಗಬೇಕು. ಭಾಷೆ ಕೇವಲ ಭಾಷೆಯಲ್ಲ ಅದು ಜನರ ಜೀವ, ಬದುಕಿನ ಮೂಲಕ ಬದುಕಿದೆ.









■ ಚಂದಾ ವಿವರಗಳು

| | |
|---|---|
| ಬಿಡಿ ಸಂಚಿಕೆ | ₹ ೨೫/- |
| ವಾರ್ಷಿಕ ಚಂದಾ | ₹ ೩೦೦/- |
| ಮೂರು ವರ್ಷಕ್ಕೆ | ₹ ೬೦೦/- |

■ ನವಕರ್ನಾಟಕ ಶಾಖೆಗಳು

ಕೆಂಪೇಗೌಡ ರಸ್ತೆ
ಬೆಂಗಳೂರು – ೫೬೦ ೦೦೯
✆ : ೦೮೦-೨೨೨೦೩೧೦೬

ಕೆ. ಎಸ್. ಆರ್. ರಸ್ತೆ
ಮಂಗಳೂರು – ೫೭೫ ೦೦೧
✆ : ೦೮೨೪-೨೪೪೧೦೦೬

ಶರಾವತಿ ಕಟ್ಟಡ, ಬಲ್ಮಠ
ಮಂಗಳೂರು – ೫೭೫ ೦೦೧
✆ : ೦೮೨೪-೨೪೨೫೧೬೧

ರಾಮಸ್ವಾಮಿ ವೃತ್ತ
ಮೈಸೂರು – ೫೭೦ ೦೨೪
✆ : ೦೮೨೧-೨೪೨೪೯೪

ಸ್ಟೇಷನ್ ರಸ್ತೆ
ಕಲಬುರಗಿ – ೫೮೫ ೧೦೨
✆ : ೦೮೪೭೨-೨೨೪೩೦೨

*(೩ನೇ ಪುಟದಿಂದ : ಈ ತಿಂಗಳು)*

ಕೈಯಿಟ್ಟಂತೆಯೇ. ಅಸ್ಸಾಮ್‌ನಲ್ಲಿಯಂತೆಯೇ ಅಲ್ಪಸಂಖ್ಯಾತರೇ ಈ ಅವಾಂತರದಲ್ಲಿ ಕೈಸುಟ್ಟು ಕೊಳ್ಳುವುದು. ಭಾಜಪದ ಲೆಕ್ಕಾಚಾರ ಬೇರೆಯೇ ಇರಬೇಕು. ಒಂದೇ ರಾಷ್ಟ್ರ, ಒಂದೇ ಭಾಷೆ, ಒಂದೇ ಕಾನೂನು ಇತ್ಯಾದಿ, ಇತ್ಯಾದಿ. ಇಂಥವೆಲ್ಲ 'ಹಿಂದುತ್ವ'ದ ಅಜೆಂಡಾದ ಭಾಗ. ಅಖಂಡ ಭಾರತ ನಿರ್ಮಾಣದ ಹುನ್ನಾರಕ್ಕೆ ಮೆಟ್ಟಿಲುಗಳು. ಷಾ–ಮೋದಿ ಜೋಡಿಯ ಅಧಿಕಾರಾವಧಿಯಲ್ಲಿ ಇನ್ನೂ ಏನೇನು ಕಾದಿದೆಯೋ. ಅಂತೂ ಎರಡನೇ ಅವಧಿಯಲ್ಲಿ ಆರೆಸ್ಸೆಸ್‌ನ ಹಿಂದೂ ರಾಷ್ಟ್ರದ ಪರಿಕಲ್ಪನೆ ಗರಿಗೆದರಿಕೊಂಡಿದೆ.

ಹಿಂದಿ ಹೇರಿಕೆಯ ಬಗ್ಗೆ ಈಚೆಗೆ ಅಮಿತ್ ಷಾ ಮಾತನಾಡಿ ಮತ್ತೊಮ್ಮೆ ವಿವಾದ ಸೃಷ್ಟಿ ಮಾಡಿದ್ದಾರೆ. ಕೇಂದ್ರ ಸರಕಾರ ಮಗುಮ್ಮಾಗಿ ಹಿಂದಿ ಬಳಸುತ್ತ ಬಂದಿದೆ. ಒಂದು ಕಾಲದಲ್ಲಿ ಕಾಂಗ್ರೆಸ್ ಸರಕಾರ ಹಿಂದಿಯನ್ನು ರಾಷ್ಟ್ರಭಾಷೆಯಾಗಿ ಮಾಡುವ ಯೋಜನೆಗೆ ದಕ್ಷಿಣದ ರಾಜ್ಯಗಳಿಂದ ತೀವ್ರವಾದ ಪ್ರತಿಭಟನೆ ಬಂದಿತ್ತು. ತಮಿಳುನಾಡಿನಲ್ಲಿ ಕಾಂಗ್ರೆಸ್ ಅಧಿಕಾರವನ್ನು ಕಳೆದುಕೊಂಡಿತು. ಭಾಜಪ ಆಡಳಿತದಲ್ಲಿ ಹಿಂದಿ ಹೇರಿಕೆ ನಡೆಯುತ್ತಲೇ ಇದೆ. ಭಾಜಪದ ಎಲ್ಲ ಕಲಾಪಗಳೂ ಹಿಂದಿಯಲ್ಲಿಯೇ. ಅಂದ ಹಾಗೆ ಹಿಂದಿ ಇತರ ಭಾಷೆಗಳಿಗೆ ಹೋಲಿಸಿ ದಲ್ಲಿ ಅಂಥ ಸಿರಿವಂತ ಭಾಷೆಯೇನಲ್ಲ. ಅದು ಉತ್ತರ ಭಾರತದಲ್ಲಿ ಬಹು ಜನರ ಭಾಷೆ. ಆದರೆ ಬೇರೆ ಬೇರೆ ಪ್ರದೇಶಗಳಲ್ಲಿ ಉಪಭಾಷೆಗಳು ಚಾಲ್ತಿ ಯಲ್ಲಿವೆ. ಅಂಥದ್ದರಲ್ಲಿ ಅದನ್ನು ರಾಷ್ಟ್ರೀಯ ಭಾಷೆಯಾಗಿ ಮಾಡುವ ಚಟ ಬಿಟ್ಟರೆ ಒಳ್ಳೆಯದು. ಸಂವಿಧಾನದ ಪ್ರಕಾರ ದೇಶದಲ್ಲಿರುವ ಎಲ್ಲ ಭಾಷೆಗಳೂ ಸಮಾನ. ಸಾಹಿತ್ಯಿಕವಾಗಿ, ಸಾಂಸ್ಕೃತಿಕ ವಾಗಿ, ಐತಿಹಾಸಿಕವಾಗಿ ಎಲ್ಲ ಭಾಷೆಗಳೂ ದಷ್ಟಪುಷ್ಟವಾಗಿ ಬೆಳೆದಿವೆ. ಹಾಗಿರುವಾಗ ಹಿಂದಿ ಹೇರಿಕೆ ಯಾವ ನ್ಯಾಯ.

✶ ✶ ✶

ಉದ್ಯಮಿಗಳಿಂದ ಬ್ಯಾಂಕುಗಳ ಲೂಟಿ, ಒಂದು ಸಾವಿರ, ಐನೂರರ ನೋಟುಗಳ ಅಮಾನ್ಯೀಕರಣ, ಭಾಜಪ ಸರಕಾರದ ದಿಕ್ಕು ದಿವಾಣಿ ಇಲ್ಲದ ಆರ್ಥಿಕ ನೀತಿಯ ಪರಿಣಾಮವೇ ಇಂದು ದೇಶ ಎದುರಿಸು ತ್ತಿರುವ ಆರ್ಥಿಕದ ನಿಧಾನಗತಿಗೆ ಕಾರಣ. ಮೊದಲನೆಯ ಅಧಿಕಾರಾವಧಿಯಲ್ಲಿ ನರೇಂದ್ರ ಮೋದಿ ನೀಡಿದ್ದ ಆಶ್ವಾಸನೆಗಳೆಲ್ಲವೂ ನಿರರ್ಥಕ ವಾಗಿವೆ. ಒಂದು ಕೋಟಿ ಉದ್ಯೋಗ ಸೃಷ್ಟಿ ಹೋಗಿ ಇಂದು ನಿರುದ್ಯೋಗ ತಾಂಡವವಾಡುತ್ತಿದೆ. ವಾಹನಗಳ ತಯಾರಿಕೆಯ ಕ್ಷೇತ್ರ ತೀವ್ರವಾದ ಸಂಕಷ್ಟ ಎದುರಿಸುತ್ತಿದೆ.

ನೂತನ ಹಣಕಾಸಿನ ಸಚಿವೆ ನಿರ್ಮಲಾ ಸೀತಾರಾಮನ್ ಏನೇ ಸರ್ಕಸ್ ಮಾಡಿದರೂ ಆರ್ಥಿಕ ಕ್ಷೇತ್ರ ಚೇತರಿಸಿಕೊಳ್ಳುವ ಸ್ಥಿತಿ ಇಲ್ಲ. ಬಜೆಟ್ ಮಂಡನೆ ಮಾಡಿದ ನಂತರ, ಆರ್ಥಿಕವನ್ನು ಮೇಲೆತ್ತಲು ಕೈಗೊಂಡಿರುವ ಕ್ರಮಗಳು ಏನೇನೂ ಸಾಲದು. ರಿಸರ್ವ್‌ಬ್ಯಾಂಕ್ ಬೊಕ್ಕಸದಿಂದ ಹಣ ಪಡೆದುಕೊಂಡರೂ ಸುಧಾರಣೆಯಾಗದು. ಬ್ಯಾಂಕು ಗಳ ವಿಲೀನ ಪ್ರಕ್ರಿಯೆಯಿಂದ ಸೋರಿಕೆ ತಡೆಗಟ್ಟ ಲಾಗದು. ಅಭಿವೃದ್ಧಿಯ ಹೆಸರಿನಲ್ಲಿ ಅಧಿಕಾರಕ್ಕೇರಿದ ಮೋದಿ ಸರಕಾರ ಎದುರಿಸುತ್ತಿರುವುದು ವೈಫಲ್ಯ ಗಳನ್ನೇ. ಅಂದಹಾಗೆ ಮೋದಿ ಆಡಳಿತಾವಧಿಯಲ್ಲೇ ಉದ್ಯಮಿ ವಿಜಯ ಮಲ್ಯ, ವಜ್ರವ್ಯಾಪಾರಿ ನೀರವ್ ಮೋದಿ ಕೋಟ್ಯಂತರ ರೂಪಾಯಿಗಳನ್ನು ಬ್ಯಾಂಕುಗಳಿಗೆ ಪಂಗನಾಮ ಹಾಕಿ ಪರದೇಶಕ್ಕೆ ಪರಾರಿಯಾದ್ದು. ಇನ್ನು 'ಭಾರತದಲ್ಲೇ ತಯಾರಿಸಿ' ಯೋಜನೆ ಮೇಲೇಳಲೇ ಇಲ್ಲ. ಆರ್ಥಿಕ ಸಂಕಷ್ಟದಿಂದ ಪಾರಾಗಲು ಜನರ ಮನಗೆಲ್ಲಲು ನಿಪುಣ ರಾಜಕಾರಣಿ ಮೋದಿ–ಷಾ ಜೋಡಿ ಪಾಕಿಸ್ತಾನದತ್ತ ಬೊಟ್ಟು ಮಾಡುತ್ತಿದೆ. ಇವೆಲ್ಲ ಎಲ್ಲಿಗೆ ಮುಟ್ಟುತ್ತದೋ ನೋಡಬೇಕು.

✶ ✶ ✶

ರಾಜ್ಯದ ಹಲವು ಜಿಲ್ಲೆಗಳಲ್ಲಿ ಪ್ರವಾಹ ಪರಿಸ್ಥಿತಿ. ಎಲ್ಲ ಜಲಾಶಯಗಳೂ ಭರ್ತಿಯಾಗಿ ನೀರು ಹೊರಗೆ ಹೋಗುತ್ತಿದೆ. ಮಹಾರಾಷ್ಟ್ರದಲ್ಲಿ ಆದ ಮಳೆಯಿಂದಾಗಿ ಬೆಳಗಾವಿ, ಬಾಗಲಕೋಟೆಯ ಪ್ರದೇಶಗಳು ಜಲಾವೃತವಾಗಿವೆ. ಈ ಭಾಗದ ರೈತರ ಬೆಳೆ ಮುಳುಗಡೆಯಾಗಿ ತಲೆಮೇಲೆ ಕೈಹೊತ್ತು ಕುಳಿತಿದ್ದಾರೆ. ಉತ್ತರ ಕರ್ನಾಟಕ, ಚಿಕ್ಕಮಗಳೂರು, ಹಾಸನ, ಕೊಡಗು ಜಿಲ್ಲೆಗಳಲ್ಲಿ ಅತಿವೃಷ್ಟಿಯಾಗಿ ಅನಾಹುತವಾಗಿದೆ. ಯಡಿಯೂರಪ್ಪ ಮುಖ್ಯಮಂತ್ರಿ ಯಾಗಿ ಅಧಿಕಾರ ವಹಿಸಿಕೊಂಡ ಮೇಲೆ ಒಂದು ತಿಂಗಳು ಹೆಚ್ಚು ಕಡಿಮೆ ಏಕಚಕ್ರಾಧಿಪತಿಯೇ ಆಗಿದ್ದರು. ಸಂಪುಟ ರಚನೆಗೆ ಕೇಂದ್ರ ಭಾಜಪ ಅನುಮತಿ ದೊರೆತಿರಲಿಲ್ಲ. ಈಗ ಮೂವರು ಉಪಮುಖ್ಯಮಂತ್ರಿಗಳಾಗಿದ್ದಾರೆ. ಮುಖ್ಯಮಂತ್ರಿಗೆ ಕಡಿವಾಣ ಹಾಕಲು ಭಾಜಪ ಕೇಂದ್ರ ನಾಯಕತ್ವ ಹೇರಿರುವ ಹೊರೆ. ಸರಕಾರ ಇನ್ನೂ ಸ್ಥಿರವಾಗಿ ನೆಲೆಯೂರಿಲ್ಲ. ಅನರ್ಹ ಶಾಸಕರ ಪರಿಸ್ಥಿತಿ ಇನ್ನೂ ಇತ್ಯರ್ಥವಾಗಿಲ್ಲ. ಅಂಥದ್ದರಲ್ಲಿ ರಾಜ್ಯದಲ್ಲಿ ಪ್ರವಾಹದ ಪರಿಸ್ಥಿತಿ ಉಲ್ಬಣಿಸಿದೆ. ಆಗುವ ಅನಾಹುತವೆಲ್ಲ ಆಗಿದೆ. ಆದರೂ ಕೇಂದ್ರದಿಂದ ಬಿಡಿಕಾಸು ಬಂದಿಲ್ಲ. ಸಂತ್ರಸ್ತರು ಕಂಗಾಲಾಗಿದ್ದಾರೆ.

ಕೇಂದ್ರ ಸರಕಾರದಿಂದ ಅಧಿಕಾರಿಗಳ ತಂಡ ಪ್ರವಾಹ ಪೀಡಿತ ಪ್ರದೇಶಗಳಲ್ಲಿ ಪರ್ಯಟನೆ ಮಾಡಿ ಹಿಂದಿರುಗಿ ಸಾಕಷ್ಟು ದಿನಗಳಾದವು. ಪರಿಹಾರ ಧನ ಮಾತ್ರ ಬಂದಿಲ್ಲ. ಆರ್ಥಿಕ ಪರಿಸ್ಥಿತಿಯೇ ಗಂಡಾಂತರದಲ್ಲಿರುವಾಗ ಕೇಂದ್ರ ಸರಕಾರ ಏನು ಮಾಡೀತು? ದುರ್ಬಲ ಮುಖ್ಯಮಂತ್ರಿ ಎಂದು ಹೆಸರು ಪಡೆದಿರುವ ಯಡಿಯೂರಪ್ಪ ದೇವರ ಮೊರೆ ಹೋಗಬೇಕು ಅಷ್ಟೆ. ಅವರು ಅದನ್ನು ಬೇಕಾದಷ್ಟು ಮಾಡುತ್ತಿದ್ದಾರೆ ಕೂಡ. ಇದರಿಂದ ಪ್ರವಾಹ ಪೀಡಿತರಿಗೆ ಕಿಂಚಿತ್ತೂ ಪ್ರಯೋಜನವಾಗಿಲ್ಲ. ಬರೀ ಹೇಳಿಕೆಗಳಲ್ಲೇ ಸಚಿವರುಗಳು ಕಾಲ ದೂಡುತ್ತಿದ್ದಾರೆ. ಇದು ಭಾಜಪ ಸರಕಾರದ ಪರಿಹಾರ ನೀಡಿಕೆಯ ವೈಖರಿ; ಬರೀ ಬಡಾಯಿ. ಮೇಲಿಂದ ಕೆಳಗಿನವರೆಗೆ ಎಲ್ಲ ಭರವಸೆಗಳ ಸುರಿಮಳೆ.

✶ ✶ ✶

ನಮ್ಮ ದೇಶದ ಪ್ರಧಾನಿಯನ್ನು ಜಿ–೭ ಶೃಂಗಸಭೆಗೆ ಆಹ್ವಾನಿಸಲಾಗಿತ್ತು. ಪ್ರಧಾನಿ ಹೋಗಿಬಂದರು, ಬಹಳ ಸಂತೋಷದಿಂದ ತಮಗೆ ನೀಡಲಾದ ಆದರದ ಬಗ್ಗೆ ಸಮಾಧಾನ ವ್ಯಕ್ತಪಡಿಸಿದರು, ಭಾರತಕ್ಕೆ ಜಿ–೭ರಿಂದ ಮಾನ್ಯತೆಯು ಎಷ್ಟು ಉಪಯುಕ್ತ ಮತ್ತು ಗೌರವ ಎಂದು ಬಹಳ ಭಾವುಕರಾದರು. ಇದರಲ್ಲಿ ನಿಜಕ್ಕೂ ಗೌರವ ಮತ್ತು ಪ್ರಯೋಜನ ಇರುವುದಿಲ್ಲ. ಜಿ–೭ ನಾಯಕರಿಗೆ ಭಾರತದ ಮಾರುಕಟ್ಟೆ ಬೇಕು, ಸಾಧ್ಯ ವಾದರೆ ಕಚ್ಚಾಸಾಮಗ್ರಿಗಳನ್ನು ಅತಿ ಕಡಿಮೆ ದರಕ್ಕೆ ಪಡೆದು ಸರಕುಗಳನ್ನು ಅಂತರರಾಷ್ಟ್ರೀಯ ಮಾರುಕಟ್ಟೆಗೆ ತುಂಬಬೇಕು. ಇದು ೨೧ನೆಯ ಶತಮಾನದಲ್ಲಿ ವಸಾಹತು ನೀತಿಯು ಪಡೆದಿರುವ ಹೊಸ ರೂಪ. ಈಗಾಗಲೆ "ಭಾರತಕ್ಕೆ ನ್ಯಾಟೋ (ದುಷ್ಟ) ಕೂಟವನ್ನು ಸೇರಲು ಆಹ್ವಾನವಿದೆ" ಎಂದು ಅಮೆರಿಕಾದ ಅಧ್ಯಕ್ಷರು ಹಲವು ಬಾರಿ ಪ್ರಕಟಿಸಿದ್ದಾರೆ. ಅಂದರೆ, ಭಾರತದಲ್ಲಿ ಮಿಲಿಟರಿ ನೌಕಾನೆಲೆ ಮತ್ತು ವಾಯುನೆಲೆ ಸ್ಥಾಪಿಸಲು ಉತ್ಸುಕರಾಗಿದ್ದಾರೆ ಎಂದರ್ಥ. ದೇಶದ ಮಾನ–ಮರ್ಯಾದೆ ಇನ್ನೂ ಹರಾಜಿಗಿಟ್ಟಿಲ್ಲದಿದ್ದರೆ ಭಾರತವು ನ್ಯಾಟೋ ಸೇರುವುದೆಂದರೆ ಅದನ್ನು ಮಾಡಿದಂತಾ ಗುತ್ತದೆ. ಕಿಂಕರರನ್ನು ಓಲೈಸಲು ಈ ಜಿ–೭ರ ನಾಯಕರು ಸದಾ ಸಿದ್ಧರಿರುತ್ತಾರೆ, ಆದರೆ ನಮ್ಮ ದೇಶವು ಅವರ ಬುಟ್ಟಿಗೆ ಬೀಳಬಾರದು, ಅವರ ಶ್ಲಾಘನೆಗೆ ಮಾರುಹೋಗಬಾರದು. "ಪಂಚತಂತ್ರ"ದ ಕತೆಗಳು ನಮ್ಮ ಪ್ರಧಾನಿಯವರಿಗೆ ಪರಿಚಯವಿರ ಬಹುದು; ಇಲ್ಲದಿದ್ದರೆ ಈ ಕೂಡಲೆ ಅವನ್ನು ಪರಿಚಯಿಸಿಕೊಳ್ಳಬೇಕು. ಜಿ–೭ ಸಭೆಯ ತರುವಾಯ ದಲ್ಲಿ ಅಮೆರಿಕಾದ ಅಧ್ಯಕ್ಷ ಟ್ರಂಪ್ ನಮ್ಮ ಪ್ರಧಾನಿ ಅವರನ್ನು ಇನ್ನೊಂದು ರೀತಿ ಪುಸಲಾಯಿಸಿದ್ದು ಗಮನಾರ್ಹವಾಗಿದೆ : "ನನ್ನ ಸ್ನೇಹಿತ ಶ್ರೀ. ಮೋದಿ ಯವರಿಗೆ ಇಂಗ್ಲಿಷ್ ಚೆನ್ನಾಗಿ ಬರುತ್ತದೆ. ಅದು ನನಗೆ ಗೊತ್ತು. ಆದರೆ ಅವರು ಆ ಭಾಷೆಯಲ್ಲಿ ಮಾತನಾಡು ವುದಿಲ್ಲ." ಇದನ್ನು ನಮ್ಮ ಕೆಲವು ಪತ್ರಿಕೆಗಳು ಸಂಭ್ರಮದಿಂದ ಪ್ರಕಟಿಸಿ ಕೊಂಡಾಡಿದುವು. ಪ್ರಧಾನಿಗೆ ಇಂಗ್ಲಿಷ್ ಚೆನ್ನಾಗಿ ಬರುತ್ತದೋ, ಇಲ್ಲವೋ, ಎಂಬುದು ಪ್ರಶ್ನೆಯಲ್ಲ. ಅವರನ್ನು ಟ್ರಂಪ್ ಹೇಗೆ ಉಬ್ಬಿಸಲು ಮುಂದಾಗುತ್ತಾರೆಂಬುದು ಮುಖ್ಯ ವಿಷಯ. ಜಿ–೭ರ ನಾಯಕರು "ಪುಸಿ ಹೊಡೆಯುವುದರಲ್ಲಿ" ನಿಷ್ಣಾತರು, ಆದರೆ ನಾವು ಅವರು ತೋಡುವ ಹಳ್ಳಕ್ಕೆ ಬೀಳದಿರುವ ಬುದ್ಧಿವಂತಿಕೆ ತೋರಿಸಬೇಕು.

✶ ✶ ✶

ಅಮಿತ್ ಷಾ ನಮ್ಮ ರಾಷ್ಟ್ರದ ಐಕ್ಯತೆಯ ಬಗ್ಗೆ ಅತೀವ ಕಾಳಜಿ ಹೊಂದಿರುವಂಥವರು! ಆದ್ದರಿಂದ ಹಿಂದಿ ಎಂಬ ಒಂದು ಭಾಷೆಯನ್ನು ಇಡೀ ದೇಶಕ್ಕೆ ಕಲಿಸುವ, ಕಲಿಯದಿದ್ದರೆ ಪೀಡಿಸಿ ಹೇರುವ, ಕಾತುರದಲ್ಲಿದ್ದಾರೆ. ಅದು "ಐಕ್ಯತೆಗೆ ಪರಮಸಾಧನ"

ಎಂದಿದ್ದಾರೆ. ಆದರೆ ನಿಜಕ್ಕೂ ಅದು ದೇಶವನ್ನು ಒಡೆಯಲು ಶಕ್ತವೇ ವಿನಾ ಜೋಡಿಸುವುದಕ್ಕಲ್ಲ. ಅದೂ ನಮ್ಮ ದೇಶದ ಒಂದು ಭಾಷೆಯೇ ವಿನಾ ರಾಷ್ಟ್ರಭಾಷೆಯಲ್ಲ. ನಮ್ಮ ರಾಷ್ಟ್ರಭಾಷೆಗಳು ಸಾಕಷ್ಟಿವೆ. ಅವನ್ನೆಲ್ಲಾ ಪುಡಿಗುಟ್ಟುವುದು ಸಾಂಸ್ಕೃತಿಕ ನೀತಿಯಲ್ಲವೆಂಬುದನ್ನು ಗೃಹಸಚಿವರು ತಿಳಿಯಬೇಕು. ಅವರ ಪಕ್ಷಕ್ಕೆ ಸೇರಿದ ನಮ್ಮ ರಾಜಕೀಯ ಪುಢಾರಿಗಳು ಹುಮ್ಮಸ್ಸಿನಿಂದ ಷಾ–ಸರ್ವಜ್ಞತ್ವವನ್ನು ಶ್ಲಾಘಿಸಿದ್ದಾರೆ, ಸ್ವಾಗತಿಸಿದ್ದಾರೆ. ಅವರ ಪಕ್ಷನಿಷ್ಠೆಯನ್ನು ಮೆಚ್ಚಬೇಕಾದ್ದೇ, ಆದರೆ ನಮ್ಮ ರಾಜ್ಯದ ಇತಿಹಾಸ, ಸ್ವಂತಿಕೆ, ಘನತೆ, ಹೆಮ್ಮೆ, ಯಾವುದೂ ಅವರಿಗೆ ಮುಖ್ಯವೆನಿಸುವುದಿಲ್ಲದಿರುವುದು ಒಂದು ದುರಂತ. ಷಾ ಹೇಳಿಕೆಯನ್ನು ಟೀಕಿಸಿರುವ ಕರ್ನಾಟಕದ ಜನರು ಹೇಳಿಕೆಗಳನ್ನು ನೀಡಿ ಪ್ರತಿಭಟಿಸಿದರೆ ಸಾಲದು, ತೀವ್ರ ಹೋರಾಟ ನಡೆಸಲು ಸಿದ್ಧರಾಗಬೇಕು. ಷಾ ಅವರಂಥವರ ಅನ್ಯಾಕ್ರಮಣಶೀಲತೆಯನ್ನು ಖಂಡಿಸುವುದರೊಟ್ಟಿಗೆ "ನೀವು ಹಾಗೆ ಆಗ್ರಹಿಸಿದರೆ ನಾವು ಪ್ರತ್ಯೇಕ ದೇಶವಾಗಬೇಕಾಗುತ್ತದೆ" ಎಂಬ ಎಚ್ಚರ ನೀಡಬೇಕು. "ನಮ್ಮೊಟ್ಟಿಗಿರಬೇಕಾದರೆ ನಿಮ್ಮ ಕುತ್ಸಿತ ಭಾಷಾನೀತಿಯನ್ನು ಹೇರಲು ಮುಂದಾಗಬೇಡಿ; ನೀವು ಅದನ್ನು ಪಟ್ಟುಹಿಡಿದು ಮಾಡುವುದಾದರೆ ನಾವು ಅನ್ಯಮಾರ್ಗಗಳನ್ನು ಕಂಡುಕೊಳ್ಳುತ್ತೇವೆ, ನಿಮ್ಮೊಟ್ಟಿಗೆ ಇರದೆಯೂ ನಾವು ಜೀವಿಸಬಲ್ಲೆವು" ಎಂದು ತಿಳಿಸಬೇಕು. ದೇಶದ ಬಗೆಗಿನ ಗೌರವ ಮತ್ತು ಕಾಳಜಿ ಅವರ ಏಕಸ್ವಾಮ್ಯಕ್ಕೆ ಸೇರಿಲ್ಲ. ಬಹುತ್ವವನ್ನು ನಮ್ಮ ಸಂವಿಧಾನವು ಗೌರವಿಸಿದೆ ಮತ್ತು ಆ ನೆಲೆಯಲ್ಲಿ ನಾವು ಭಾರತ ಒಕ್ಕೂಟಕ್ಕೆ ಸೇರಿದವರು. ಭಾಷಾ ಗೂಂಡಾಗಿರಿಯನ್ನು ನಮ್ಮ ರಾಜ್ಯವು ಸಹಿಸುವಷ್ಟು ನಾವು ದೀನರಾಗುವುದು ಬೇಡ. ಕನ್ನಡ ನಾಡಿಗೆ ಹೆಮ್ಮೆಯ ಚರಿತ್ರೆಯಿದೆ, ಅದನ್ನು ಹೊಸಕಿ ಹಾಕಲು ಯಾರಿಗೂ ಅವಕಾಶ ಕೊಡದು. ಇದಕ್ಕೆ ಪೂರಕವಾಗಿ ನಮ್ಮ ರಾಜ್ಯದ ಉದ್ಯಮ, ವ್ಯಾಪಾರ, ಆಸ್ತಿಯ ಒಡೆತನ, ಉದ್ಯೋಗಾವಕಾಶ, ಮುಂತಾದುವನ್ನು ಸಹ ಬೇಕಾಬಿಟ್ಟಿ ಹೊರರಾಜ್ಯದವರಿಗೆ ಬಿಟ್ಟುಕೊಡದಿರುವುದು ಅವಶ್ಯಕ. ದೇಶದ ಎಲ್ಲರಿಗೂ ಎಲ್ಲೆಡೆ ಪ್ರವೇಶವುಂಟು, ಅದು ಸಂವಿಧಾನದತ್ತವಾದ ಹಕ್ಕು, ಆದರೆ ಆ ಹಕ್ಕು ಯಾರಿಗೂ ನಮ್ಮ ರಾಜ್ಯ ಮತ್ತು ಇಲ್ಲಿಯ ಜನತೆಯ ಮೇಲೆ ಯಜಮಾನಿಕೆಯ ಹಕ್ಕನ್ನು ನೀಡುವುದಿಲ್ಲ. ಮಾನ್ಯ ಅಮಿತ್ ಷಾ ತಮ್ಮ ಅಮಿತೋತ್ಸಾಹಕ್ಕೆ ಕಡಿವಾಣ ಹಾಕಿಕೊಳ್ಳುವುದು ಲೇಸು.

✶ ✶ ✶

ಬ್ರೆಝಿಲ್‌ನ ಅಧ್ಯಕ್ಷ ಬೋಲ್ಸನಾರೊ ಯಾವ ಮಟ್ಟಕ್ಕೆ ಕುಸಿದಿದ್ದಾನೆಂದರೆ ಅಮೆಝಾನ್ ಕಾಡಿಗೆ ಬೆಂಕಿಯಿಟ್ಟು "ದೇಶದ ಅಭಿವೃದ್ಧಿ"ಗೆ ಹಾದಿ ಮಾಡಿಕೊಡಹೊರಟಿದ್ದಾನೆ. ಅದು ಅತ್ಯಂತ ಹೇಯಕೃತ್ಯ, ಮಾನವ ಜನಾಂಗವನ್ನು ನಾಶಮಾಡುವ ಪ್ರಕ್ರಿಯೆ. ಬಂಡೀಪುರದ ಕಾಡಿನ ನಡುವೆ ಅಗಲವಾದ ಕಾಂಕ್ರೀಟ್ ರಸ್ತೆ ಮಾಡುವುದನ್ನು ಪರಮಶ್ರೇಯಸ್ಸು ಎನ್ನುವ ನಿತಿನ್ ಗಡ್ಕರಿ ಒಂದರ್ಥದಲ್ಲಿ "ಮಿನಿ–ಬೋಲ್ಸನಾರೊ" ಆಗಿಬಿಡುತ್ತಾರೆ. ಬ್ರೆಝಿಲ್‌ನ ಅಪಾರ ಸಂಪತ್ತನ್ನು ಪರಭಾರೆ ಮಾಡಲೆಂದು ಆತನನ್ನು ಅಧ್ಯಕ್ಷನನ್ನಾಗಿ ಚುನಾಯಿಸಲಾಯಿತೆ? ದೇಶದ ಜನತೆಯ ನೈಜ ನಾಯಕರನ್ನು ಜೈಲುಗಳಿಗೆ ಅಟ್ಟಿ, ಅದಕ್ಕೆ ನ್ಯಾಯಾಲಯದ ಮೊಹರು ಹಾಕಿಸಿ, ಈತ ಅಧ್ಯಕ್ಷನಾಗಿದ್ದಾನೆಂಬುದು ವಿಶ್ವಕ್ಕೆ ತಿಳಿದಿದೆ. ಬ್ರೆಝಿಲ್‌ನ ಬಿಷಪ್ (ಕ್ರೈಸ್ತಮತದ ಒಬ್ಬ ಹಿರಿಯ ಗುರುಸ್ಥಾನದಲ್ಲಿ ಇರುವವರು) ಹೆಲ್ಡರ್ ಕ್ಯಾಮರ ಕೆಲವರ್ಷಗಳ ಹಿಂದೆ ಒಂದು ಮಾತು ಹೇಳಿದ್ದರು : "ಬಡಜನರಿಗೆ ನಾನು ಆಹಾರ ಕೊಟ್ಟಾಗ ನನ್ನನ್ನು ಮಹಾನ್ ಸಾಧುವೆಂದು ಶ್ಲಾಘಿಸುತ್ತಾರೆ. ನಾನು ಅವರನ್ನು ಕೆಲವೇಳೆ ಕೇಳುತ್ತೇನೆ, 'ನಿಮಗೇಕೆ ಆಹಾರ ದೊರೆಯುತ್ತಿಲ್ಲ?' ಎಂದು. ತಕ್ಷಣ ಅವರು ನನ್ನನ್ನು ಕಮ್ಯುನಿಸ್ಟ್ ಎಂದು ಕರೆದುಬಿಡುತ್ತಾರೆ. ಅಂದರೆ, ಸೌಹಾರ್ದತೆ ಸಮಾನರಲ್ಲಿ ಸಾಧ್ಯ; ಆದರೆ ಕೊಡುಗೈ ದಾನವೆಂಬುದು ತೆಗೆದುಕೊಳ್ಳುವವನನ್ನು ಹಂಗಿಸುತ್ತದೆ, ಕೊಡುವವನನ್ನು ಅಟ್ಟಕ್ಕೇರಿಸುತ್ತದೆ. ಅಧಿಕಾರದ ಸಂಬಂಧಗಳನ್ನು ಪ್ರಶ್ನಿಸದಿರುವುದು ದಾನದ ಒಂದು ಲಕ್ಷಣ."

ಇದನ್ನು ಆಳವಾಗಿ ಪರಾಮರ್ಶಿಸಿಕೊಳ್ಳುವ ಅಗತ್ಯವಿದೆ. ನಮ್ಮ ರಾಜ್ಯದ ಪ್ರವಾಹ ಪೀಡಿತ ಪ್ರದೇಶಗಳಲ್ಲಿ ಅನೇಕರಿಗೆ ಇಂತಹ ಪೇಚನ್ನು ಎದುರಿಸುವ ತುರ್ತು ಬಂದಿದೆ. ಅವರಿಗೆ ಅಂಗಲಾಚಿ ಕೇಳುವ (ಅಥವಾ ಬೇಡುವ) ಪರಿಸ್ಥಿತಿ ಬರಬಾರದಿತ್ತು. ನಮಗೆ ಸ್ವಲ್ಪ ಹೃದಯವಂತಿಕೆ ಇದ್ದಿದ್ದರೆ ಅವರ ಇರವು ಇಷ್ಟು ದಯನೀಯವಾಗಿರುತ್ತಿರಲಿಲ್ಲ. ದೆಹಲಿಯ ಮಹಾಮಹಿಮರು ವಿಮಾನದಲ್ಲಿ ಬರುತ್ತಾರೆ, ಹೆಲಿಕಾಪ್ಟರುಗಳಲ್ಲಿ ಅಡ್ಡಾಡುತ್ತಾರೆ, ನಾಲ್ಕು ಛಾಯಾಚಿತ್ರ ತೆಗೆಸಿಕೊಳ್ಳುತ್ತಾರೆ, ಅಹಂಕಾರದ ಎರಡು ಮಾತು ಹೇಳುತ್ತಾರೆ, ವಿಹಾರಕ್ಕೆ ಬಂದಿದ್ದವರಂತೆ ಮಹಾನಗರಕ್ಕೆ ಹಿಂದಿರುಗುತ್ತಾರೆ. ಸಂತ್ರಸ್ತ ಜನರಿಗೆ ತಮಗೇಕೆ ಇಂತಹ ವಿಷಮ ಗಳಿಗೆಗಳು ಮುತ್ತಿಕೊಂಡುವೆಂದು ತಿಳಿಯುವುದಿಲ್ಲ, ವರುಣನ ಆರ್ಭಟವೆಂದು ಮರುಕಪಟ್ಟುಕೊಳ್ಳುತ್ತಾರೆ, ಸಾಂತ್ವನ ಹೇಳಿಕೊಳ್ಳುತ್ತಾರೆ. ಅನೇಕ ಕರುಣಾಳುಗಳು ತಮ್ಮ ಕೈಲಾದಷ್ಟು ಸಹಾಯಹಸ್ತ ನೀಡುತ್ತಾರೆ, ಆದರೆ ದೆಹಲಿಯ ಕಲ್ಲಿದ್ದಲು ತಲೆಗಳು ಕಲ್ಲಾಗಿಯೇ ಉಳಿಯುತ್ತವೆ. ಹೀಗಾಯಿತಲ್ಲಾ ಎಂಬ ದನಿ ಹೊರಡುತ್ತದೆ. ಆದರೆ ದೆಹಲಿ ಏಕೆ ಸ್ಪಂದಿಸಲಿಲ್ಲವೆಂಬುದು ಒಗಟಾಗಿಯೇ ಉಳಿಯುತ್ತದೆ. ಕಂಬಳಿ, ಔಷಧಿ, ಪಂಚೆ–ಸೀರೆ ಪಡೆದಾಗ ಸಂತ್ರಸ್ತರು ಮನಸಾ ವಂದನೆ ಸಲ್ಲಿಸುತ್ತಾರೆ, ಆದರೆ "ಏಕೆ ತಮ್ಮ ಹಕ್ಕಿನ ಪಾಲನ್ನು ತಮಗೆ ತಲುಪಿಸಲಾಗಲಿಲ್ಲ"ವೆಂಬ ಪ್ರಶ್ನೆ ಎತ್ತಿದ್ದರೆ ಅವರು ಕಮ್ಯುನಿಸ್ಟರಾಗಿಬಿಡುತ್ತಿದ್ದರೋ ಏನೋ. ಕೊಟ್ಟವರು ದಯಾಮಯಿಗಳು, ತೆಗೆದುಕೊಂಡವರು ನಿರ್ಗತಿಕರು, ಪರ್ಯಾಯವಿಲ್ಲದಿದ್ದವರು ಎಂದಾಗಿ ಬಿಡುತ್ತದೆ. ಅವರ ಹಕ್ಕನ್ನು ನಿರ್ದಾಕ್ಷಿಣ್ಯವಾಗಿ ಸ್ಥಾಪಿಸಿಕೊಳ್ಳುವ ವಿಧಾನ ಕರಗತವಾಗದಿದ್ದುದು ಶೋಚನೀಯ. ನಮ್ಮ ಜನರನ್ನು ಇಂತಹ ದುಸ್ಸಹ ಅವಸ್ಥೆಗೆ ದೂಡಿದೆ ವಲ್ಲ ಎಂಬ ರೋಷ ಪ್ರಕಟವಾಗುವುದಿಲ್ಲ. ಬ್ರೆಝಿಲ್‌ನ ಬಿಷಪ್ ಹೇಳುವಂತೆ "ಅಧಿಕಾರದ ಸಂಬಂಧ" ಚರ್ಚೆಗೆ ಬರಲಿಲ್ಲ, ಕಲ್ಲುಮನಸ್ಸುಗಳಿಗೆ ಅಧಿಕಾರವನ್ನು ಕೊಡುತ್ತಲೇ ಬಂದಿದ್ದೇವೆ. "ಇವ ನಮ್ಮವ ಎನ್ನಿರಯ್ಯಾ" ಎಂಬ ವಚನ ನುಡಿದು ಸಂತೃಪ್ತಿ ಹೊಂದುವುದು ಸರಿಯೆ? "ನಾನು ನಿಜಕ್ಕೂ ಅವರವನು" ಎಂಬ ಭಾವ ಮೂಡಿಸಲು ವೈಜ್ಞಾನಿಕ ಸಮಾಜವಾದಿ ಪ್ರಜ್ಞೆಯೊಂದೇ ಸಶಕ್ತವಾದುದೆಂದು ಬಿಷಪ್ ಅರಿತುಕೊಳ್ಳುತ್ತಾನೆ, ನಮ್ಮ ರಾಜಕೀಯ ವ್ಯವಸ್ಥೆ ಅದಕ್ಕೆ ಹಿಮ್ಮುಖವಾಗಿದೆ. ಇನ್ನೆಷ್ಟು ಕಾಲ ಹೀಗೆ "ರಾಮ, ರಾಮ" ಎಂಬ ದೈನ್ಯದಲ್ಲಿ ಬಾಳಬೇಕು? "ಹೆಲಿಕಾಪ್ಟರ್ ಹಾರಾಟ ನಿಲ್ಲಿಸಿ, ನಮ್ಮ ಹಕ್ಕಿನ ಪರಿಹಾರ ನಮಗೆ ತಲುಪಿಸಿ" ಎಂದು ಒಕ್ಕೊರಲಿನಿಂದ ಕೂಗಿದಾಗ ಅಧಿಕಾರದ ಸಂಬಂಧಗಳ ವಿವೇಚನೆ ಆರಂಭವಾಗುತ್ತದೆ.

✶ ✶ ✶

"ಪವಿತ್ರ ಆರ್ಥಿಕತೆ" ಎಂಬ ಚಳುವಳಿ ಮೈದಾಳುತ್ತಿದೆ. ಅದು ಅಗತ್ಯವೆಂಬ ತಿಳಿವಿಗೆ ಹಿನ್ನೆಲೆ ನಮ್ಮ ಜಾಗತೀಕರಣ, ಯಂತ್ರ ಸಾಧನೆ ಮತ್ತು ಅವುಗಳ ಮೂಲಕವೇ ಮೋಕ್ಷವೆಂಬ ಶ್ರುತವಾಕ್ಯ. ಎದುವಾರ್ದೊ ಗಲಿಯಾನೋ ಅದನ್ನು ಮಾರ್ಮಿಕವಾಗಿ ಸೂಚಿಸುವ ರೂಪಕ ರೂಪದ ಎರಡು ಪ್ರಸಂಗಗಳನ್ನು ಅವನ ತಲೆಕೆಳಗು ಎಂಬ ಪುಸ್ತಕದಿಂದ ಆಯ್ದುಕೊಳ್ಳಲಾಗಿದೆ :

(ಅ) *ಚರ–ದೂರವಾಣಿ*

ಈಚಿನ ದಿನಗಳಲ್ಲಿ ಮೊಬೈಲ್ ಎಷ್ಟೋ ಮಂದಿಗೆ ದೇಹದ ಒಂದು ಭಾಗವಾಗಿಹೋಗಿದೆ. ಎರಡು ಹೆಬ್ಬೆರಳುಗಳಿಗೆ ವಿರಾಮವೇ ಇಲ್ಲ. ದೂರದರ್ಶನದಲ್ಲಿ ಸೀರಿಯಲ್‌ಗಳ ಸಂಭಾಷಣೆ ಶೇಕಡ ಐವತ್ತರಷ್ಟು ಇದರಲ್ಲೇ ನಡೆದುಹೋಗುತ್ತದೆ. ಅರ್ಜೆಂಟೈನಾದಲ್ಲಿ ಈ ಕಾಯಿಲೆ ಇಪ್ಪತ್ತು ವರ್ಷಗಳ ಹಿಂದೆಯೇ ಅಂಟಿತ್ತಂತೆ. ಮೊಬೈಲ್ ಇಲ್ಲದವರು ಸಮಾಜದಲ್ಲಿ ಕೀಳು ಎಂಬ ಭಾವನೆಯಿಂದಾಗಿ ತೋರಿಕೆಗಾದರೂ ಅದನ್ನು ಪ್ರದರ್ಶಿಸುತ್ತಿದ್ದರು. ೧೯೮ರ ಒಂದು ವರದಿ ಹೀಗಿದೆ : ಬೋನಸ್ಐರಿಸ್‌ನ ಕೇಂದ್ರ ವಲಯದಲ್ಲಿ ಒಬ್ಬ ಪಾದಚಾರಿ ನಗರ ಸಂಚಾರಿ ಬಸ್ ಕೆಳಗೆ ಸಿಕ್ಕಿ ಮೃತನಾದ. ಅವನು ಸೆಲ್ ಫೋನಿನಲ್ಲಿ ಮಾತನಾಡುತ್ತಾ ರಸ್ತೆಯನ್ನು ದಾಟುತ್ತಿದ್ದ. ಅದಿನ್ನಾರೊಡನೆ ಸಂಭಾಷಿಸುತ್ತಿದ್ದನೋ! ನಂತರ ತಿಳಿದುಬಂತು, ಅವನು ಮಾತನಾಡುತ್ತಿದ್ದಂತೆ ನಟಿಸುತ್ತಿದ್ದ; ಅವನ ಬಳಿ ಇದ್ದ ಮೊಬೈಲ್ ಆಟಿಕೆಯ ಸಾಮಾನು, ಎಂದು.

(ಆ) ಆಡಂಬರದ ಹುಚ್ಚು

ಇದು ಮಾಸ್ಕೋದಲ್ಲಿ ಘಟಿಸಿದ್ದೆನ್ನಲಾಗಿದೆ : ನಗರದ ಹೊರವಲಯದಲ್ಲಿ ಒಂದು ಕಾರಿನ ಅಪಘಾತವಾಯಿತು. ಚಾಲಕ ಹೇಗೋ ಬದುಕುಳಿದ, ನಿಧಾನವಾಗಿ ಮಗುಚಿಕೊಂಡಿದ್ದ ಕಾರಿನಿಂದ ಹೊರಬಂದ. "ಅಯ್ಯೋ, ನನ್ನ ಮರ್ಸಿಡಿಸ್, ನನ್ನ ಮರ್ಸಿಡಿಸ್" ಎಂದು ಅರಚುತ್ತಿದ್ದ. ಅಲ್ಲೇ ನಡೆದುಹೋಗುತ್ತಿದ್ದವನೊಬ್ಬ ಸಹಾಯ ಮಾಡಲು ಬಂದು ಚೀರಿದ : "ಅಯ್ಯಾ, ನಿನ್ನ ಕಾರು ಹಾಳಾಗಲಿ, ನೋಡಿಕೋ ನಿನ್ನ ಕೈಯ್ಯನ್ನು; ಅದು ಕತ್ತರಿಸಿ ಹೋಗಿದೆಯಲ್ಲ!" ನೋಡಿಕೊಂಡ, ಕೈಯ್ಯೇ ಇಲ್ಲ. ಚೀರುವುದೀಗ ಅವನ ಸರದಿ : "ಅಯ್ಯೋ, ನನ್ನ ರೋಲೆಕ್ಸ್, ನನ್ನ ರೋಲೆಕ್ಸ್ !"

ಸರಕುಗಳ ವ್ಯಾಮೋಹ ಮತ್ತು ಆರಾಧನೆಯೆಂದರೆ ಇದಲ್ಲವೆ?




## "ಹಸಿರು ಭೂಮಿ ಪ್ರತಿಷ್ಠಾನ"

✉ ಸೆಪ್ಟೆಂಬರ್ ೨೦೧೯ರ 'ಹೊಸತು'ವಿನಲ್ಲಿ ಪ್ರಕಟವಾಗಿರುವ ಶ್ರೀಮತಿ ರೂಪ ಹಾಸನ ಅವರ 'ಮನಸ್ಸಿದ್ದರೆ ನೀರ ನೆಮ್ಮದಿ' ಲೇಖನ ಓದುಗರನ್ನು ಹೊಸ ಆಲೋಚನೆಗೆ ತೊಡಗಿಸುವಂಥದು. ಇಂದು ನೀರಿನ ಸಮಸ್ಯೆ ಒಂದು ಊರಿನ ಸಮಸ್ಯೆಯಲ್ಲ, ಅದು ಜಾಗತಿಕ ಸಮಸ್ಯೆ. ಈ ಸಮಸ್ಯೆಗೆ ಪರಿಹಾರ ಮಳೆ ಎಂಬುದು ನಿಜವಾದರೂ, ಮಳೆ ನಮ್ಮ ಕೈಯಲ್ಲಿಲ್ಲ. ಮಳೆಗಾಗಿ ಪ್ರಾರ್ಥಿಸಿ ಕತ್ತೆ ಮದುವೆ, ಕಪ್ಪೆ ಮದುವೆ, ಕೋತಿ ಮದುವೆ, ನಾಯಿ ಮದುವೆ ಮಾಡಿದರೆ ಮತ್ತು ಜಪ–ತಪ, ಯಜ್ಞ–ಯಾಗಗಳನ್ನು ಮಾಡಿದರೆ ಮಳೆ ಬರುವುದಿಲ್ಲ. ಮಳೆ ಬಂದಾಗ ನೀರನ್ನು ವ್ಯವಸ್ಥಿತವಾಗಿ ಸಂಗ್ರಹಿಸುವ ಮತ್ತು ಹಿಡಿದಿಡುವ ಕೆಲಸವನ್ನು ನಾವು ಮಾಡಬೇಕು. 'ಈ ಕೆಲಸಕ್ಕೆ ಸರ್ಕಾರವನ್ನು ನೆಚ್ಚಿಕೊಂಡರೆ ಪ್ರಯೋಜನ ಇಲ್ಲ. ಈ ಕುರಿತು ಸರ್ಕಾರಕ್ಕೆ ಒತ್ತಡ ಹಾಕುತ್ತಲೇ ಜನರು ಸಾಮೂಹಿಕ ನೆಲೆಯಲ್ಲಿ ಕಾರ್ಯೋನ್ಮುಖ ರಾಗಬೇಕು' ಎಂದು ಲೇಖಕರು ಹೇಳಿದ್ದಾರೆ. ಈ ಸಂಬಂಧ ಹಾಸನದ ಜನ, ಹಾಸನದಲ್ಲಿ "ಹಸಿರು ಭೂಮಿ ಪ್ರತಿಷ್ಠಾನ" ಸ್ಥಾಪಿಸಿಕೊಂಡು ಹಾಸನ ಜಿಲ್ಲೆ ಯಾದ್ಯಂತ, ಬತ್ತಿ ಬರಿದಾಗಿದ್ದ, ಹೂಳು ತುಂಬಿದ್ದ ಕೆರೆ ಮತ್ತು ಕಲ್ಯಾಣಿಗಳನ್ನು ಪುನಶ್ಚೇತನಗೊಳಿಸಿ ಸ್ತುತ್ಯರ್ಹರಾಗಿದ್ದಾರೆ, ನೆರೆಯ ಜಿಲ್ಲೆಗಳಿಗೆ ಮಾದರಿ ಯಾಗಿದ್ದಾರೆ. ನೀರು ಕೇವಲ ಮನುಷ್ಯನಿಗಷ್ಟೇ ಅಲ್ಲ, ಮರ, ಗಿಡ, ಬಳ್ಳಿ, ಪ್ರಾಣಿ ಪಕ್ಷಿಗಳು, ಹುಳು–ಹುಪ್ಪಟೆ, ಕಪ್ಪೆ, ಹಾವು, ಮೀನು ಮುಂತಾದ ಸಕಲಜೀವಿಗಳಿಗೂ ಅಗತ್ಯ ಎಂಬ ಎಚ್ಚರದ ಜೊತೆಗೆ, ಅವುಗಳಿಗೆ ನೀರು ಲಭ್ಯವಾಗುವಂತೆ ನೋಡಿಕೊಳ್ಳಬೇಕಾದ ಜವಾಬ್ದಾರಿ ನಮ್ಮ ಮೇಲಿದೆ ಎಂಬ ತಿಳುವಳಿಕೆಯೂ ನಮಗೆ ಇರಬೇಕು. ಗ್ರಾಮಾಂತರ ಪ್ರದೇಶದ ಯಾವುದೇ ಊರಿಗೆ ಹೋದರೂ ಬತ್ತಿ, ಹೂಳು ತುಂಬಿ, ಮುಳ್ಳುಗಿಡ ಬೆಳೆದ ಕೆರೆ, ಕಲ್ಯಾಣಿಗಳೇ ಕಣ್ಣಿಗೆ ರಾಚುತ್ತವೆ. ಇಂಥ ಗ್ರಾಮಾಂತರ ಪ್ರದೇಶದ ಜನರಿಗೆ ಹಾಸನದ "ಹಸಿರು ಭೂಮಿ ಪ್ರತಿಷ್ಠಾನ" ಪ್ರೇರಣೆ, ಪ್ರಭಾವ ಬೀರಬಲ್ಲದು ಎಂಬುದು ನನ್ನ ದೃಢ ನಂಬಿಕೆ. ಸದ್ದಿಲ್ಲದೆ ನಡೆಯುತ್ತಿರುವ ಇಂಥ ಜನೋಪಯೋಗಿ ಯೋಜನೆ ಕುರಿತು ಲೇಖನ ಬರೆದ ಲೇಖಕರಿಗೆ ಮತ್ತು ಅದನ್ನು ಪ್ರಕಟಿಸಿದ 'ಹೊಸತು' ಪತ್ರಿಕೆಯ ಬಳಗಕ್ಕೆ ವಂದನೆಗಳು.

*ಬೆಂಗಳೂರು* **ಸಿ. ಚಿಕ್ಕತಿಮ್ಮಯ್ಯ ಹಂದನಕೆರೆ**

## ಟಿಪ್ಪುಯುಗದ ಆಡಳಿತ, ಕೃಷಿ ಮತ್ತು ಉದ್ಯಮ

ಈ ಲೇಖನದಲ್ಲಿ ಲೇಖಕರಾದ ಡಾ. ಎನ್. ಜಗದೀಶ್ ಕೊಪ್ಪ ಅವರು ಟಿಪ್ಪು ಸುಲ್ತಾನನ ಕುರಿತು ಒಂದು ಸಮಗ್ರ ಮಾಹಿತಿಯನ್ನು ನೀಡಿದ್ದಾರೆ. ಇಲ್ಲಿ ಲೇಖಕರು ದಾಖಲಿಸಿರುವ ಎಲ್ಲ ಸಂಗತಿಗಳೂ ನಿಜ ಸಂಗತಿಗಳೇ ಎನ್ನುವುದರಲ್ಲಿ ಅನುಮಾನವಿಲ್ಲ. ಟಿಪ್ಪು ಒಬ್ಬ ಅಪ್ರತಿಮ ಸ್ವಾತಂತ್ರ್ಯ ಹೋರಾಟಗಾರ, ಅಭಿವೃದ್ಧಿಯ ಹರಿಕಾರ, ಕೃಷಿ ಕ್ಷೇತ್ರದಲ್ಲಿ ಹೊಸ ಪ್ರಯೋಗಗಳನ್ನು ಮಾಡಿ ರೈತರಿಗೆ ಅನುಕೂಲ ಮಾಡಿದ, ವಾಣಿಜ್ಯ ಬೆಳೆ ಬೆಳೆಯಲು ರೈತರಿಗೆ ಪ್ರೋತ್ಸಾಹಿಸಿದ, ಕೃಷ್ಣರಾಜ ಸಾಗರ ಅಣೆಕಟ್ಟನ್ನು ನಿರ್ಮಿಸುವ ಕನಸು ಕಂಡು ಅದರ ಶಿಲಾನ್ಯಾಸ ನೆರವೇರಿಸಿದ, ರೇಷ್ಮೆ ಅಭಿವೃದ್ಧಿ ಕೇಂದ್ರಗಳನ್ನು




ಸ್ಥಾಪಿಸಿದ, ಸಕ್ಕರೆ ಘಟಕಗಳನ್ನು ಸ್ಥಾಪಿಸಿದ, ಪಾನ ನಿಷೇಧವನ್ನು ಕಟ್ಟುನಿಟ್ಟಾಗಿ ಜಾರಿಗೆ ತಂದ. ಇಂತಹ ಸಮಾಜಮುಖಿ ಕಾರ್ಯಕ್ರಮಗಳನ್ನು ಕೈಗೊಂಡ ಮಹಾನ್ ವ್ಯಕ್ತಿ ಟಿಪ್ಪು ಎಂದು ಲೇಖಕರು ಪಟ್ಟಿ ಮಾಡುತ್ತಾರೆ. ಆದರೆ ಲೇಖಕರು ಟಿಪ್ಪುವಿನ ಕುರಿತು ಒಳ್ಳೆಯ ಸಂಗತಿಗಳನ್ನು ಮಾತ್ರ ಹೇಳುತ್ತಾರೆ. ಅಂದರೆ ಈ ಲೇಖನ ಏಕಪಕ್ಷೀಯ ನೆಲೆಯಲ್ಲಿ ಸಾಗುತ್ತದೆ. ಟಿಪ್ಪುವಿನ ಕುರಿತು ಲೇಖಕರು ಹೇಳದೆ ಬಿಟ್ಟಿರುವ ಅನೇಕ ಅಪ್ರಿಯ ಸತ್ಯ ಸಂಗತಿಗಳನ್ನು ಹೇಳಿದಾಗಲೇ ಟಿಪ್ಪುವಿನ ನಿಜವಾದ ವ್ಯಕ್ತಿತ್ವ ಅನಾವರಣವಾಗುವುದು. ಯಾವುದೇ ವ್ಯಕ್ತಿ ಸರ್ವಗುಣ ಸಂಪನ್ನನಾಗಿರುವುದಕ್ಕೆ ಸಾಧ್ಯವಿಲ್ಲ. ಅವನು ಒಳಿತು ಕೆಡುಕುಗಳ ಸಂಗಮ. ಒಬ್ಬ ವ್ಯಕ್ತಿಯ ಕುರಿತು ಬರೀ ಕೆಡುಕುಗಳನ್ನು ಹೇಳುವುದು ಎಷ್ಟು ಅಪಾಯಕಾರಿಯೋ, ಹಾಗೆಯೇ ಬರೀ ಒಳ್ಳೆಯ ಸಂಗತಿಗಳನ್ನು ಹೇಳುವುದೂ ಅಷ್ಟೇ ಅಪಾಯಕಾರಿ. ಡಾ. ಶಿವರಾಮ ಕಾರಂತರು ಒಂದು ಕಡೆ "ಚರಿತ್ರೆ ಪೂರ್ವಕಾಲದ ಬದುಕನ್ನು ಕುರಿತ ಕನ್ನಡಿಯಾಗ ಬೇಕು. ಐತಿಹಾಸಿಕ ಯುಗದ ಯಾವತ್ತೂ ಸಾಧನೆಗಳು, ಮೂರ್ಖತನಗಳು, ಅನ್ಯಾಯಗಳು, ಒಳಿತು–ಕೆಡುಕುಗಳು ಚರಿತ್ರೆಯಲ್ಲಿ ಕಂಡುಬರಲೇ ಬೇಕು. ಚರಿತ್ರೆಯನ್ನು ವಂಚಿಸುವ ಲೇಖಕರು ಜನರನ್ನು ಮುಂದೆಯೂ ವಂಚಿಸುತ್ತಾರೆ" ಎಂದು ಹೇಳುತ್ತಾರೆ.

ಲೇಖಕರು ತಮ್ಮ ಲೇಖನದಲ್ಲಿ "ಮೈಸೂರು ಅಥವಾ ಮಂಡ್ಯ ಜಿಲ್ಲೆಯ ಸೀಮೆಯಲ್ಲಿ ಟಿಪ್ಪು ಕುರಿತಂತೆ ಈವರೆಗೆ ಒಂದೇ ಒಂದು ಅಪಸ್ವರವನ್ನು ಕೇಳಿಲ್ಲ. ಟಿಪ್ಪು ಸೆರೆಹಿಡಿದು ತಂದು ಬಲಾತ್ಕಾರವಾಗಿ ಮತಾಂತರಿಸಿದ ಎಂದು ಹೇಳುವ ಒಂದೇ ಒಂದು ಜೀವ ಅಥವಾ ಸಮುದಾಯ ಈವರೆಗೆ ನನ್ನ ಕಣ್ಣಿಗೆ ಬಿದ್ದಿಲ್ಲ" ಎಂದು ಹೇಳುವ ಮಾತು ಚರಿತ್ರೆಗೆ ಮಾಡುವ ಅಪಚಾರ. ಟಿಪ್ಪು ತಮ್ಮ ಜಿಲ್ಲೆಯವನು ಎಂಬ ಕಾರಣಕ್ಕೆ ಇಲ್ಲದ ಸದ್ಗುಣಗಳನ್ನು ಅವನಿಗೆ ಆರೋಪಿಸುವುದಾಗಲೀ ಅಥವಾ ಅವನು ಅನ್ಯಧರ್ಮೀಯ ಎನ್ನುವ ಕಾರಣಕ್ಕೆ ಇಲ್ಲ ಸಲ್ಲದ ಅಕೃತ್ಯಗಳನ್ನು ಅವನ ತಲೆಗೆ ಕಟ್ಟುವುದಾಗಲೀ ಸರಿಯಲ್ಲ. ಈ ನನ್ನ ಅಭಿಪ್ರಾಯಕ್ಕೆ ಸಮರ್ಥನೆ ಯಾಗಿ ಹಲವು ವಿದ್ವಾಂಸರ ಹೇಳಿಕೆಗಳನ್ನು ಉದ್ಧರಿಸಲು ಸಾಧ್ಯವಿದೆ.

*ಬೆಂಗಳೂರು* **ಎನ್. ಕರುಪ್ಪಯ್ಯನ್**

ಸೆಪ್ಟೆಂಬರ್ ತಿಂಗಳ ಹೊಸತು ಸಮಯೋಚಿತ ಮಾಹಿತಿ ಹೊತ್ತು ತಂದಿದೆ. ಈ ತಿಂಗಳು ತುಂಬ ಅರ್ಥಪೂರ್ಣವಾಗಿ ಮೂಡಿಬಂದಿರುವುದು ಖುಷಿ ವಿಷಯ. ಇದನ್ನು ಓದುತ್ತಾ ಓದುತ್ತಾ ಹಲವಾರು ವಿಚಾರ ತಿಳಿದಂತೆ ಆಯಿತು. ಸಂಪಾದಕೀಯದಲ್ಲಿ ಕಾಶ್ಮೀರದ ಸಂಪೂರ್ಣ ಮಾಹಿತಿ ಒದಗಿಸಿದೆ. ಹತಾಶೆ ಮೂಡಿಸುವ ಹೊಸ ಶಿಕ್ಷಣ ನೀತಿಯಲ್ಲಿ ಇಂದಿನ ಶಿಕ್ಷಣದ ವ್ಯವಸ್ಥೆಯ ಆಗುಹೋಗುಗಳ ಮಾಹಿತಿಯಂತೂ ಶ್ಲಾಘನೀಯ. 'ಮನಸ್ಸಿದ್ದರೆ ನೀರ ನೆಮ್ಮದಿ' ನಿಜವಾಗಿಯೂ ಮೆಚ್ಚುವಂತಹದು. ಸರ್ಕಾರಗಳಿಂದ ಏನೂ ಪ್ರಯೋಜನ ಇಲ್ಲವೆಂದು ತಿಳಿದ ಜನರು ತಾವೇ ಖುದ್ದಾಗಿ ಅವಿರತ ಶ್ರಮದಿಂದ ಹಸಿರು ಭೂಮಿ ಪ್ರತಿಷ್ಠಾನ ತಂಡ ಮಾಡಿಕೊಂಡು ನೀರ ನೆಮ್ಮದಿ ಪಡೆಯುವ ವೈಖರಿ ಮೆಚ್ಚುವಂತಹದು. 'ನಾನು ರೈತನಾದೇ' ಓದಿದಾಗ ಸಹಾಯವಿಲ್ಲದೆ ಬೇಸಾಯ ತುಂಬ ಕಷ್ಟ ಎಂಬ ವಿಚಾರ ಮನದಟ್ಟು ಆಗುತ್ತದೆ. ಕೆ. ಪಿ. ಸ್ವಾಮಿ ಅವರ ನಿಧನ ಕಂಬನಿ ತರಿಸಿತು. 'ಮಂಗಳಮುಖಿಗೆ ಅಮಂಗಳ ಬೇಡ' ವಿಚಾರ ಎಲ್ಲರೂ ಅರಿಯ ಬೇಕಾದ ವಿಚಾರ. ಬೆಂಗಳೂರು ಅಂಗಡಿಗಳಲ್ಲಿ ಈಗಲೂ ಬೆಳಿಗ್ಗೆ ಮಂಗಳಮುಖಿಯರಿಗೆ ಹಣ ಕೊಟ್ಟರೆ ವ್ಯಾಪಾರ ಚೆನ್ನಾಗಿ ಆಗುತ್ತೆ ಎಂಬ ವಿಚಾರವನ್ನು ತಿಳಿದಿದ್ದೆ. ನಂಬಿಕೆಯೇ ದೇವರು. ಟಿಪ್ಪು ಯುಗದ ಆಡಳಿತ ಕೃಷಿ ಮತ್ತು ಉದ್ಯಮ ವಿಚಾರ ಓದಿ ಖುಷಿ ಆಯಿತು. ಟಿಪ್ಪುವಿನ ಬಗ್ಗೆ ಇದ್ದ ಕೆಟ್ಟ ಅಭಿಪ್ರಾಯಗಳು ದೂರವಾದವು. ಒಟ್ಟಿನಲ್ಲಿ ಹೊಸತು ಉತ್ತಮ ಮಾಹಿತಿ ನೀಡಿದ್ದು ಇದಕ್ಕಾಗಿ ಅಭಿನಂದನೆಗಳು.

*ಪಾಂಡವಪುರ (ಮಂಡ್ಯ)* **ಅ. ಮೃತ್ಯುಂಜಯ**

# ಗಾಂಧೀಜಿ ಹೀಗೂ ಇದ್ದರು

**ಜಿ. ರಾಮಕೃಷ್ಣ**

ಭಾರತದಲ್ಲಿ ಸ್ವಾತಂತ್ರ್ಯ ಚಳುವಳಿಯ ಶಿಸ್ತಿನ ಸಿಪಾಯಿಯಾಗಿದ್ದ ನೇತಾಜಿ ಎಂದೂ ಅನ್ಯಾಕ್ರಮಣಶೀಲತೆಯನ್ನಾಗಲಿ, ಜನಾಂಗೀಯ ದ್ವೇಷವನ್ನಾಗಲಿ ಪ್ರದರ್ಶಿಸಿದ್ದವರಲ್ಲ. ಆಮರಣಾಂತ ಉಪವಾಸ ಮಾಡಿ ಕಾರಾಗೃಹದಲ್ಲೇ ಮಡಿದ ವೀರ ಜತಿನ್ ದಾಸ್‌ನ ಶವವನ್ನು ದೆಹಲಿಯಿಂದ ಕಲ್ಕತ್ತೆಗೆ ತರಲು ಸ್ವತಃ ದೆಹಲಿಗೆ ತೆರಳಿದ್ದವರು ನೇತಾಜಿ, ಶವವನ್ನು ಒಂದು ವಿಶೇಷ ರೈಲಿನಲ್ಲಿ ಸಾಗಿಸಿಕೊಂಡು ಬಂದವರು ನೇತಾಜಿ. ಅವರು ತೀವ್ರ ಎಡಪಂಥೀಯ ಆಗಲು ಸಾಧ್ಯವಿತ್ತು, ಫ್ಯಾಸಿಸ್ಟ್ ಆಗುವ ಸೂಚನೆ ಸುತರಾಂ ಇರಲಿಲ್ಲ. ಜಪಾನಿನಲ್ಲಿ ಅವರು ಫ್ಯಾಸಿಸಂನಿಂದ ಸತತವಾಗಿ ಅಂತರ ಕಾಯ್ದುಕೊಂಡಿದ್ದುದಕ್ಕೆ ಅನೇಕ ದಾಖಲೆಗಳಿವೆ. ಟೋಕಿಯೋ ವಿಶ್ವವಿದ್ಯಾನಿಲಯದಲ್ಲಿ ಬೃಹತ್ ವಿದ್ಯಾರ್ಥಿ ಸಭೆಯೊಂದನ್ನು ಉದ್ದೇಶಿಸಿ ಮಾತನಾಡಿದ್ದುದನ್ನು ಇಲ್ಲಿ ನೆನೆಯಬೇಕು.

ನಮ್ಮ ದೇಶವು ವಸಾಹತುಶಾಹಿ ಆಡಳಿತದ ಅಡಿಯಲ್ಲಿದ್ದಾಗ ತೀವ್ರ ಸ್ವಾತಂತ್ರ್ಯ ಹೋರಾಟಗಳನ್ನು 'ರಾಜದ್ರೋಹ'ವೆಂದು ಹೇಳಲಾಗುತ್ತಿತ್ತು. ಅಂದರೆ, ಬ್ರಿಟಿಷ್ ಸರ್ಕಾರವನ್ನು ಕಿತ್ತೊಗೆಯುವ ಆಶಯವನ್ನಿರಿಸಿಕೊಂಡಿದ್ದ ಕಾರ್ಯಕ್ರಮಗಳು ಅವಾಗಿರುತ್ತಿದ್ದವು ಎಂದರ್ಥ. ಉದಾಹರಣೆಗೆ, ಭಗತ್ ಸಿಂಗ್‌ರಂತಹವರ ಹೋರಾಟ. ತಿಲಕ್, ಅರಬಿಂದೊ, ಗಾಂಧೀಜಿ, ಮುಂತಾದವರ ವಿರುದ್ಧವೂ ಅಂಥವೇ ಆಪಾದನೆಗಳನ್ನು ಹೊರಿಸಲಾಗಿತ್ತು. ಬ್ರಿಟಿಷ್ ಸರ್ಕಾರವನ್ನು ಟೀಕಿಸುವುದೇ ಬೇರೆ, ಆ ಸರ್ಕಾರವನ್ನು ಉತ್ಪಾಟಿಸಬೇಕೆಂಬ ಆಕಾಂಕ್ಷೆಯೇ ಬೇರೆ, ಎಂಬುದು ಆಗಲೂ ಪ್ರಚಲಿತವಾಗಿತ್ತು. "ನೀವಿಲ್ಲೇ ಇದ್ದರೆ ಪ್ರಮಾದವಿಲ್ಲ, ಆದರೆ ನಿಮ್ಮ ನೀತಿ–ನಡತೆಗಳನ್ನು ಬದಲಾಯಿಸಿಕೊಳ್ಳಬೇಕು, ನಿಮ್ಮ ದೇಶದಲ್ಲಿ ಯಾವ ರೀತಿ ಆಡಳಿತ ನಡೆಸಲಾಗುತ್ತದೋ ಹಾಗೆ ಇಲ್ಲಿಯೂ ನಡೆಸಬೇಕು" ಎಂಬ ಭಾವದ ಪ್ರಕಟಣೆಯು ಟೀಕೆ ಎನಿಸಿಕೊಳ್ಳುತ್ತಿತ್ತು. ದಾದಾಭಾಯಿ ನವರೋಜಿ ತಮ್ಮ ಟೀಕೆಯನ್ನು "ಭಾರತದಲ್ಲಿ ಬ್ರಿಟಿಷೇತರ ಆಡಳಿತ" (ಅನ್‌ಬ್ರಿಟಿಷ್ ರೂಲ್ ಇನ್ ಇಂಡಿಯಾ) ಎಂಬ ಪುಸ್ತಕದಲ್ಲಿ ದಾಖಲಿಸಿದ್ದರು. ಅದಾದ ಎಷ್ಟೋ ವರ್ಷಗಳ ನಂತರ "ನಿಮ್ಮ ಆಡಳಿತ ಎಂಥದು ಎಂಬುದು ಗೌಣ; ಹೇಗೂ ನೀವು ಆಕ್ರಮಣಕಾರರು, ಆದ್ದರಿಂದ ನೀವು ಜಾಗ ಖಾಲಿ ಮಾಡಿ" ಎಂಬ ಭಾವನೆಯು ಪ್ರಕಟವಾದದ್ದು ಬಾಲಗಂಗಾಧರ ತಿಲಕರಂತಹ ನಾಯಕರ ಮಾತು ಮತ್ತು ಕ್ರಿಯೆಗಳಲ್ಲಿ. "ಸ್ವಾತಂತ್ರ್ಯ ನನ್ನ ಜನ್ಮಸಿದ್ಧ ಹಕ್ಕು" ಎಂಬುದು ಅವರ ಘೋಷಣೆಯಾಯಿತು. ಸುಮಾರು ಅದೇ ದಶಕಗಳಲ್ಲಿ ಲಾಲಾ ಲಜಪತ ರಾಯ್ ಬ್ರಿಟಿಷರು ನಮ್ಮ ದೇಶದ ಸಂಪತ್ತನ್ನು ಯಾವ ಅಗಾಧ ಪ್ರಮಾಣದಲ್ಲಿ ದೋಚಿದ್ದರು ಎಂಬುದನ್ನು "ಭಾರತಕ್ಕೆ ಇಂಗ್ಲೆಂಡಿನ ಋಣ" (ಇಂಗ್ಲೆಂಡ್ಸ್ ಡೆಬ್ ಟು ಇಂಡಿಯ) ಎಂಬ ಅದ್ಭುತ ಪುಸ್ತಕದಲ್ಲಿ ನಿರೂಪಿಸಿದ್ದರು. ಅಂತಹ ದೋಚುವಿಕೆಯಿಂದಲೂ ನಮ್ಮ ದೇಶವು ಪಾರಾಗಬೇಕೆಂಬ ಆಶಯವು ಸ್ವಾತಂತ್ರ್ಯ ಸಂಗ್ರಾಮದ ಅಡಿಪಾಯವಾಗಿತ್ತು. ಭಗತ್ ಸಿಂಗ್ ಮತ್ತು ಅವನ ಸಂಗಾತಿಗಳು ಅದಕ್ಕೆ ಸೈದ್ಧಾಂತಿಕ ಸ್ವರೂಪ ಕೊಡಲು ಮುಂದಾಗಿದ್ದರು. "ಬ್ರಿಟಿಷರು ಹೋಗಬೇಕು, ಆದರೆ ಅವರನ್ನು ಒದ್ದೋಡಿಸಬಾರದು; ಅವರ ದುರಾಕ್ರಮಣವನ್ನು ಅವರಿಗೆ



ಮನದಟ್ಟು ಮಾಡಿಸಿ, ತಾವು ನಿಷ್ಕ್ರಮಿಸುವುದು ಸಾಧುವೆಂಬ ಭಾವನೆಯನ್ನು ಅವರಲ್ಲಿ ಮೂಡಿಸಬೇಕು" ಎಂಬುದು ಒಂದರ್ಥದಲ್ಲಿ ಗಾಂಧಿ ಮಾರ್ಗವಾಗಿದ್ದಿತು. ಕಂದಾಯ ಕೊಡದಿರುವುದು, ಸತ್ಯಾಗ್ರಹ ಹೂಡುವುದು, ಜೈಲುಗಳನ್ನು ತುಂಬುವುದು, ಸಹನೆಯಿಂದ ಹೊಡೆತಗಳನ್ನು ತಿನ್ನುವುದು, ಇತ್ಯಾದಿಗಳು ಮನಃಪರಿವರ್ತನೆಯ ಸಾಧನಗಳಾಗಿದ್ದುವು. ಅದರ ಬಗ್ಗೆ ವಿವಿಧ ಬಣಗಳ ತಕರಾರಿದ್ದರೂ ಎಲ್ಲರೂ ಕೈಜೋಡಿಸಬೇಕೆಂಬ ಮೂಲಸ್ರೋತವು ಪ್ರಧಾನವಾಗಿ ಕ್ರಿಯಾಶೀಲವಾಗಿತ್ತು.

"ರಾಜದ್ರೋಹ" ಎಂಬುದು ಅವಹೇಳನವೆಂದಂತೂ ಪರಿಗಣನೆಗೆ ಬರುವಂತಿರಲಿಲ್ಲ. ೧೯೨೧–೨೨ರ ಕೆಲವು ತಿಂಗಳುಗಳ 'ಯಂಗ್ ಇಂಡಿಯಾ' ಪತ್ರಿಕೆಯಲ್ಲಿ ಗಾಂಧೀಜಿ ಪ್ರಕಟಿಸಿದ್ದ ಲೇಖನಗಳು "ರಾಜದ್ರೋಹ"ವಾಗಿದೆ ಎಂಬ ಆಪಾದನೆ ಹೊತ್ತು ೧೯೨೨ರಲ್ಲಿ ಗಾಂಧೀಜಿ ನ್ಯಾಯಾಲಯದಲ್ಲಿ ಹಾಜರಾಗಿದ್ದರು. ಆ ವರ್ಷದ ಮಾರ್ಚ್ ೧೧ರಂದು ಅಹಮದಾಬಾದ್‌ನ ಜಿಲ್ಲಾ ಮ್ಯಾಜಿಸ್ಟ್ರೇಟನ ಕೋರ್ಟಿನಲ್ಲಿ ಗಾಂಧೀಜಿ ತಮ್ಮ ತಪ್ಪೊಪ್ಪಿಗೆ ನೀಡಿ ತಮ್ಮ ಬರಹಗಳನ್ನು ಸರ್ವಥಾ ಸಮರ್ಥಿಸಿಕೊಳ್ಳುವುದಾಗಿ ನುಡಿದರು; ಮಾರ್ಚ್ ೧೮ರಂದು ವಿಚಾರಣೆ ನಡೆಯಿತು. ಇಂಡಿಯನ್ ಪೀನಲ್ ಕೋಡ್‌ನ ೧೨೪–ಎ ಕಲಂ ಅಡಿ ಅವರ 'ರಾಜದ್ರೋಹ'ದ ಮೊಕದ್ದಮೆಯ ಸಂದರ್ಭದಲ್ಲಿ ಗಾಂಧೀಜಿ ನೀಡಿದ ಹೇಳಿಕೆಯು ಲೋಕಪ್ರಸಿದ್ಧವಾಗಿದೆ. ಅದರ ಆರಂಭದ ಕೆಲವು ಮಾತುಗಳು ಹೀಗಿವೆ : "ಸರ್ಕಾರದೊಡನೆ ಸಹಕರಿಸಲು ನಿರಾಕರಿಸಿ ನಾನು ಭಾರತ ಮತ್ತು ಇಂಗ್ಲೆಂಡ್‌ಗೆ ಉಪಕಾರ ಮಾಡಿದ್ದೇನೆನಿಸುತ್ತದೆ; ಏಕೆಂದರೆ ನಮ್ಮ ಸಂಬಂಧವು ಅಸಹಜವಾದ್ದು. ಅದರಿಂದ ಹೊರಬರುವುದು ಆರೋಗ್ಯಕರ. **ನನ್ನ ತಿಳಿವಳಿಕೆಯಂತೆ ಕೆಡುಕಿನ ಜೊತೆ ಸಹಕರಿಸದಿರುವುದು ಒಳ್ಳೆಯದರ ಜೊತೆ ಸಹಕರಿಸಬೇಕಾದಷ್ಟೆ ಮುಖ್ಯವಾದ ಕರ್ತವ್ಯ."** ಆದರೆ ನ್ಯಾಯಾಲಯವು "ನೈತಿಕ ಕರ್ತವ್ಯವನ್ನು ಮಾನ್ಯ ಮಾಡುವುದಕ್ಕಿಂತಲೂ ಹೆಚ್ಚಾಗಿ ಕಾನೂನನ್ನು ಮನ್ನಿಸುವುದು ಮುಖ್ಯ"ವೆಂದು ಪ್ರತಿಪಾದಿಸುತ್ತಿತ್ತು. ಗಾಂಧೀಜಿಗೆ ಆರು ವರ್ಷಗಳ ಕಾರಾಗೃಹ ಶಿಕ್ಷೆ ನೀಡಲಾಯಿತು. ಗಾಂಧೀಜಿಗೆ ನಿಜವಾದ ಪ್ರೇರಣೆ ಎಂಥದು ಎಂಬುದನ್ನು ಚರ್ಚಿಸುತ್ತಾ ಆ ಸಂದರ್ಭದಲ್ಲಿ ಸರೋಜಿನಿ ನಾಯಿಡು ಹೇಳಿದ್ದರು, "ಗಾಂಧೀಜಿ ಬಡವರ ಮನಸ್ಸನ್ನು ತಮ್ಮಲ್ಲಿ ಮೇಳೈಸಿಕೊಂಡು ಬಡವರತ್ತ ಮುಖ ಮಾಡಿದರು," ಎಂದು.

ನಮ್ಮ ದೇಶವು ಸ್ವಾತಂತ್ರ್ಯ ಗಳಿಸಿದ ನಂತರ 'ರಾಜದ್ರೋಹ' ಎಂಬ ಮಾತು ಅಪ್ರಸ್ತುತವಾಯಿತು. ಅದರ ಬದಲು ಈಚಿನ ವರ್ಷಗಳಲ್ಲಿ 'ದೇಶದ್ರೋಹ' ಎಂಬ ಪದವು ಬಳಕೆಗೆ ಬಂದಿದೆ ಮತ್ತು ದೇಶದ್ರೋಹದ ಆಪಾದನೆಯನ್ನು ಬೇಕಾಬಿಟ್ಟಿ ಯಾರೆಂದರೆ ಅವರ ಮೇಲೆ ಹೊರಿಸಲಾಗುತ್ತಿದೆ. ದೆಹಲಿಯಲ್ಲಿ ಜವಾಹರಲಾಲ್ ನೆಹರು ವಿಶ್ವವಿದ್ಯಾನಿಲಯದ ವಿದ್ಯಾರ್ಥಿಗಳು ತಮ್ಮ ಹಕ್ಕೊತ್ತಾಯ ಮಂಡಿಸಲು ಮೆರವಣಿಗೆಯಲ್ಲಿ ಹೋಗಿ ಒಂದು ಸಭೆ ನಡೆಸಿದಾಗ ಅವರ ಮೇಲೆ 'ದೇಶದ್ರೋಹ'ದ ಆಪಾದನೆ ಹೊರಿಸಲಾಗಿತ್ತು; ಅದೂ ಅವರು ಕೂಗಿಲ್ಲದ ಘೋಷಣೆಗಳನ್ನು ಬೇರೆ ಕೆಲವು ಆಗಂತುಕರಿಂದ ಕೂಗಿಸಿ ಆಪಾದನೆ ಹೊರಿಸಲಾಯಿತೆಂದು ನಂತರ ತಿಳಿದುಬಂದಿದೆ. ಮಹಾನ್ ವಿಪರ್ಯಾಸವೆಂದರೆ ವಸಾಹತು ಸರ್ಕಾರವು ತನ್ನ ದರ್ಪ, ದೌರ್ಜನ್ಯ ಮತ್ತು ಸಂಪತ್ತಿನ ಲೂಟಿಗೆ ಅನುವು ಮಾಡಿಕೊಡುವಂತಹ ಕಾನೂನನ್ನು ಬರೆದುಕೊಂಡಿದ್ದಿತೆಂಬುದನ್ನು ತಿಳಿದಿದ್ದೂ ಅದೇ ಕಾನೂನನ್ನು ಸ್ವಾತಂತ್ರ್ಯೋತ್ತರ ಕಾಲದಲ್ಲಿ ನಾವು ಉಳಿಸಿಕೊಂಡಿದ್ದೇವೆ ಮತ್ತು ಯಾವ ಸಂಕೋಚವೂ ಇಲ್ಲದೆ ಬಳಸುತ್ತಿದ್ದೇವೆ, ಎಂಬುದು. ನಮ್ಮ ಪ್ರಜಾಪ್ರಭುತ್ವ ವ್ಯವಸ್ಥೆಗೆ ಅನುರೂಪವಾದ ಕಾನೂನುಗಳನ್ನು ನಾವು ಬರೆದುಕೊಳ್ಳಲಾಗದಷ್ಟು ಬರಡು ಪ್ರಜ್ಞೆ ನಮ್ಮದಾಗಿದೆಯೆ? ನಮಗೊಂದು ಸಂವಿಧಾನವಿದೆ, ಅದರಲ್ಲಿ ಉಲ್ಲೇಖವಾಗಿರುವ ಹಕ್ಕುಗಳು ಮತ್ತು ಜವಾಬ್ದಾರಿಗಳು ನಮ್ಮವು. ಅವುಗಳ ಉಲ್ಲಂಘನೆ ಮಾತ್ರವೇ ಪ್ರಶ್ನಾರ್ಹವೇ ವಿನಾ ಅವುಗಳು ಕೊಡಮಾಡಿರುವ ಸೌಲಭ್ಯ–ಸವಲತ್ತುಗಳನ್ನು ಬಳಸಿ ಸಾರ್ವಜನಿಕ ಜೀವನದಲ್ಲಿ ಪಾಲ್ಗೊಳ್ಳುವುದು ಮತ್ತು ಮಧ್ಯಪ್ರವೇಶ ಮಾಡುವುದು ಪ್ರಶ್ನಾರ್ಹವಲ್ಲ. ಹಾಗೆ ಮಾಡದಿರುವುದು ಪ್ರಶ್ನಾರ್ಹ ಆಗಬಲ್ಲುದು, ಅಷ್ಟೆ. ಮೂಲಭೂತ ಮಾನವ ಹಕ್ಕುಗಳ ಪರವಾಗಿ ದನಿಯೆತ್ತಿದರೆ ಅದು ದೇಶದ್ರೋಹವೆಂದು ಸಂವಿಧಾನವು ಬಗೆಯುತ್ತದೆಯೆ? ಗಾಂಧೀಜಿ ಭಾಷೆಯಲ್ಲಿ ಹೇಳುವುದಾದರೆ, ಅದು "ಕೆಡುಕಿನ ಪರವಾದ ನಿಲುವು" ಎನಿಸಿಕೊಳ್ಳುತ್ತದೆಯೆ?

ಇಲ್ಲಿ ಎರಡು ಕ್ಷಮಾರ್ಹವಲ್ಲದ ಲೋಪಗಳಿವೆ : (ಅ) ವಸಾಹತು ಕಾಲದ ಕಾನೂನನ್ನು ಪ್ರಜಾಪ್ರಭುತ್ವದ ಸಂದರ್ಭಕ್ಕೆ ತಕ್ಕಂತೆ ಪರಿಷ್ಕರಿಸಿ ಬರೆದುಕೊಳ್ಳದಿದ್ದುದು, ಮತ್ತು (ಆ) ಸಂವಿಧಾನದ ಸೂತ್ರಗಳನ್ನು ಸ್ವೇಚ್ಛೆಯಿಂದ ಪೀಡನೆಗೆ ಬಳಸಿಕೊಳ್ಳುವುದು. ತಿಲಕ್, ಗಾಂಧೀಜಿ, ಭಗತ್ ಸಿಂಗ್, ನೇತಾಜಿ ಕಟ್ಟಿದ್ದ ಇಂಡಿಯನ್ ನ್ಯಾಷನಲ್ ಆರ್ಮಿಯ ಹೋರಾಟಗಾರರು ನಮ್ಮ ದೇಶದ ದೃಷ್ಟಿಯಿಂದ 'ದ್ರೋಹಿ'ಗಳಲ್ಲ; ವಸಾಹತು ಉತ್ಪಾಟನೆಯ ದೃಷ್ಟಿಯಿಂದ ವಂದ್ಯರಾದ ಪ್ರೇಮಿಗಳು. ನಮ್ಮ ವ್ಯವಸ್ಥೆಯಲ್ಲಿ ಸರ್ಕಾರದ ನೀತಿಗಳು, ಅವುಗಳ ಅನುಷ್ಠಾನದಲ್ಲಿ ಕಂಡುಬರುವ ನ್ಯೂನತೆಗಳು, ಪರ್ಯಾಯ ನೀತಿಗಳ ಸೂಚನೆ, ಅವುಗಳ ಅಂಗೀಕಾರ ಮತ್ತು ಕಾರ್ಯಗತಗೊಳಿಸುವಿಕೆ, ಅದಕ್ಕಾಗಿ ನಡೆಯುವ ಚಿಂತನೆ, ಸಂಘಟನೆ ಮತ್ತು ಹೋರಾಟ, ಇವಾವುದೂ ಹೇಗೆ ತಾನೆ 'ದೇಶದ್ರೋಹ' ಎನಿಸಿಕೊಂಡೀತು? ಗಾಂಧೀಜಿ ಮುಂತಾದವರು ಎದುರಿಸಿದ ಆಪಾದನೆಗಳ ಹಿನ್ನೆಲೆಯಲ್ಲಿ ವರ್ತಮಾನದ ಸಂವಿಧಾನ–ವಿರೋಧಿ ಸಂಗತಿಗಳ ಬಗ್ಗೆ ಪರ್ಯಾಲೋಚನೆ ಮಾಡುವುದು ಅವರ ಪರಂಪರೆಯ ಶ್ಲಾಘನೀಯ ಮುಂದುವರಿಕೆಯೇ ಸರಿ.

೧೯೩೦ರ ದಶಕದ ಆರಂಭದಲ್ಲಿ ಗಾಂಧೀಜಿ ಅಸಹಕಾರ ಚಳುವಳಿಗೆ ಕರೆಯಿತ್ತರು. ಅದೇ ವರ್ಷದ ಜನವರಿ ೨೬ರಂದು ದೇಶದಾದ್ಯಂತ 'ಮೊದಲ ಸ್ವಾತಂತ್ರ್ಯ ದಿನ'ವನ್ನು ಆಚರಿಸಲಾಗಿತ್ತು. ಅದೇ ಮಾರ್ಚ್ ೨ರಂದು ವೈಸ್‌ರಾಯ್‌ಗೆ ಪತ್ರ ಬರೆದು ವ್ಯಾಪಕ ಚಳುವಳಿಯು ಅನಿವಾರ್ಯವೆಂದು ಗಾಂಧೀಜಿ ತಿಳಿಸಿದ್ದರು. ವಾಯವ್ಯ ಭಾರತದಲ್ಲಿ 'ಗಡಿನಾಡ ಗಾಂಧಿ' ಎಂದು ಖ್ಯಾತರಾಗಿದ್ದ ಖಾನ್ ಅಬ್ದುಲ್ ಗಫ಼ಾರ್ ಖಾನ್ ನೇತೃತ್ವದಲ್ಲಿ ಚಳುವಳಿಯು ಬಿರುಸಿನಿಂದ ಸಾಗಿತ್ತು. ಈಗಿನ ಪಾಕಿಸ್ತಾನದಲ್ಲಿರುವ ಪೆಷಾವರ್ ಅದರ ಕೇಂದ್ರವಾಗಿತ್ತು. ಚಳುವಳಿಯೇನೋ ಯಾವ ಹಿಂಸಾತ್ಮಕ ಘಟನೆಯೂ ಇಲ್ಲದಂತೆ ನಡೆಯುವುದಿತ್ತು. ಆದರೆ ಏಪ್ರಿಲ್‌ನ ಒಂದು ದಿನ, ತಮ್ಮ ಮೇಲೆ ಬ್ರಿಟಿಷರು ಹರಿಬಿಟ್ಟಿದ್ದ ದಮನವನ್ನು ಸಹಿಸಲಾರದ ಜನಜಂಗುಳಿಯು ಬ್ರಿಟಿಷ್ ಮಿಲಿಟರಿ ವಾಹನಗಳ ಮೇಲೆ ದಾಳಿ ನಡೆಸಿಬಿಟ್ಟಿತು. ಅನೇಕ ಸ್ಥಳೀಯ ನಾಯಕರನ್ನು ಬಂಧಿಸಿದ್ದುದು ಜನರಿಗೆ ಭಾರಿ ಕೋಪ ಉಂಟುಮಾಡಿದ್ದು, ಅದಕ್ಕೆ ಪ್ರತೀಕಾರವೋ ಎಂಬಂತೆ ಒಂದು ಮಿಲಿಟರಿ ವಾಹನಕ್ಕೆ ಬೆಂಕಿ ಇಟ್ಟರು. ವಾಹನದಲ್ಲಿದ್ದವರಿಗೆ ಪ್ರಾಣಹಾನಿ ಏನೂ ಆಗಲಿಲ್ಲ, ಆದರೆ ವಾಹನವು ಸುಟ್ಟು ಕರಕಲಾಯಿತು. ಚಳುವಳಿಯ ಅಹಿಂಸಾ ವ್ರತಕ್ಕೆ ಧಕ್ಕೆಯುಂಟಾಯಿತೆಂದು ಗಾಂಧೀಜಿ ಅಸಂತುಷ್ಟಿ ವ್ಯಕ್ತಪಡಿಸಿದರಾದರೂ ಬ್ರಿಟಿಷ್ ಆಡಳಿತವು ಜನರನ್ನು ಹತೋಟಿಗೆ ತರಲೆಂದು ಹೆಚ್ಚಿನ ಸಂಖ್ಯೆಯಲ್ಲಿ ಮಿಲಿಟರಿ ತುಕಡಿಗಳನ್ನು ಪೆಷಾವರ್‌ಗೆ ರವಾನಿಸಿತು. ಇದರಿಂದ ಜನ ಇನ್ನೂ ಹೆಚ್ಚು ಕ್ರುದ್ಧರಾದರು. ಆಗ್ಗೆ ಅಲ್ಲಿಗೆ ರವಾನಿಸಲ್ಪಟ್ಟಿದ್ದ ಮಿಲಿಟರಿ ತುಕಡಿಯೊಂದು "೧೮ನೆಯ ರಾಯಲ್ ಗಢ್‌ವಾಲಿ ರೈಫ಼ಲ್ಸ್"ಗೆ ಸೇರಿದ್ದ ಎರಡನೆಯ ಬೆಟಾಲಿಯನ್ ಆಗಿತ್ತು. ಇದೊಂದು ಘರ್ಷಣೆಯ ಸನ್ನಿವೇಶ : ಒಂದು ಕಡೆ ಪೆಷಾವರ್‌ನ ಮುಸಲ್ಮಾನರ ಜನಸ್ತೋಮ, ಇನ್ನೊಂದು ಕಡೆ ಈಗಿನ ಉತ್ತರಾಖಂಡದ ಮಂದಿ ಇದ್ದ ಗಢ್‌ವಾಲಿ ರೈಫ಼ಲ್ಸ್‌ನ ಹಿಂದು ಸೈನಿಕರು. ಸನ್ನಿವೇಶವು ಪ್ರಕೋಪಕ್ಕೆ ಬಂದಾಗ ಮಿಲಿಟರಿ ಅಧಿಕಾರಿ ಜನಜಂಗುಳಿಯ ಮೇಲೆ ಗುಂಡು ಹಾರಿಸಬೇಕೆಂದು ಆಜ್ಞಾಪಿಸಿದ. "ನಮ್ಮ ಬಂಧುಗಳ ಮೇಲೆ ನಾವು ಗುಂಡು ಹಾರಿಸುವುದಿಲ್ಲ" ಎಂದು ಹೇಳಿ ಗಢವಾಲ್ ಸೈನಿಕ ತುಕಡಿಯು ಆಜ್ಞೆಯನ್ನು ನಿರಾಕರಿಸಿತು.

ಈ ಸನ್ನಿವೇಶವು ಕಣ್ಣಿಗೆ ಕಟ್ಟಿದಾಗ ರೋಮಾಂಚನವಾಗುವುದು ಸಹಜ. ಸೈನಿಕರು ಅಧಿಕಾರಿಗಳ ಆಜ್ಞೆಗೆ ಬದ್ಧರು; ಆದರೆ ಗಢ್‌ವಾಲಿ ಸೈನಿಕರು ಆಜ್ಞೆಯನ್ನು ಉಲ್ಲಂಘಿಸಿದ್ದಾರೆ. ಅವರು ಗುಂಡು ಹಾರಿಸಬೇಕಾಗಿದ್ದುದು ಮುಸಲ್ಮಾನರ ಮೇಲೆ. ಅಲ್ಲಿ ಮತೀಯ ಭಿನ್ನತೆಯು ಅವರ ಮೇಲೆ ಪ್ರಭಾವ ಬೀರಲಿಲ್ಲ. ಅವರನ್ನು 'ನಮ್ಮ ಬಂಧುಗಳು' ಎಂದು ಹೇಳಿ ಹಿಂದು ಸೈನಿಕರು ತಮ್ಮ ಕರ್ತವ್ಯದಿಂದ ವಿಮುಖರಾದರು. ಬ್ರಿಟಿಷ್ ಅಧಿಕಾರಿಗಳು ಅವರ ಅಶಿಸ್ತನ್ನು ಗಮನಿಸಿ ಸೂಕ್ತ ಕ್ರಮ ತೆಗೆದುಕೊಳ್ಳಲು ಮುಂದಾದರು. ಗಾಂಧೀಜಿ ಅಹಿಂಸಾ ವ್ರತಕ್ಕೆ ಬದ್ಧರು, ಗಢ್‌ವಾಲಿ ಸೈನಿಕರು ಅಹಿಂಸಾ ಪಾಲನೆ ಮಾಡಿದ್ದಾರೆ. ಆದರೆ ಗಾಂಧೀಜಿ ಸೈನಿಕರನ್ನು ಸಮರ್ಥಿಸಲಿಲ್ಲ. "ಆಜ್ಞೆಯ ಉಲ್ಲಂಘನೆಯು ಕ್ಷಮಾರ್ಹವಲ್ಲ" ಎಂಬ ನಿಲುವನ್ನು ತಾಳಿ ಸೈನಿಕರ ಪರವಾಗಿ ಮಧ್ಯಪ್ರವೇಶ ಮಾಡಲು ಹಿಂದೆಗೆದರು.

ಇಂತಹ ಸನ್ನಿವೇಶವೊಂದನ್ನು ಇಂದು ಕಲ್ಪಿಸಿಕೊಳ್ಳಲಾದೀತೆ? ೧೯೭೫ರ

ತುರ್ತು ಪರಿಸ್ಥಿತಿಯ ಘೋಷಣೆಗೆ ಮುನ್ನ ನಮ್ಮ ದೇಶದಲ್ಲಿ "ಸಂಪೂರ್ಣ ಕ್ರಾಂತಿ"ಯ ಹೆಸರಿನಲ್ಲಿ ಜಯಪ್ರಕಾಶ ನಾರಾಯಣರ ನೇತೃತ್ವದಲ್ಲಿ ಭಾರಿ ಚಳುವಳಿಯೊಂದು ಜಾರಿಯಲ್ಲಿತ್ತು. "ಮುಂದಿನ ದಿನಗಳಲ್ಲಿ ಜೆ. ಪಿ. ನನ್ನ ಭಾಷೆಯನ್ನು ಮಾತನಾಡುತ್ತಾರೆ" ಎಂದು ಗಾಂಧೀಜಿ ಹೇಳಿದ್ದುದಾಗಿ ಆ ಚಳುವಳಿಯ ನೇತಾರರಲ್ಲಿ ಕೆಲವರು ಪದೇಪದೇ ಚಳುವಳಿಗೆ ಸಮರ್ಥನೆ ಒದಗಿಸುತ್ತಿದ್ದರು. ಗಾಂಧೀಜಿ ಮತ್ತು ಗಢ್‌ವಾಲ್ ಸೈನಿಕರ ಪ್ರಸಂಗ ಸ್ವತಃ ಗಾಂಧೀಜಿ ಅನುಯಾಯಿಗಳಿಗೆ ಮರೆತುಹೋಗಿತ್ತು. ಆದ್ದರಿಂದ ಸ್ವತಃ ಜಯಪ್ರಕಾಶರೇ ಪೊಲೀಸರಿಗೆ ಕರೆ ಕೊಟ್ಟಿದ್ದರು: "ನೀವು ಸರ್ವಾಧಿಕಾರಿ ಇಂದಿರಾ ಗಾಂಧಿ ಸರ್ಕಾರದ ಆಜ್ಞೆಗಳನ್ನು ಪಾಲಿಸಬೇಡಿ," ಎಂದು. ವಸಾಹತು ಸರ್ಕಾರದ ಆಜ್ಞೆ ಉಲ್ಲಂಘಿಸಬಾರದೆಂದು ಸೈನಿಕರಿಗೆ ಹೇಳಿದ್ದ ಗಾಂಧಿ ಎಲ್ಲಿ, ಚುನಾವಣೆಗಳಲ್ಲಿ ದೇಶದ ಜನರಿಂದಲೇ ಆಯ್ಕೆಯಾದ ಪ್ರಧಾನಿಯ ವಿರುದ್ಧವಿರಬೇಕೆಂದು ಪೊಲೀಸರಿಗೆ ಹೇಳಿದ ಜಯಪ್ರಕಾಶರೆಲ್ಲಿ!

ಇಂದಿನ ಸನ್ನಿವೇಶವು ಇನ್ನೂ ಹೆಚ್ಚು ಜಟಿಲವಾಗಿದೆ. ಅಹಿಂಸಾತ್ಮಕ ಪ್ರತಿಭಟನೆಗಳಿಗೆ ಸಹ ಅವಕಾಶವು ಸೀಮಿತಗೊಳ್ಳುತ್ತಿದೆ, ಸಂವಿಧಾನದತ್ತವಾದ ಹಕ್ಕುಗಳು ಮೊಟಕುಗೊಳ್ಳುತ್ತಿವೆ. ಆದರೆ ಗಾಂಧೀಜಿಯ ಔಪಚಾರಿಕ ಶ್ಲಾಘನೆ ಮುಂದುವರಿದಿದೆ. ಭೀಮಾ-ಕೋರೆಗಾಂವ್ ಚಳುವಳಿಯ ಹೆಸರು ಹೇಳುವುದೇ ದೇಶದ್ರೋಹವೆಂಬ ವಾತಾವರಣ ನಿರ್ಮಾಣಗೊಂಡಿದೆ, ದಮನಿತರಿಗೆ ಸಾಂತ್ವನ ವ್ಯಕ್ತಪಡಿಸುವುದು ಘೋರ ಅಪರಾಧವೆಂಬಂತಹ ನ್ಯಾಯಕ್ಕೆ ವಿಚಿತ್ರವಾದ ಮನ್ನಣೆ ದೊರೆಯುತ್ತಿದೆ. ಗಾಂಧೀಜಿಯ ೧೫೦ನೆಯ ಜನ್ಮೋತ್ಸವದ ಅದ್ದೂರಿ ಆಚರಣೆಗೆ ಇದು ಅಂಗೀಕಾರಾರ್ಹ ಹಿನ್ನೆಲೆಯೆ?

ಸುಗತ್ ಬೋಸ್ ಎಂಬಾತ ಅಮೇರಿಕಾದ ಹಾರ್ವರ್ಡ್ ವಿಶ್ವವಿದ್ಯಾನಿಲಯದಲ್ಲಿ ಇತಿಹಾಸ ಪ್ರಾಧ್ಯಾಪಕರೆಂದು ವರದಿಯಾಗಿದೆ. ಗಾಂಧೀಜಿ ಬೆಳೆಸಿದ ಅಹಮದಾಬಾದ್‌ನ ಸಬರಮತಿ ಆಶ್ರಮದಲ್ಲಿ ಇತ್ತೀಚೆಗೆ ಅವರೊಂದು ಉಪನ್ಯಾಸ ನೀಡಿ ಗಾಂಧೀಜಿ ಮತ್ತು ಸುಭಾಸ್‌ರ ನಡುವಣ ಭಿನ್ನಾಭಿಪ್ರಾಯಗಳನ್ನು ಉತ್ಪ್ರೇಕ್ಷಿತವೆಂದು ಹೇಳಿದ್ದಾರೆ. "೧೯೩೯ರಲ್ಲಿ ಅವರಿಬ್ಬರ ನಡುವೆ ಮೂಡಿದ್ದ ಒಡಕು ತಾತ್ಕಾಲಿಕವಾದ್ದು, ಅವರ ನಡುವೆ ಪ್ರೀತಿ – ಗೌರವಗಳು ಗಾಢವಾಗಿತ್ತು" ಎಂದು ವ್ಯಾಖ್ಯಾನಿಸಿದರೆಂದು ಹೇಳಲಾಗಿದೆ. ತೀವ್ರ ಭಿನ್ನಾಭಿಪ್ರಾಯಗಳ ನಡುವೆಯೂ ಪ್ರೀತಿ – ಗೌರವಗಳು ಇರುತ್ತಿದ್ದುದು ನಮ್ಮ ಪರಂಪರೆ ಯೆಂಬುದಕ್ಕೆ ಇದೊಂದು ಉದಾಹರಣೆ. ಸುಗತ್ ಬೋಸ್ ನೇತಾಜಿಯವರ ಕುಟುಂಬಕ್ಕೆ ಸೇರಿದವರಾಗಿ ಗಾಂಧೀಜಿ ಬಗ್ಗೆ ಗೌರವ ಉಳಿಸಿಕೊಂಡಿರುವುದು ವಿಶೇಷವೇ ಹೌದು; ಏಕೆಂದರೆ ರಾಜಕೀಯವಾಗಿ ನೇತಾಜಿಯವರಿಗೆ ಗಾಂಧೀಜಿ ಎದುರಾಳಿಯಾಗಿ ನಡೆದು ಕೊಂಡಿದ್ದುದುಂಟು. ಆ ವಿರೋಧವು ವ್ಯಕ್ತಿಗತ ಸಂಬಂಧಗಳಿಗೆ ಅಷ್ಟೇನೂ ಹುಳಿ ಹಿಂಡಲಿಲ್ಲ. ವರ್ತಮಾನದಲ್ಲಿ ಅಂತಹ ವಿದ್ಯಮಾನಗಳು ವಿರಳ. ವ್ಯಕ್ತಿಯ ಆರಾಧನೆಯು ಗರಿಷ್ಠ ಮಟ್ಟ ಮುಟ್ಟಿರುವುದರಿಂದ ವ್ಯಕ್ತಿಗಳ ನಿಲುವುಗಳ ವಿಮರ್ಶೆಯು ಸಹ 'ದೇಶದ್ರೋಹ' ವೆಂಬ ಹಣೆಪಟ್ಟಿಗೆ ಪಾತ್ರವಾಗಿಬಿಡುತ್ತದೆ. ಸರ್ವಾಧಿಕಾರದ ಧೋರಣೆ ಇರುವಲ್ಲಿ ಇದು ಅಸಂಭಾವ್ಯವಲ್ಲ. ರಾಜಕೀಯ ಮತ್ತು ಆರ್ಥಿಕ ಚಿಂತನೆಗಳಿಗಿಂತಲೂ ವೈಯ್ಯಕ್ತಿಕ ವರ್ಚಸ್ಸು ಪ್ರಾಮುಖ್ಯ ಪಡೆಯುತ್ತಿರುವುದರ ಸೂಚನೆ ಇದೆಂದರೆ ತಪ್ಪಲ್ಲ.



ಅದು ೧೯೩೪ರ ಸಮಯ. ಆ ವರ್ಷದ ಸೆಪ್ಟೆಂಬರ್ ೧೭ರಂದು ಗಾಂಧೀಜಿ ಕಾಂಗ್ರೆಸ್ಸಿನಿಂದ ನಿವೃತ್ತಿ ಘೋಷಿಸಿದರು. "ಬುದ್ಧಿಜೀವಿಗಳು" ಪ್ರಕಟಿಸುವ ಶ್ರದ್ಧೆಗೂ ತಮ್ಮ ಶ್ರದ್ಧೆಗೂ ವ್ಯತ್ಯಾಸವಿದೆಯೆಂದು ಹೇಳಿ ಗಾಂಧೀಜಿ "ರಚನಾತ್ಮಕ ಕಾರ್ಯಕ್ರಮ"ಕ್ಕೆ ಬದ್ಧರಾಗಿ ಅದರಲ್ಲೇ ಸ್ವಾತಂತ್ರ್ಯ ಹೋರಾಟದ ಕೆಲಸವನ್ನು ಮುಂದುವರಿಸುವ ತೀರ್ಮಾನವನ್ನು ಕೈಗೊಂಡಿದ್ದರು. ನಿವೃತ್ತಿ ಘೋಷಿಸಿದ್ದರೂ ಕಾಂಗ್ರೆಸ್‌ನ ವಿದ್ಯಮಾನಗಳಿಂದ ಅವರು ದೂರ ಸರಿದಿರಲಿಲ್ಲ. ಪಕ್ಷದ ವರಿಷ್ಠರು ವಾರ್ಧಾ ಮತ್ತು ಸೇವಾಗ್ರಾಮಗಳಿಗೆ ಹೋಗಿ ಗಾಂಧೀಜಿಯೊಡನೆ ಚರ್ಚಿಸದೆ ಯಾವ ಪ್ರಮುಖ ಹೆಜ್ಜೆಗಳ ಬಗೆಗೂ ಅಂತಿಮ ನಿರ್ಧಾರ ಕೈಗೊಳ್ಳುತ್ತಿರಲಿಲ್ಲ. ೧೯೩೬ರಲ್ಲಿ ಕಾಂಗ್ರೆಸ್ ಅಧಿವೇಶನ ಲಕ್ನೋದಲ್ಲಿ ಜರುಗುವುದಿತ್ತು. ಯೂರೋಪಿನಲ್ಲಿ ಯುದ್ಧದ ಕಾರ್ಮೋಡಗಳು ಕವಿಯುತ್ತಿದ್ದುದು ಆಗಲೇ ಸ್ಪಷ್ಟವಾಗಿ ಗೋಚರವಾಗಿತ್ತು. ಲಕ್ನೋ ಅಧಿವೇಶನದಲ್ಲಿ ಜವಾಹರಲಾಲ್ ನೆಹರು ಅಧ್ಯಕ್ಷರಾಗಿ ಸ್ವಾತಂತ್ರ್ಯ ಹೋರಾಟ, ಸ್ವತಂತ್ರ ಭಾರತದ ಪ್ರಗತಿ, ಜಾಗತಿಕ ಯುದ್ಧದ ಹಿನ್ನೆಲೆಯಲ್ಲಿ ಕಾಂಗ್ರೆಸ್‌ನ ನೀತಿ, ಮುಂತಾದುವನ್ನೆಲ್ಲಾ ಪರಾಮರ್ಶೆ ಮಾಡಿದರು ಮತ್ತು ಸಮಾಜವಾದಿ ಹಾದಿಯು ಅನಿವಾರ್ಯವೆಂದು ಪ್ರತಿಪಾದಿಸಿದರು. ಅದನ್ನು ಖ್ಯಾತ ಇತಿಹಾಸಕಾರ ಮತ್ತು ಸಂಸತ್ ಸದಸ್ಯ ಪ್ರೊಫೆಸರ್ ಹಿರೇನ್ ಮುಖರ್ಜಿ ಹೀಗೆ ಸಂಗ್ರಹಿಸಿದ್ದಾರೆ: "ಇಂದಿನ ಅಗತ್ಯಗಳು ಮತ್ತು ಮುಂದಿನ ಸವಾಲುಗಳನ್ನು ಎದುರಿಸಲು ಕಾಂಗ್ರೆಸ್ ಕೆಲವು ಕ್ರಮಗಳನ್ನು ಅನುಸರಿಸಬೇಕು. ಕಾರ್ಮಿಕರ ಮತ್ತು ರೈತರ ಸಂಘಟನೆಗಳೊಂದಿಗೆ ಸಾಮರಸ್ಯದ ಸಂಬಂಧ ಬೆಳೆಸುವುದು ಮತ್ತು ಮುಸಲ್ಮಾನ ಸಮುದಾಯದ ಮನಸ್ಸನ್ನು ಗೆದ್ದುಕೊಳ್ಳುವುದು, ಇವಕ್ಕೆ ವಿಶೇಷ ಶ್ರಮ ವಹಿಸುವುದು ಅಗತ್ಯ." ಅಂತರರಾಷ್ಟ್ರೀಯ ಸನ್ನಿವೇಶವನ್ನು ವಿಶ್ಲೇಷಿಸುತ್ತಾ ನೆಹರು ಸೋವಿಯೆತ್ ಒಕ್ಕೂಟದ ಅಸಾಧಾರಣ ಅಭಿವೃದ್ಧಿಯನ್ನು ಪ್ರಸ್ತಾಪಿಸಿದರು ಮತ್ತು "ಇತಿಹಾಸದಲ್ಲಿ ಅಷ್ಟು ಅದ್ಭುತವಾದ ಪ್ರಜಾಪ್ರಭುತ್ವವಾದಿ ಪ್ರಕ್ರಿಯೆಯು ಪ್ರಾಯೋಗಿಕವಾಗಿ ಬೇರೆಲ್ಲೂ ದಾಖಲಾಗಿಲ್ಲ; ನಮ್ಮ ಸದ್ಯದ ಅಂಧಕಾರದಲ್ಲಿ ಹೊಸ ವ್ಯವಸ್ಥೆ ಹಾಗೂ ವಿನೂತನ ನಾಗರಿಕತೆ ಅಲ್ಲಿ ಹೊಮ್ಮುತ್ತಿದೆ" ಎಂದು ಉದ್ಗರಿಸಿದರು. ೧೯೩೭ರಲ್ಲಿ ಕಾಂಗ್ರೆಸ್ ಯೋಜನಾ ಆಯೋಗವೊಂದನ್ನು ರಚಿಸಿದ್ದು ಆ ಹಿನ್ನೆಲೆಯಲ್ಲಿ.

ಸುಭಾಸ್ ಚಂದ್ರ ಬೋಸ್ ಸಮಾಜವಾದವನ್ನು ಅಂಗೀಕರಿಸಿದ್ದವರು, ಆದರೆ ನೆಹರು ಅವರಂತೆ ಸುಭಾಸ್ ಸೈದ್ಧಾಂತಿಕ ಸೂಕ್ಷ್ಮಗಳಿಗೆ ತೆರೆದುಕೊಂಡವರಲ್ಲ. ೧೯೨೮ರಷ್ಟು ಹಿಂದೆಯೇ ಅವರು ಕಾಂಗ್ರೆಸ್‌ಅನ್ನು ಶಿಸ್ತುಬದ್ಧವಾದ ಬಲಿಷ್ಠ ಸಂಘಟನೆಯನ್ನಾಗಿಸಬೇಕೆಂಬ ದೃಷ್ಟಿಯಿಂದ ಕಲ್ಕತ್ತ ಅಧಿವೇಶನದ ಸಮಯದಲ್ಲಿ ಸ್ವಯಂಸೇವಕರಿಗೆ ಖಾಕಿ ಸಮವಸ್ತ್ರ ತೊಡಿಸಿ ಮೆರವಣಿಗೆಯ ಮುಂಚೂಣಿಯಲ್ಲಿ ಹೆಜ್ಜೆ ಹಾಕಿಸಿದ್ದರು. ನಂತರದ ಕಾಲದಲ್ಲೂ ಅವರಿಗೆ ಆ ವಾಂಛೆ ಇದ್ದದ್ದೇ. ಗಾಂಧೀಜಿಯ ಸಂಘಟನಾ ಪ್ರಣಾಳಿಕೆಯಲ್ಲಿ ಇಂತಹ ಶಿಸ್ತುಪಾಲನೆ, ಖಾಕಿ ಸಮವಸ್ತ್ರ, ಪಥ ಸಂಚಲನ, ಮುಂತಾದುವಕ್ಕೆ ಸ್ಥಾನವಿರಲಿಲ್ಲ. ನೇತಾಜಿ ಗಾಂಧೀಜಿಗೆ ಎಷ್ಟೇ ಆಪ್ತರಾಗಿರಲಿ, ಅವರ ಬಗ್ಗೆ ಗಾಂಧೀಜಿಗೆ ಅಪ್ರಕಟಿತ ಸಂದೇಹವೊಂದು ಗಾಢವಾಗಿತ್ತು. ಅವರ ಖಾದಿಯನ್ನು ಸುಭಾಸ್ ವಿರೋಧಿಸಿರಲಿಲ್ಲ. ಆದರೆ ಅದನ್ನು ಕುರಿತಂತೆ ಸಂಭ್ರಮಿಸುತ್ತಲೂ ಇರಲಿಲ್ಲ. ಅವರಿಗೆ ಸಮಾಜವಾದ ಮತ್ತು ಸಮವಸ್ತ್ರಧಾರಿ ಸ್ವಯಂಸೇವಕರನ್ನು ಒಳಗೊಂಡ ಕಾಂಗ್ರೆಸ್ ಸಂಘಟನೆ ಬಹಳ ಮುಖ್ಯವೆನಿಸಿತ್ತು. ಇದರಿಂದ ಸಾಕಷ್ಟು ವಿಚಲಿತರಾಗಿದ್ದ ಗಾಂಧೀಜಿ ಅಂದಿನ ಕಾಂಗ್ರೆಸ್ ಸಮಾಜವಾದಿಗಳ ಸಮುದಾಯದ ಅಧ್ಯಕ್ಷ ಆಚಾರ್ಯ ನರೇಂದ್ರ ದೇವ ಅವರಿಗೆ ಒಂದು ಪತ್ರದಲ್ಲಿ ಬರೆದಿದ್ದರು. "...ನೀವು ಭಾರತಕ್ಕೆ ಪ್ರಾಯೋಗಿಕ ಸಮಾಜವಾದ ನೀಡಬೇಕು, ಅದು ಭಾರತದ ಸನ್ನಿವೇಶಕ್ಕೆ ಒಗ್ಗಿಕೊಳ್ಳುವಂತಿರಬೇಕು. ನಿಮ್ಮ ವೈಜ್ಞಾನಿಕ ಸಮಾಜವಾದದ ಮಾತನ್ನು ದೂರವಿಡಿ.

...ಬರುವ ದಿನಗಳಲ್ಲಿ ಸಮಾಜವಾದದಲ್ಲಿ ಆಸಕ್ತಿ ಇರುವವರೊಡನೆ ಸಂಬಂಧ ಬೆಳೆಸಿ ಮತ್ತು ವಾಸ್ತವ ಸನ್ನಿವೇಶ ತಿಳಿದವರ ಸಹಯೋಗ ಪಡೆಯಿರಿ."

ಲಕ್ನೋ ಮತ್ತು ಫೈಜ್‌ಪುರ ಅಧಿವೇಶನಗಳ ತರುವಾಯದಲ್ಲಿ ಕಾಂಗ್ರೆಸ್ ಅಧಿವೇಶನವು ಹರಿಪುರದಲ್ಲಿ ಜರುಗುವುದಿತ್ತು. ಆ ವೇಳೆಗೆ ೧೯೩೫ರ ಭಾರತ ಸರ್ಕಾರದ ಕಾಯ್ದೆಯೂ ಹೊರಬಂದಿತ್ತು. ಅದರಡಿಯಲ್ಲಿ ಚುನಾವಣೆಗಳು ನಡೆದು ಕೆಲವು ರಾಜ್ಯಗಳಲ್ಲಿ ಕಾಂಗ್ರೆಸ್ ಸರ್ಕಾರಗಳು ಅಸ್ತಿತ್ವಕ್ಕೆ ಬಂದಿದ್ದವು. ಕಾರ್ಮಿಕರ ಮತ್ತು ರೈತರ ಚಳುವಳಿಗಳು ನಡೆದು ಅಲ್ಲಲ್ಲಿ ಗಲಭೆಗಳೂ ಉಂಟಾಗಿದ್ದವು. ಗಾಂಧೀಜಿಗೆ ಇವೆಲ್ಲಾ ಸರಿಬರಲಿಲ್ಲ. ೧೯೩೭ರ ಅಕ್ಟೋಬರ್‌ನಲ್ಲಿ ಉದ್ವೇಗದಿಂದ ಅವರು ಬರೆದರು : "ನಾಗರಿಕ ಸ್ವಾತಂತ್ರ್ಯವೆಂದರೆ ಅಪರಾಧಿಗಳಿಗೆ ಸ್ವಾತಂತ್ರ್ಯ ನೀಡುವುದೆಂದಲ್ಲ... ಕಾಂಗ್ರೆಸ್‌ನಲ್ಲಿ ಅಂತಹ ಪ್ರಸಂಗವು ಸಾಧುವಲ್ಲ." ಜನಸಮುದಾಯದ ಚಳುವಳಿಗಳೂ ತಮ್ಮ ಹಾದಿಯನ್ನು ತೊರೆಯುತ್ತಿವೆಯೆಂದು ಗಾಂಧೀಜಿಗೆ ಭಾಸವಾಗಲಾರಂಭಿಸಿತ್ತು. ೧೯೩೮ರ ಹರಿಪುರ ಕಾಂಗ್ರೆಸ್ ಅಧಿವೇಶನದಲ್ಲಿ ಅಧ್ಯಕ್ಷರಾಗಿ ಸುಭಾಸ್ ಚಂದ್ರ ಬೋಸ್ ಚುನಾಯಿತರಾದ್ದು ಅಂತಹ ಹಿನ್ನೆಲೆಯಲ್ಲಿ. – ಆಮೂಲಾಗ್ರ ಸಾಂಸ್ಥಿಕ ಬದಲಾವಣೆಗಾಗಿ ತುದಿಗಾಲ ಮೇಲೆ ನಿಂತ ಸುಭಾಸ್ ಒಂದು ಕಡೆ, ಸಂಪ್ರದಾಯಬದ್ಧ ಸಾಮಾಜಿಕ ಸಂಬಂಧಗಳ ಸಮರ್ಥಕ ಗಾಂಧೀಜಿ ಇನ್ನೊಂದು ಕಡೆ. ತಮಗೂ ಸುಭಾಸ್‌ಗೂ ಭಾರತದ ಸ್ವಾತಂತ್ರ್ಯ ಚಳುವಳಿಯ ವಿಚಾರದಲ್ಲಿ ಭಿನ್ನಮತವೇನೂ ಇಲ್ಲ, ಅವರಿಬ್ಬರ ಭಾಷೆಯಲ್ಲಿ ಭಿನ್ನತೆ ಇರಬಹುದಷ್ಟೆ, ಎಂದು ಗಾಂಧೀಜಿ ಬಹಿರಂಗವಾಗಿಯೇ ಹೇಳಿದ್ದರು. ಅಮೆರಿಕಾದ ಪತ್ರಕರ್ತನೊಬ್ಬನಿಗೆ ನೀಡಿದ ಸಂದರ್ಶನವೊಂದರಲ್ಲಿ ಹಾಗೆ ಹೇಳಲಾಗಿತ್ತು. ಆದರೂ ಮುಂದಿನ ಕಾಂಗ್ರೆಸ್ ಅಧಿವೇಶನದ ವೇಳೆಗೆ "ತಮ್ಮ" ಅಭ್ಯರ್ಥಿಯೆಂದು ಅಧ್ಯಕ್ಷ ಪದವಿಗೆ ಗಾಂಧೀಜಿ ಪಟ್ಟಾಭಿ ಸೀತಾರಾಮಯ್ಯ ಅವರನ್ನು ಕಣಕ್ಕೆ ಇಳಿಸುವ ಇಂಗಿತ ಹೊರಹಾಕಿದ್ದರು.

ಇದರಿಂದ ಘಾಸಿಗೊಳಗಾಗದ ಸುಭಾಸ್ ಅಧ್ಯಕ್ಷ ಪದವಿಗೆ ಅಭ್ಯರ್ಥಿಯಾದರು ಮತ್ತು ನಾಮಪತ್ರ ಹಿಂತೆಗೆದುಕೊಳ್ಳಬೇಕೆಂಬ ಸೂಚನೆಗೆ ಓಗೊಡಲಿಲ್ಲ. ಈ ಇಡೀ ಸಂಘರ್ಷದಲ್ಲಿ ಅವ್ಯಕ್ತವಾದ ಎಡ ಮತ್ತು ಬಲಗಳ ಘರ್ಷಣೆ ಇದ್ದುದು ಎಲ್ಲರಿಗೂ ತಿಳಿದಿತ್ತು ಮತ್ತು ಗಾಂಧೀಜಿ 'ಬಲ'ದ ಬಗೆಗೆ ಒಲವನ್ನು ಸ್ಪಷ್ಟವಾಗಿ ತೋರ್ಪಡಿಸಿದ್ದರು. ಚುನಾವಣೆಯಲ್ಲಿ ೧೫೮೦ ಮತ ಗಳಿಸಿದ ಸುಭಾಸ್, ಗಾಂಧೀಜಿ ಬೆಂಬಲವಿದ್ದ ಸೀತಾರಾಮಯ್ಯನವರನ್ನು ೨೦೩ ಮತಗಳಿಂದ ಪರಾಭವಗೊಳಿಸಿದ್ದರು. ಪ್ರಜಾಪ್ರಭುತ್ವದಲ್ಲಿ ನಂಬಿಕೆ ಇರಿಸಿಕೊಂಡಿದ್ದರೆನ್ನಲಾದ ಗಾಂಧೀಜಿಯವರಿಗೆ ಫಲಿತಾಂಶವು ನಿರಾಶಾದಾಯಕವಾಗಿ ಕಂಡಿತು. "ಪಟ್ಟಾಭಿ ಸೀತಾರಾಮಯ್ಯನವರ ಸೋಲು ನನ್ನ ಸೋಲು" ಎಂದು ನುಡಿದ ಗಾಂಧೀಜಿ ತಮ್ಮ ಅಸಮಾಧಾನವನ್ನು ಬಹಿರಂಗವಾಗಿ ಜಗಜ್ಜಾಹೀರು ಮಾಡಿದರು. ಸುಭಾಸ್ ಅವರು ಸ್ಪರ್ಧೆಯಿಂದ ನಿರ್ಗಮಿಸದಿದ್ದುದು ಅಪರಾಧವೇನೋ ಎಂಬಂತೆ ಕೆಲವರು ಅಭಿಪ್ರಾಯವನ್ನು ಸೂಚಿಸಿದ್ದು ಸೋಜಿಗದ ವಿಷಯವಾಗಿತ್ತು. ಬೋಸ್ ತಮ್ಮೊಂದು ಲೇಖನದಲ್ಲಿ ಅದಕ್ಕೆ ಪ್ರತಿಕ್ರಿಯಿಸಿದರು : "ದೇಶಕ್ಕೆ ಸ್ವಾತಂತ್ರ್ಯ ದಕ್ಕುವ ಪ್ರಸ್ತುತ ಸಂದರ್ಭದಲ್ಲಿ ಕಾಂಗ್ರೆಸ್‌ನ ಬಲಪಂಥೀಯರು ಬ್ರಿಟಿಷ್ ಸರ್ಕಾರದೊಡನೆ ಒಪ್ಪಂದ ಮಾಡಿಕೊಂಡು ದೇಶದ ಒಕ್ಕೂಟದ ರಚನೆಗೆ ಪೆಟ್ಟು ಕೊಡಲಿದ್ದಾರೆಂದು ನಂಬಲಾಗಿದೆ. ಆದ್ದರಿಂದಲೇ ಅವರಿಗೀಗ ಎಡಪಂಥೀಯ ಅಧ್ಯಕ್ಷ ಬೇಡವೆನಿಸಿದೆ. ... ಒಕ್ಕೂಟ – ವಿರೋಧಿ ಅಧ್ಯಕ್ಷನೇ ಅವರಿಗೆ ಬೇಕೆಂಬ ಧೋರಣೆ ಸುವ್ಯಕ್ತವಾಗಿದೆ." ಗಾಂಧೀಜಿ ಈ ವಿಷಯದಲ್ಲಿ ಹೀಗೆ ರಂಪ ಮಾಡಬಹುದೆಂದು ನೇತಾಜಿ ಭಾವಿಸಿರಲಿಲ್ಲ. ಸುಭಾಸರು ಕಾರ್ಯಕಾರಿ ಸಮಿತಿಗೆ ಆಯ್ಕೆ ಮಾಡಿದ್ದವರಲ್ಲಿ ೧೨ ಮಂದಿ ಸಾಮೂಹಿಕವಾಗಿ ರಾಜಿನಾಮೆ ನೀಡಿದರು ಮತ್ತು ನೆಹರು ಪ್ರತ್ಯೇಕವಾಗಿ ತಮ್ಮ ರಾಜಿನಾಮೆ ಪತ್ರ ಕಳಿಸಿಬಿಟ್ಟರು. ಈ ಪ್ರಸಂಗವು ತ್ರಿಪುರಿ ಕಾಂಗ್ರೆಸ್ ಅಧಿವೇಶನವನ್ನು ಸದಾಕಾಲಕ್ಕೂ ಕಪ್ಪಾಗಿಸಿತು. ಅಸಹಕಾರ ಚಳುವಳಿಯ ನಾಯಕರಾಗಿದ್ದ ಗಾಂಧೀಜಿ, ಕಾಂಗ್ರೆಸ್ ಅಧ್ಯಕ್ಷರಿಗೆ ಅಸಹಕಾರದ ರುಚಿ ತೋರಿಸಿದರು. ಮೇ ೧೯೩೯ರಲ್ಲಿ ಕಲ್ಕತ್ತೆಯಲ್ಲಿ ತುರ್ತು ಸಭೆ ನಡೆದು ರಾಜೇಂದ್ರ ಪ್ರಸಾದ್ ಅವರನ್ನು ಅಖಿಲ ಭಾರತ ಕಾಂಗ್ರೆಸ್ ಸಮಿತಿಯ ಅಧ್ಯಕ್ಷರನ್ನಾಗಿ "ಚುನಾಯಿಸಲಾಯಿತು." ಸತ್ಯಾಗ್ರಹದ ಚಳುವಳಿ ಹಿನ್ನೆಲೆಗೆ ಸರಿಯಿತು. ಎರಡನೆಯ ಮಹಾಯುದ್ಧ ಆರಂಭಗೊಂಡಿತು. ಕಾಂಗ್ರೆಸ್‌ನ ಮುಂದಿನ ನಡೆ ಗೊಂದಲದಲ್ಲಿ ಸಿಲುಕಿತು. ಆ ಸಂದರ್ಭದಲ್ಲಿ ಸುಭಾಸ್ ಚಂದ್ರರು "ಫಾರ್ವರ್ಡ್ ಬ್ಲಾಕ್" ಎಂಬ ಹೆಸರಿನಲ್ಲಿ ತಮ್ಮದೇ ಬಣ ರಚಿಸಿದರಾದ್ದರಿಂದ ಒಂದರ್ಥದಲ್ಲಿ ಕಾಂಗ್ರೆಸ್ಸಿನಿಂದ ತಿರಸ್ಕೃತರಾಗಿ ಹೊರಬಂದರು.

ಸುಗತ್ ಬೋಸ್ ಇತ್ತೀಚಿನವರೆಗೂ ತೃಣಮೂಲ ಕಾಂಗ್ರೆಸ್‌ನ ಪ್ರತಿನಿಧಿಯಾಗಿ ಲೋಕಸಭಾ ಸದಸ್ಯರಾಗಿದ್ದವರು ಈಗೇನೋ ಹಾರ್ವರ್ಡ್‌ನಲ್ಲಿ ಪ್ರಾಧ್ಯಾಪಕರಾಗಿರ ಬಹುದು, ಆದರೆ ಅವರು ಗಾಂಧಿ – ಸುಭಾಸ್ ದ್ವಂದ್ವವನ್ನು ಇದ್ದಂತೆ ಗುರುತಿಸಲು ಹಿಂದೇಟು ಹಾಕಿದ್ದಾರೆ. ಇದು ಕೇವಲ ಪರಸ್ಪರ ಪ್ರೀತಿ–ಗೌರವಗಳ ಪ್ರಶ್ನೆಯಲ್ಲ; ಇದು ಮೂಲಭೂತ ರಾಜಕೀಯ ಸೈದ್ಧಾಂತಿಕತೆಯಲ್ಲಿನ ವಿಭಿನ್ನ ದೃಷ್ಟಿಕೋನಗಳ ಅನಾವರಣ. ಸುಭಾಸ್ ಅವರ ನಂತರದ ತೀರ್ಮಾನ ಮತ್ತು ಕ್ರಿಯೆ ಇತಿಹಾಸಪ್ರಸಿದ್ಧವಾದುದು. ಬ್ರಿಟಿಷರನ್ನು ಎದುರಿಸಲು ಹೊರದೇಶಕ್ಕೆ ತೆರಳಿ ಸೈನ್ಯವೊಂದನ್ನು ರಚಿಸಬೇಕೆಂಬ ಗಾಢ ಭಾವನೆಯು ಅವರನ್ನು ರಹಸ್ಯವಾಗಿ ಕಲ್ಕತ್ತಾದಿಂದ ಅಫ್ಘಾನಿಸ್ತಾನ್ ಮುಖಾಂತರ ಜರ್ಮನಿಗೆ ಕೊಂಡೊಯ್ದಿತು. ಅಲ್ಲಿಂದ ಜಪಾನ್‌ಗೆ ತೆರಳಿದ್ದು, ಸಿಂಗಪುರದಲ್ಲಿ ಭಾರತದ ರಾಷ್ಟ್ರೀಯ ಸೇನೆ ಕಟ್ಟಿದ್ದು, ಇತ್ಯಾದಿ ಸಂಗತಿಗಳನ್ನು ವಿವರವಾಗಿ ದಾಖಲಿಸುವ ಅಗತ್ಯವಿಲ್ಲ. ಚಿತ್ತರಂಜನ ದಾಸರು ೧೯೨೫ರಲ್ಲಿ ಗತಿಸಿದ ನಂತರ ನೇತಾಜಿಗೆ ಕಾಂಗ್ರೆಸ್‌ನಲ್ಲಿ ಆಶಾಭಂಗವು ಮಹತ್ತರ ಹೊಡೆತದಂತೆ ಕಾಡುತ್ತಲೇ ಬಂದಿತ್ತು.

ಭಾರತದಲ್ಲಿ ಸ್ವಾತಂತ್ರ್ಯ ಚಳುವಳಿಯ ಶಿಸ್ತಿನ ಸಿಪಾಯಿಯಾಗಿದ್ದ ನೇತಾಜಿ ಎಂದೂ ಅನ್ಯಾಕ್ರಮಣಶೀಲತೆಯನ್ನಾಗಲಿ, ಜನಾಂಗೀಯ ದ್ವೇಷವನ್ನಾಗಲಿ ಪ್ರದರ್ಶಿಸಿದ್ದವರಲ್ಲ. ಆಮರಣಾಂತ ಉಪವಾಸ ಮಾಡಿ ಕಾರಾಗೃಹದಲ್ಲೇ ಮಡಿದ ವೀರ ಜತಿನ್ ದಾಸ್‌ನ ಶವವನ್ನು ದೆಹಲಿಯಿಂದ ಕಲ್ಕತ್ತೆಗೆ ತರಲು ಸ್ವತಃ ದೆಹಲಿಗೆ ತೆರಳಿದ್ದವರು ನೇತಾಜಿ, ಶವವನ್ನು ಒಂದು ವಿಶೇಷ ರೈಲಿನಲ್ಲಿ ಸಾಗಿಸಿಕೊಂಡು ಬಂದವರು ನೇತಾಜಿ. ಅವರು ತೀವ್ರ ಎಡಪಂಥೀಯ ಆಗಲು ಸಾಧ್ಯವಿತ್ತು, ಫ್ಯಾಸಿಸ್ಟ್ ಆಗುವ ಸೂಚನೆ ಸುತರಾಂ ಇರಲಿಲ್ಲ. ಜಪಾನಿನಲ್ಲಿ ಅವರು ಫ್ಯಾಸಿಸಂನಿಂದ ಸತತವಾಗಿ ಅಂತರ ಕಾಯ್ದುಕೊಂಡಿದ್ದುದಕ್ಕೆ ಅನೇಕ ದಾಖಲೆಗಳಿವೆ. ಟೋಕಿಯೋ ವಿಶ್ವವಿದ್ಯಾನಿಲಯದಲ್ಲಿ ಬೃಹತ್ ವಿದ್ಯಾರ್ಥಿ ಸಭೆಯೊಂದನ್ನು ಉದ್ದೇಶಿಸಿ ಮಾತನಾಡಿದ್ದುದನ್ನು ಇಲ್ಲಿ ನೆನೆಯಬೇಕು. ಯಾವ ನಿರ್ಬಂಧ ಅಥವಾ ಮುಜುಗರವೂ ಇಲ್ಲದೆ ತಮ್ಮ ರಾಷ್ಟ್ರೀಯ ನಿಲುವನ್ನು ನಿಷ್ಕೃಷ್ಟವಾಗಿ ಅದರಲ್ಲಿ ಪ್ರತಿಪಾದಿಸಿದ್ದಾರೆ, ಜಪಾನಿನ ಯುದ್ಧ ನಿರೀಕ್ಷೆಗಳಿಂದ ಸಂಪೂರ್ಣವಾಗಿ ಅಂತರ ಕಾಯ್ದುಕೊಂಡಿದ್ದಾರೆ. ಸುಭಾಸ್ ಚಂದ್ರಬೋಸರ ಮಾಪನ ಮಾಡುವಾಗ ಟೋಕಿಯೋ ಸಾರ್ವಜನಿಕ ಭಾಷಣವನ್ನು ಅಗತ್ಯವಾಗಿ ಗಮನಿಸಬೇಕು.

ನಮ್ಮ ದೇಶದ ಇಂದಿನ ಐತಿಹಾಸಿಕ ಘಟ್ಟದಲ್ಲಿ ಸುಭಾಸರ ನಡೆಯನ್ನು ಮತ್ತು ಫ್ಯಾಸಿಸ್ಟ್ ಪ್ರವೃತ್ತಿಯ ಮೂಲ ಲಕ್ಷಣವನ್ನು ಸಾರವತ್ತಾಗಿ ಗ್ರಹಿಸುವ ಅವಶ್ಯಕತೆ ಇದೆ. ಇತಿಹಾಸದಲ್ಲಿ 'ಹಾಗಾಗಿದ್ದರೆ, ಹೀಗಾಗಿದ್ದಿದ್ದರೆ' ಎಂಬ ಕುತೂಹಲ ಸಾರ್ವಕಾಲಿಕವಾದ್ದು. ನೇತಾಜಿ ವಿಷಯದಲ್ಲಿ ಗಾಂಧೀಜಿ ಮೊಂಡುತನ ಪ್ರದರ್ಶಿಸಿಲ್ಲದಿದ್ದರೆ ನಮ್ಮ ದೇಶದ ಚರಿತ್ರೆ ಏನಾಗಿದ್ದಿರಬಹುದಾಗಿತ್ತು? ಇದು ನಿರರ್ಥಕವಾದ ಪ್ರಶ್ನೆ; ಆದರೆ ನೇತಾಜಿ ಸಮಾಜವಾದಿ ಬಣದವರಾಗಿದ್ದರು. ಆರ್ಥಿಕ ಯೋಜನೆಗಳಲ್ಲಿ ನಂಬಿಕೆ ಇರಿಸಿದ್ದವರಾಗಿದ್ದರು. ವಸಾಹತು ಮತ್ತು ಸಾಮ್ರಾಜ್ಯವಾದಗಳ ಕಟ್ಟಾ ವಿರೋಧಿಯಾಗಿದ್ದರು. ಐ.ಎನ್.ಎ. ಯೋಧರ ವಿಚಾರಣೆ ದೆಹಲಿಯ ಕೆಂಪುಕೋಟೆಯಲ್ಲಿ ನಡೆದಿದ್ದು ಸರಿಯಷ್ಟೆ; ಆ ವಿಚಾರಣೆಯಲ್ಲಿ ಹೆಜ್ಜೆಹೆಜ್ಜೆಗೂ ನೇತಾಜಿ ಮತ್ತು ಐ.ಎನ್.ಎ. ಹೇಗೆ ಫ್ಯಾಸಿಸ್ಟರ ವಿರುದ್ಧ ಧ್ರುವದಲ್ಲೇ ಮುನ್ನಡೆದಿದ್ದರು ಎಂಬುದು ಸಾಬೀತಾಗಿತ್ತು. ಐ.ಎನ್.ಎ. ವೀರರಲ್ಲಿ ಹತ್ತಾರು ಮಂದಿ ಕಮ್ಯುನಿಸ್ಟರಾದರು, ಬೆರಳೆಣಿಕೆಯ ಕೆಲವರು ಕಾಂಗ್ರೆಸ್ ಸೇರಿದರು; ಯಾರೂ ಮತಾಂಧ ಶಕ್ತಿಗಳೊಡನೆ ಕೈಜೋಡಿಸಲಿಲ್ಲ. ಬೇರೆಷ್ಟೋ ನಾಯಕರಂತೆ ಈ ಬೌದ್ಧಿಕ – ರಾಜಕೀಯ ತತ್ವಗಳನ್ನು ತೂಗುಯ್ಯಾಲೆಯ ಮೇಲೆ ಸುಭಾಸ್ ಕೂರಿಸಿರಲಿಲ್ಲ. ಗಾಂಧೀಜಿಗೆ ಅದು ಹಿತವೆನಿಸದಿದ್ದುದು ಇತಿಹಾಸದ ಒಂದು ವ್ಯಂಗ್ಯ. ಗಾಂಧೀಜಿ ಹೀಗೂ ಇದ್ದರು ಎಂಬುದೇ ಆಶ್ಚರ್ಯಕರ. ಆ ವ್ಯಸನವು ನಮ್ಮನ್ನು ನಿರಂತರವಾಗಿ ಕಾಡುತ್ತಿರುತ್ತದೆ.

**ಜಿ. ರಾಮಕೃಷ್ಣ**
೨–ಎಫ್, ಪವನ ಪರಂಜ್ಯೋತಿ ಅಪಾರ್ಟ್‌ಮೆಂಟ್ಸ್
೨೨/೧, ೪ನೇ ಕ್ರಾಸ್, ಕಾವೇರಿನಗರ, ಬನಶಂಕರಿ ೩ನೇ ಹಂತ
ಬೆಂಗಳೂರು – ೫೬೦ ೦೮೫



# ಕರ್ನಾಟಕದ ಗಾರ್ಮೆಂಟ್ಸ್ ಉದ್ಯಮದಲ್ಲಿ ವಲಸೆ ಕಾರ್ಮಿಕರು

ಪ್ರತಿಭಾ ಆರ್.

"ನಾನು ಬಿಹಾರದ, ರವಿದಾಸ್ ಸಮುದಾಯದವಳು. ರಬಾಯಿ ಗ್ರಾಮದಿಂದ ಬಂದಿದೀನಿ, ಬೆಂಗಳೂರಿನಲ್ಲಿ ಹೆಂಗಸರಿಗೆ ಕೆಲಸ ಸಿಗುತ್ತೆ ಅಂತ ಹೇಳಿದ್ರು, ಅಲ್ಲಿ ಮಳೆ ಇಲ್ಲ, ಬೆಳೆ ಇಲ್ಲ. ಅದಕ್ಕೇ ಇಲ್ಲಿಗೆ ಬಂದಿದೀನಿ. ಗಾರ್ಮೆಂಟ್ಸ್‌ನಲ್ಲಿ ಟೈಲರ್ ಕೆಲಸ ಮಾಡ್ತಿದೀನಿ ಮಕ್ಕಳನ್ನು ನನ್ನ ತಂದೆ ತಾಯಿಯ ಹತ್ತಿರ ಬಿಟ್ಟಿದೀನಿ."

ಗಾರ್ಮೆಂಟ್ಸ್ ಕೆಲಸಕ್ಕೆ ವಲಸೆ ಬಂದ ಮಹಿಳಾ ಕಾರ್ಮಿಕರನ್ನು ಮಾತನಾಡಿಸುವ ಸಲುವಾಗಿ ನಾನು ಬೊಮ್ಮನ ಹಳ್ಳಿಯ ಕಾರ್ಮಿಕರ ಮನೆಯೊಂದಕ್ಕೆ ಹೋದಾಗ ಇವು ಸಂಕೋಚದಿಂದ ಮೈಮುದುರಿ ಕುಳಿತ ಅನಿತಾ ದೇವಿಯ ಮಾತುಗಳು. ಅವರ ಜೊತೆ ಅಲ್ಲಿದ್ದವರು ಮೀನಾದೇವಿ, ಬೇಬಿದೇವಿ, ರೇಖಾದೇವಿ, ಶಾಂತಿದೇವಿ, ಸುಶೀಲಾ ದೇವಿ, ಲಲಿತಾದೇವಿ (ಹೆಸರು ಬದಲಿಸಿದೆ) ಮುಂತಾದವರು. ಇದೇಕೆ ಎಲ್ಲರ ಹೆಸರ ಮುಂದೆ ದೇವಿ? ಅಂದರೆ, "ನಮ್ಮಲ್ಲಿ ಮದುವೆಯಾದವರೆಲ್ಲ ದೇವಿ, ಮದುವೆಯಾಗದಿದ್ದರೆ ಕುಮಾರಿ" ಎಂದು ಹಿಂದಿಯಲ್ಲಿ ವಿವರಿಸಿದರು. ನನಗೆ ಬಿಹಾರದ ಮಾಜಿ ಮುಖ್ಯಮುಂತ್ರಿ ರಾಬ್ಡೀದೇವಿಯ ನೆನಪಾಯಿತು.

ಇತ್ತೀಚಿನ ೫–೬ ವರ್ಷಗಳಲ್ಲಿ ಗಾರ್ಮೆಂಟ್ಸ್ ಉದ್ಯಮಕ್ಕೆ ದೂರದ ಈ ರಾಜ್ಯಗಳಿಂದ ಕೆಲಸ ಅರಸಿ ಕಾರ್ಮಿಕರು ವಲಸೆ ಬರುತ್ತಿದ್ದಾರೆ. ಕೇವಲ ೨೦೦೦, ೮೦೦೦ಕ್ಕೆ ಅಲ್ಲಿಂದ ಇಲ್ಲಿಗೆ ವಲಸೆ ಬರುವ ಹಿಂದಿನ ಕಾರಣ, ಅನಿವಾರ್ಯತೆಯನ್ನು ನಾವು ಕೆದಕುತ್ತಾ ಹೋದರೆ, ಅದರ ಹಿಂದೆ ಕಾಣಸಿಗುವುದು ಇಡೀ ಜಾಗತಿಕ ಸನ್ನಿವೇಶ, ಪ್ರಾಕೃತಿಕ ವೈಫಲ್ಯ ಮತ್ತು ಸರ್ಕಾರಗಳ ಧೋರಣೆಗಳು.

**ವಲಸೆಯ ಪರಿಕಲ್ಪನೆ**

'ಮೊದಲು ಮನುಷ್ಯರು ಒಂದೆಡೆ ನೆಲೆಸಿರಲೇ ಇಲ್ಲ. ಆಹಾರ ಅರಸಿಕೊಂಡು ಸ್ಥಳದಿಂದ ಸ್ಥಳಕ್ಕೆ ತಮ್ಮ ವಾಸ್ತವ್ಯ ಬದಲಾಯಿಸುತ್ತಲೇ ಇದ್ದರು. ಕೃಷಿಯ ಆವಿಷ್ಕಾರದ ನಂತರವೇ ಮನುಷ್ಯರು ಒಂದೆಡೆ ನೆಲೆಸಿ ನಾಗರಿಕತೆ ಬೆಳೆಯಲು ಆರಂಭಿಸಿದ್ದು' ಎಂದು ಆಂಥ್ರೋಪಾಲಜಿಸ್ಟ್‌ಗಳು ಅಭಿಪ್ರಾಯಪಡುತ್ತಾರೆ. ಆದರೆ ನಾಗರಿಕತೆ ಬೆಳೆದಂತೆಲ್ಲ ದೇಶಗಳ ನಡುವಿನ ಯುದ್ಧಗಳು, ಪ್ರಾಕೃತಿಕ ವಿಕೋಪ, ರಾಜಕೀಯ ಅಶಾಂತಿ, ಜನಾಂಗೀಯ ದ್ವೇಷ, ಸರ್ಕಾರಗಳ ರಾಜತಾಂತ್ರಿಕ ತೀರ್ಮಾನಗಳು, ಆಡಳಿತ ವೈಫಲ್ಯ ಹೀಗೆ ಹಲವಾರು ಕಾರಣಗಳಿಗೆ ದೇಶದೇಶಗಳ ನಡುವೆ ಮನುಷ್ಯರ ವಲಸೆಗಳು ಸಂಭವಿಸುತ್ತಲೇ ಇವೆ. ದೇಶದ ವಿದೇಶಾಂಗ ನೀತಿಯ ಅಡಿಯಲ್ಲಿ ಕಾನೂನಿನ ಅಡಿಯಲ್ಲಿ ವಲಸೆಯನ್ನು ನಿಯಂತ್ರಿಸಲಾಗಿದ್ದು, ಸೂಕ್ತ ಕಾರಣವಿಲ್ಲದೆ, ದಾಖಲೆಯಿಲ್ಲದೆ ಒಂದು ದೇಶದಿಂದ ಮತ್ತೊಂದು ದೇಶಕ್ಕೆ ಹೋಗುವುದು ಅಷ್ಟು ಸುಲಭವಿಲ್ಲ. ಆದರೂ ಜನಾಂಗೀಯ ದ್ವೇಷದಿಂದ ತತ್ತರಿಸಿ, ಕೇವಲ ಜೀವ ಉಳಿಸಿಕೊಳ್ಳಲು ದೇಶ ದೇಶಗಳಿಗೆ ಯಾವುದೇ ಪರವಾನಗಿ ಇಲ್ಲದೆ (ವೀಸಾ ಪಾಸ್‌ಪೋರ್ಟ್) ವಲಸೆ ಹೋಗುತ್ತಿರುವ ಸಮುದಾಯಗಳನ್ನೂ ನಾವು ಕಾಣುತ್ತಿದ್ದೇವೆ. ಈ ಹಿನ್ನೆಲೆಯಲ್ಲಿ ಸಿರಿಯಾದ ಪ್ರಜೆಗಳು ತಮ್ಮ ನೆಲದಲ್ಲಿ ಸುರಕ್ಷತೆಯಿಲ್ಲದೆ ಯೂರೋಪ್‌ಗಳಿಗೆ ವಲಸೆ ಹೋದದ್ದನ್ನೂ, ಅದಕ್ಕೆ ಅಲ್ಲಿನ ಪ್ರಜೆಗಳು/ಸರ್ಕಾರಗಳು ಒಡ್ಡಿದ ಪ್ರತಿರೋಧವನ್ನು ನಾವಿಲ್ಲಿ ನೆನಪಿಸಿಕೊಳ್ಳಬಹುದು. ನೆರೆಯ ಬಂಗ್ಲಾದೇಶದ ರೋಹಿಂಗ್ಯಾ ಮುಸ್ಲಿಮರ ಪರಿಸ್ಥಿತಿಯೂ ಇದೇ ಆಗಿದೆ.

ಆದರೆ ದೇಶದೊಳಗೇ ನಡೆಯುವ ವಲಸೆಯು ಸಕ್ರಮವಾದದ್ದು. ಸಂವಿಧಾನ ಬದ್ಧವಾದದ್ದು. ಭಾರತದ ಪ್ರಜೆಯು ಜಾತಿ, ಧರ್ಮ, ಭಾಷೆ ಎಂಬ ಯಾವ ತಾರತಮ್ಯವೂ ಇಲ್ಲದೆ ಇಡೀ ಭಾರತದಲ್ಲಿ ಎಲ್ಲಿ ಬೇಕಾದರೂ ನೆಲೆಯೂರಿ, ತನ್ನ ಜೀವನ ಸಾಗಿಸಲು ಸಾಧ್ಯವಾಗಬೇಕೆಂಬ ಬಹು ದೊಡ್ಡ ಆಶಯದಿಂದ ಸಂವಿಧಾನ ವ್ಯಕ್ತಿಗಳಿಗೆ ಚಲನವಲನದ ಹಕ್ಕನ್ನು ನೀಡಿದೆ. ಆದರೆ ಭಾರತದ ನೂರು ಕಿ.ಮೀ.ಗೊಂದು ರೀತಿ ಸಂಸ್ಕೃತಿ ಬದಲಾಗುವ, ನೂರಾರು ಭಾಷೆಗಳಿರುವ

**ಜಾಗತೀಕರಣದ, ನವ ಉದಾರವಾದೀ ಆರ್ಥಿಕತೆಯ ಪರಿಣಾಮವಾಗಿ ಪ್ರಜೆಗಳ ಮೂಲಭೂತ ಅವಶ್ಯಕತೆಗಳನ್ನು ಪೂರೈಸುವ ಜವಾಬ್ದಾರಿಯನ್ನು ಸರ್ಕಾರಗಳು ಕೈ ಬಿಟ್ಟು 'ಕಲ್ಯಾಣ ರಾಜ್ಯ'ದ ಪರಿಕಲ್ಪನೆಯನ್ನೇ ಬಿಟ್ಟುಕೊಟ್ಟಿತೋ, ಅಲ್ಲಿಂದಲೇ ಬಡವರ ಕಾರ್ಮಿಕರ ಬದುಕು ದುಸ್ತರವಾಗಿದೆ. ವ್ಯಕ್ತಿಗಳು ದೇಶಾದ್ಯಂತ ತಮ್ಮಿಷ್ಟ ಬಂದ ಕಡೆ ಬದುಕಬಹುದು ಎಂಬ ಸಂವಿಧಾನದ ಹಕ್ಕಿನ ಹಿನ್ನೆಲೆಯಲ್ಲಿ ವಲಸೆಯನ್ನು ಒಪ್ಪಿಕೊಳ್ಳಬೇಕೋ ಅಥವಾ ಕಾರ್ಮಿಕರ ಬದುಕನ್ನು ದುಸ್ತರಗೊಳಿಸುವಂತಹ, ಅವರ ನೆಲದಿಂದ ಹೊರದಬ್ಬುವಂತಹ ರಾಜಕೀಯ, ಸಾಮಾಜಿಕ ಕಾರಣಗಳ ಹಿನ್ನೆಲೆಯಲ್ಲಿ, ಸಂವಿಧಾನದ ಆಶಯದ ಕ್ರೂರ ವ್ಯಂಗ್ಯವಾಗಿ ಇದನ್ನು ಪರಿಗಣಿಸಬೇಕೋ? ಉತ್ತರ ಸರಳವಾಗಿಲ್ಲ. ಕಟ್ಟಕಡೆಗೆ ಮುಖ್ಯವಾಗುವುದು ಕಾರ್ಮಿಕರ ದಿನನಿತ್ಯದ ಬದುಕು ಅಷ್ಟೇ.**

ಬಹುತ್ವದ ಸಂಸ್ಕೃತಿಯಲ್ಲಿ ಒಂದು ಕಡೆಯಿಂದ ಮತ್ತೊಂದು ಕಡೆಗೆ ವಲಸೆ ಹೋಗುವುದೂ ಸಹ ಸವಾಲಾಗಿದೆ. ಈ ನಿಟ್ಟಿನಲ್ಲಿ ತಾವು ಹುಟ್ಟಿ ಬೆಳೆದ ದೂರದ ಬಿಹಾರ, ಛತ್ತೀಸ್‌ಘಡದಿಂದ ಕರ್ನಾಟಕದ ಗಾರ್ಮೆಂಟ್ಸ್ ಉದ್ಯಮಕ್ಕೆ ಬಂದ ಕಾರ್ಮಿಕರು ಎದುರಿಸುತ್ತಿರುವ ಕಷ್ಟಗಳನ್ನು ಇಲ್ಲಿ ಚರ್ಚಿಸಲಾಗಿದೆ.

ವಲಸೆಯನ್ನು ನೋಡುವ ದೃಷ್ಟಿಕೋನವೂ ಸಹ ಮುಖ್ಯವಾಗುತ್ತದೆ. ಏಕೆಂದರೆ, ವ್ಯಕ್ತಿಗಳು ತಮಗೆ ಉತ್ತಮ ಅವಕಾಶ ಸಿಗುವ ಕಡೆಗೆ ವಲಸೆ ಹೋಗುವುದು ಒಂದು ರೀತಿಯಲ್ಲಾದರೆ, ತಮ್ಮ ತಮ್ಮ ರಾಜ್ಯದಲ್ಲಿ ಜೀವನೋಪಾಯದ ಅವಕಾಶಗಳೇ ಇಲ್ಲದೆ ಬದುಕನ್ನು ಅರಸಿಕೊಂಡು ವಲಸೆ ಹೋಗುವುದು ಇನ್ನೊಂದು. ಮೊದಲ ವಿಧದಲ್ಲಿ ವಿದ್ಯಾರ್ಥಿಗಳು, ವಿದ್ಯಾವಂತರು ಉತ್ತಮ ಅವಕಾಶಗಳನ್ನು ಅರಸಿ ಬಂದರೆ, ಎರಡನೆಯ ವಿಧದಲ್ಲಿ ಬಡವರು, ಕಾರ್ಮಿಕರು, ತಮ್ಮ ನೆಲದಲ್ಲಿ ಜೀವನಕ್ಕೆ ಯಾವುದೇ ಆಧಾರವಿಲ್ಲದೆ ಎಲ್ಲಿ ಕೆಲಸ ಸಿಗುವುದೋ ಅಲ್ಲಿಗೆ ವಲಸೆ ಬರುತ್ತಾರೆ. ರಾಜಕೀಯ–ಸಾಮಾಜಿಕ ಪರಿಸ್ಥಿತಿಗಳು ಅವರನ್ನು ಆ ಅನಿವಾರ್ಯತೆಗೆ ತಳ್ಳಿವೆ. ಇದು ಸಂವಿಧಾನದ ಆಶಯದ ಕ್ರೂರ ವ್ಯಂಗ್ಯವೇ ಸರಿ.

ಉಡುಪು ಉತ್ಪಾದಿಸುವ ಅಂತರರಾಷ್ಟ್ರೀಯ ಪ್ರತಿಷ್ಠಿತ ಬ್ರಾಂಡ್‌ಗಳು ತಮ್ಮ ಉತ್ಪಾದನೆಗಾಗಿ ಪ್ರಪಂಚದ ದಕ್ಷಿಣ ಭಾಗದ ಕಾರ್ಮಿಕ ಪಡೆಯ ಮೇಲೇ ಅವಲಂಬಿತವಾಗಿವೆ. ಬದುಕಿ ಉಳಿಯಲು ಕೆಲಸ ಸಿಕ್ಕರೆ ಸಾಕು ಎಂದು ಕಡಿಮೆ ಕೂಲಿಗೂ ಕೆಲಸ ಮಾಡಲು ತಯಾರಿರುವ ಈ ದೇಶಗಳ ಕಾರ್ಮಿಕ ಪಡೆಯ ಅಸಹಾಯಕತೆಯನ್ನೇ ಇವು ಬಂಡವಾಳವನ್ನಾಗಿಸಿಕೊಂಡಿವೆ. "ನಮ್ಮ ಕರಾರು ಒಪ್ಪಿದಿದ್ದರೆ, ನೀವಲ್ಲದಿದ್ದರೆ ಇನ್ನೊಬ್ಬರು" ಎಂಬ ಧೋರಣೆಯನ್ನು ಬ್ರಾಂಡ್‌ಗಳು ದಕ್ಷಿಣದ ದೇಶಗಳ ನಡುವೆ "ಟ್ರಂಪ್‌ಕಾರ್ಡ್" ರೀತಿಯಲ್ಲಿ ಬಳಸುತ್ತಿವೆ. ಇದು ಹಾಗೆಯೇ ಮುಂದುವರೆದು ಇದೇ ಅಪಾಯಕಾರೀ ಧೋರಣೆಯನ್ನೇ ಆಡಳಿತ ವರ್ಗವು ಕಾರ್ಮಿಕರ ಮೇಲೂ ಪ್ರಯೋಗಿಸುತ್ತಿದೆ. ಕೆಲಸದ ಅನಿವಾರ್ಯತೆಯಿಂದ ಕೊಟ್ಟಷ್ಟು ಕೂಲಿಗೆ ಅವರು ಹೇಳಿದಷ್ಟು ಕೆಲಸ ಮಾಡಬೇಕಾದ ಪರಿಸ್ಥಿತಿಯು ಈ ನೆಲದ ಕಾರ್ಮಿಕ ಕಾನೂನುಗಳ ಅಸ್ತಿತ್ವವನ್ನೇ ಪ್ರಶ್ನಿಸುವಂತಿದೆ. ಜಾಗತೀಕರಣದಿಂದ ಮುಕ್ತ ಬಂಡವಾಳದ ಹರಿವು, ನಿರ್ಬಂಧಗಳ ಸಡಿಲಿಕೆಗಳು ಪ್ರಾರಂಭವಾದಾಗಿನಿಂದ ಅಂತರರಾಷ್ಟ್ರೀಯ ಬ್ರಾಂಡ್‌ಗಳ ಈ ಧೋರಣೆಯು ಎಗ್ಗಿಲ್ಲದೆ ಸಾಗಿದೆ.

ಭಾರತದ ಆಂತರಿಕ ವಲಸೆಯ ಪ್ರಮಾಣದ ೭೦.೭%ರಷ್ಟು ಮಹಿಳೆಯರಾಗಿದ್ದು, ಅವರನ್ನು ಸಮಾಜದ ಆರ್ಥಿಕ, ಸಾಂಸ್ಕೃತಿಕ, ಸಾಮಾಜಿಕ ಮತ್ತು ರಾಜಕೀಯ ಜೀವನದಿಂದ ಹೊರಗಿಡಲಾಗಿದೆ ಮತ್ತು ಅವರನ್ನು ಎರಡನೆಯ ದರ್ಜೆಯ ನಾಗರಿಕರನ್ನಾಗಿ ಪರಿಗಣಿಸಲಾಗುತ್ತಿದೆ ಎಂದು ೨೦೧೫ರ ಯುನೆಸ್ಕೋ ವರದಿಯಲ್ಲಿ ಹೇಳಲಾಗಿದೆ.

ಸರ್ಕಾರಗಳ ಆರ್ಥಿಕ ನೀತಿಗಳೂ ಸಹ ಈ ಜಾಗತೀಕರಣದ ಹಿಡಿತಕ್ಕೆ ಸಿಕ್ಕಿ ಪ್ರಜೆಗಳ ಕಲ್ಯಾಣವನ್ನು ಮರೆತು, ಕಾರ್ಪೊರೇಟ್‌ಗಳನ್ನು ಓಲೈಸುತ್ತಿವೆ. ದೇಶದ ಯುವ ಸಂಪನ್ಮೂಲದ ವ್ಯಕ್ತಿತ್ವವು ಸಂಪೂರ್ಣ ಕೌಶಲ್ಯದೊಂದಿಗೆ ವಿಕಸಿತವಾದರೆ ಅವರು ದೇಶದ ಆಸ್ತಿಯಾಗುತ್ತಾರೆ. ಆದರೆ ಸರ್ಕಾರಗಳು ಅದನ್ನು ನಿರ್ಲಕ್ಷಿಸುತ್ತಿವೆ. ಅರೆಕಾಲಿಕ ಉದ್ಯೋಗಕ್ಕಾಗಿ ಬೇಕಾದ ದಿಢೀರ್ ಕೋರ್ಸ್‌ಗಳನ್ನು ನಡೆಸುವ ಮೂಲಕ, ಎರಡೇ ತಿಂಗಳ ಹೊಲಿಗೆ ತರಬೇತಿಗಳನ್ನು ನೀಡುವ ಮೂಲಕ ಯಾವುದರಲ್ಲೂ ಪೂರ್ಣ ಕೌಶಲ್ಯ ಹೊಂದದ ಅಕುಶಲ ಕಾರ್ಮಿಕ ಪಡೆಯನ್ನೇ ಸೃಷ್ಟಿಸುತ್ತಿವೆ. ಹೀಗೆ ತಯಾರಾದ ಕಾರ್ಮಿಕರು ಅದಕ್ಕೆ ತಕ್ಕಂತಹ ಉದ್ಯೋಗವು ಎಲ್ಲಿ ಸಿಗುತ್ತದೆಯೋ ಅಲ್ಲಿಗೆ ವಲಸೆ ಬರಬೇಕಾಗಿದೆ. ಇದು ಅವರು ಇಷ್ಟಪಟ್ಟು ಬರುವುದಲ್ಲ, ಅನಿವಾರ್ಯವಾಗಿ ಅವರನ್ನು ಈ ರೀತಿಯ ವಲಸೆಗೆ ದೂಡಲಾಗುತ್ತಿದೆ. ದುಡಿಯಲು, ಪ್ರಮಾಣ ಪತ್ರ ಪಡೆದುಕೊಳ್ಳಲು ಯುವ ಸಮುದಾಯವು ತನ್ನ ನೆಲವನ್ನು ಬಿಟ್ಟು ಬೇರೆಡೆಗೆ ವಲಸೆ ಹೋಗುವ ಸಂದರ್ಭವನ್ನು ಸೃಷ್ಟಿಮಾಡಿವೆ.

ಇನ್ನೊಂದೆಡೆ ಭೂ ರಹಿತ ಕೃಷಿ ಕೂಲಿ ಕಾರ್ಮಿಕರು ಇಂದು ಮಳೆ, ಬೆಳೆಯಿಲ್ಲದೆ ಹಾಗೂ ಸರ್ಕಾರದ ಕೃಷಿ ನೀತಿಗಳಿಂದಾಗಿ ಕೆಲಸವಿಲ್ಲದೆ ಅತ್ಯಂತ ಅಭದ್ರತೆಯಿಂದ ಉದ್ಯೋಗವನ್ನರಸಿ ವಲಸೆ ಬರುತ್ತಿದ್ದಾರೆ. ಇತ್ತೀಚಿನ ವರ್ಷಗಳಲ್ಲಿ ಈಶಾನ್ಯ ಮತ್ತು ಉತ್ತರ ರಾಜ್ಯಗಳಿಂದ ದಕ್ಷಿಣದ ರಾಜ್ಯಗಳಿಗೆ ಕೆಲಸ ಅರಸಿ ಬರುವವರ ಸಂಖ್ಯೆ ಹೆಚ್ಚಾಗುತ್ತಲೇ ಇದೆ. ಹೀಗೆ ಯಾವುದೇ ಕೌಶಲ್ಯವಿಲ್ಲದ, ಕನಿಷ್ಠ ಕೂಲಿ ಪಡೆದಾದರೂ ಕೆಲಸವನ್ನು ಮಾಡುವ ಕಾರ್ಮಿಕರಿಗೆ ಕರ್ನಾಟಕದ ಗಾರ್ಮೆಂಟ್ಸ್ ಉದ್ಯಮ ಸುಲಭವಾಗಿ ದಕ್ಕುತ್ತಿದೆ.

**ಗಾರ್ಮೆಂಟ್ಸ್ ಉದ್ಯಮದ ಹಿನ್ನೆಲೆ**

ಗಾರ್ಮೆಂಟ್ಸ್ ಉದ್ಯಮವು ೯೦ರ ದಶಕದ ನಂತರ ಅತಿ ವೇಗವಾಗಿ ಬೆಳೆಯ ತೊಡಗಿ, ಈಗ ದೇಶದಲ್ಲಿ ಒಂದು ಪ್ರಮುಖ ರಫ್ತು ಉದ್ಯಮವಾಗಿ ಬೆಳೆದು, ವಿದೇಶೀ ವಿನಿಮಯವನ್ನು ಗಳಿಸಿಕೊಡುತ್ತಿದೆ. ಪಾಶ್ಚಾತ್ಯ ದೇಶಗಳ ಪ್ರತಿಷ್ಠಿತ ಬ್ರಾಂಡ್‌ಗಳು ತಮ್ಮ ಉಡುಪು ಉತ್ಪಾದನೆಗಾಗಿ ಏಷ್ಯಾ ದೇಶಗಳ ಮೇಲೆ ಅವಲಂಬಿತರಾಗಿದ್ದಾರೆ. ಇನ್ನೂ ಅಭಿವೃದ್ಧಿಹೊಂದುತ್ತಿರುವ ಏಷ್ಯಾದ ದೇಶಗಳಲ್ಲಿ ಅತೀ ಕಡಿಮೆ ಕೂಲಿಗೆ ಕೆಲಸ ಮಾಡುವ ಒಂದು ದೊಡ್ಡ ಕಾರ್ಮಿಕ ಪಡೆಯೇ ಇದೆ. ಆದ್ದರಿಂದಲೇ ಈ ಅಂತರರಾಷ್ಟ್ರೀಯ ಬ್ರಾಂಡ್‌ಗಳು ತಮ್ಮ ಲಾಭವನ್ನು ದುಪ್ಪಟ್ಟು ಮಾಡಿಕೊಳ್ಳಲು ವಿದೇಶೀ ಹೂಡಿಕೆಯ ನೆವ ಮಾಡಿ ಈ ದೇಶಗಳಲ್ಲಿ ತಮ್ಮ ಉತ್ಪಾದನೆಯನ್ನು ಮಾಡಿಸಿಕೊಳ್ಳುತ್ತಿದ್ದಾರೆ.

೯೦ರ ನಂತರದ ಭಾರತ ಸರ್ಕಾರವು ಅಳವಡಿಸಿಕೊಂಡ ನವ ಉದಾರವಾದೀ ಆರ್ಥಿಕ ನೀತಿಗಳಿಂದ ದೇಶದ ಎಲ್ಲ ಉತ್ಪಾದನಾ ಕೈಗಾರಿಕೆಗಳ ಮೇಲೆ ಸರ್ಕಾರದ ಹೂಡಿಕೆಯನ್ನು ಕ್ರಮೇಣ ಹಿಂತೆಗೆದುಕೊಂಡ ಪರಿಣಾಮ, ಅವುಗಳು ಬಹುತೇಕ ಮುಚ್ಚಿ ಹೋಗುವ ಹಂತಕ್ಕೆ ಅಥವಾ ಅಲ್ಲಿನ ಕಾರ್ಮಿಕರು ಕೆಲಸ ಕಳೆದುಕೊಳ್ಳುವ ಹಂತಕ್ಕೆ ಬಂದು ತಲುಪಿದೆ. ಇದರ ಜೊತೆಗೆ ವಿದೇಶೀ ಬಂಡವಾಳ, ವಿದೇಶೀ ಕಂಪನಿಗಳು ಇಲ್ಲಿ ತಮ್ಮ ಮಾರುಕಟ್ಟೆಯನ್ನು ವಿಸ್ತರಿಸಿದ ಪರಿಣಾಮ ಅಸಂಘಟಿತ ಕ್ಷೇತ್ರದ ಉದ್ಯೋಗಗಳು ಹೆಚ್ಚಾಗಿ ದೇಶದ ಬಹು ದೊಡ್ಡಸಂಖ್ಯೆಯ ಜನರು ಈ ಕ್ಷೇತ್ರಗಳಲ್ಲಿ ದುಡಿಯುವಂತಾಗಿದೆ. ಕೆಲಸದ ಭದ್ರತೆ ಇಲ್ಲದೆ, ಯಾವುದೇ ಸೌಲಭ್ಯ, ಸಾಮಾಜಿಕ ಸುರಕ್ಷತೆ ಇಲ್ಲದೆ, ಸಂಘಟಿತರಾಗಲು ಅವಕಾಶವಿಲ್ಲದೆ, ಅತ್ಯಂತ ಕಡಿಮೆ ಕೂಲಿಗೆ ೮ ಗಂಟೆಗಿಂತಲೂ ಹೆಚ್ಚು ಸಮಯ ದುಡಿಯುವುದು ಅಸಂಘಟಿತ ಕ್ಷೇತ್ರದ ಸಾಮಾನ್ಯ ಲಕ್ಷಣವಾಗಿದೆ.

ಕರ್ನಾಟಕದ ಗಾರ್ಮೆಂಟ್ಸ್ ಉದ್ಯಮವು ಈ ಜಾಗತೀಕರಣ, ನವ ಉದಾರವಾದೀ ಆರ್ಥಿಕತೆಯ ಒಂದು ಕೊಡುಗೆ. ಈ ಉದ್ಯಮಕ್ಕೆ ಸುಮಾರು ೧೦೦ ವರ್ಷಗಳಷ್ಟು ಇತಿಹಾಸವಿದ್ದು ೧೯೭೦ರವರೆಗೂ ಅದು ಬಹಳಷ್ಟು ಸ್ಥಳೀಯ ಮಾರುಕಟ್ಟೆಗೆ ಉತ್ಪಾದಿಸುತ್ತಿತ್ತು. ೧೯೭೦ರ ನಂತರ ಈ ಉದ್ಯಮವು ಪ್ರತಿಷ್ಠಿತ ಅಂತರರಾಷ್ಟ್ರೀಯ ಬ್ರಾಂಡ್‌ಗಳಿಗೆ ಉಡುಪು ಉತ್ಪಾದಿಸಲು ಪ್ರಾರಂಭಿಸಿ ರಫ್ತು ಉದ್ಯಮವೆಂದು ಗುರುತಿಸಿಕೊಂಡಿತು. ೧೯೭೦ರ ದಶಕದಿಂದಲೂ ಗಾರ್ಮೆಂಟ್ಸ್ ಉದ್ಯಮದಲ್ಲಿ ಸ್ವತಃ ಕೆಲಸ ಮಾಡಿದ ಅನುಭವವಿರುವ, ಈಗ ಕಾರ್ಮಿಕ ಮುಖಂಡರಾಗಿರುವ ಶ್ರೀ ಜಯರಾಮ್ ಕೆ. ಆರ್. ಅವರು ಹೇಳುವಂತೆ "ಆಗೆಲ್ಲ ಗಾರ್ಮೆಂಟ್ಸ್‌ಗಳಲ್ಲಿ ಪುರುಷರೇ ಹೆಚ್ಚು ಕೆಲಸ ಮಾಡುತ್ತಿದ್ದರು ಮತ್ತು ಅದು ಪೀಸ್‌ವರ್ಕ್ (ಒಂದು ಉಡುಪನ್ನು ಪೂರ್ತಿ ಒಬ್ಬರೇ ಹೊಲೆಯುವುದು) ಕೆಲಸವಾಗಿತ್ತು. ಈ ಪುರುಷ ಕಾರ್ಮಿಕರೆಲ್ಲರೂ ನೆರೆಯ ತಮಿಳುನಾಡು, ಆಂಧ್ರ ಹಾಗೂ ಕೇರಳ ರಾಜ್ಯಗಳಿಂದ ವಲಸೆ ಬಂದವರಾಗಿದ್ದರು. ಗಾರ್ಮೆಂಟ್ಸ್ ಉದ್ಯಮದಲ್ಲಿ ಆಗ ಸ್ಥಳೀಯ ಕಾರ್ಮಿಕರು ಹಾಗೂ ಮಹಿಳಾ ಕಾರ್ಮಿಕರು ಬೆರಳೆಣಿಕೆಯಷ್ಟೇ ಇದ್ದದ್ದು, ಆದರೆ ಸ್ವಲ್ಪ ಸಮಯದಲ್ಲಿಯೇ ಈ ಪುರುಷ ಕಾರ್ಮಿಕರು ಸಂಘಟಿತರಾದರು ಮತ್ತು ತಮ್ಮ ಹಕ್ಕುಗಳನ್ನು ಪ್ರತಿಪಾದಿಸಲು ಪ್ರಾರಂಭಿಸಿದರು, ಜೊತೆಗೆ ಕೆಲಸದಲ್ಲಿ ಶಿಸ್ತಿಲ್ಲದೆ, ಅವರ ಕೆಲಸವು ಕಳಪೆ ಗುಣಮಟ್ಟದ್ದಾಯಿತು. ಈ ಸಮಯದಲ್ಲಿಯೇ ಮೊಟ್ಟ ಮೊದಲ ಬಾರಿಗೆ ೧೯೮೫ರ ಸುಮಾರಿನಲ್ಲಿ ಗೋಕಲ್‌ದಾಸ್ ಎಕ್ಸ್‌ಪೋರ್ಟ್ಸ್‌ನ ಮ್ಯಾನೇಜರ್ ಒಬ್ಬರು ಮುಂಬೈ ಗಾರ್ಮೆಂಟ್ಸ್ ಉದ್ಯಮದಲ್ಲಿ ಪ್ರಚಲಿತವಿದ್ದ "ಬ್ಯಾಂಡ್‌ಸಿಸ್ಟಮ್" ಕೆಲಸದ ವಿನ್ಯಾಸವನ್ನು ಪರಿಚಯಿಸಿದರು. ಈಗ ಇದು "ಬ್ಯಾಚ್ ಸಿಸ್ಟಮ್" ಎಂದು ಗುರುತಿಸಿಕೊಳ್ಳುತ್ತದೆ. ಅಂದರೆ ಒಂದು ಉಡುಪಿನ ಬಿಡಿ ಭಾಗಗಳನ್ನು ವಿವಿಧ ಕಾರ್ಮಿಕರು ತಯಾರಿಸಿ ಕಡೆಗೆ ಅದನ್ನು ಜೋಡಿಸುವುದು. ಈ ಕೆಲಸಕ್ಕೆ ಯಾವುದೇ ಕೌಶಲ್ಯ ಬೇಕಾಗಿರಲಿಲ್ಲ. ಕೇವಲ ಒಂದು ಹೊಲಿಗೆಯನ್ನು ಹಾಕಲು ಬಂದರೆ ಸಾಕಾಗಿತ್ತು. ಆಗಲೇ ಈ ಉದ್ಯಮಕ್ಕೆ ಹೆಣ್ಣುಮಕ್ಕಳು ಬರಲು ಪ್ರಾರಂಭಿಸಿದ್ದು. ಹೆಚ್ಚು ಓದಿರದ, ಯಾವ ಕೆಲಸದ ಅನುಭವವೂ ಇರದ ಕಾರ್ಮಿಕರು ಅಕ್ಕಪಕ್ಕದ ಜಿಲ್ಲೆಗಳಿಂದ ಕರ್ನಾಟಕಕ್ಕೆ ವಲಸೆಬಂದು ಗಾರ್ಮೆಂಟ್ಸ್ ಉದ್ಯಮದಲ್ಲಿ ದುಡಿಯತೊಡಗಿದರು. ಇಂದು ಜಾಗತಿಕ ಮಾರುಕಟ್ಟೆಗೆ ಉಡುಪು ಉತ್ಪಾದಿಸುವ ಈ ಉದ್ಯಮದಲ್ಲಿ ೮೫% ಕಾರ್ಮಿಕರು ಮಹಿಳೆಯರೇ ಆಗಿದ್ದಾರೆ. ಹೆಚ್ಚಿನ ಕೌಶಲ್ಯ ಬೇಡದ, ಹೆಚ್ಚಿನ ವಿದ್ಯಾಭ್ಯಾಸ ಬೇಡದ, ಪುನರಾವರ್ತಿತ ಕೆಲಸ ಮಾಡಲು ಬೇಸರಿಸದ, ಶತಮಾನಗಳಿಂದಲೂ

ಪುರುಷಪ್ರಧಾನ ಸಮಾಜದ ಅಡಿಯಾಳಾಗಿ, ಹಿಂತಿರುಗಿ ಮಾತನ್ನೇ ಆಡದಂತಹ, ಹಕ್ಕುಗಳನ್ನು ಪ್ರತಿಪಾದಿಸದ, ಸಂಘಟನೆಯಾಗುವತ್ತ ಯೋಚಿಸಲೂ ಆಗದಂತಹ 'ಮಹಿಳಾ ಕಾರ್ಮಿಕರು' ಈ ಉದ್ಯಮಕ್ಕೆ "ವರದಾನ"ವಾಗಿದ್ದಾರೆ.

**ಪ್ರಾರಂಭದಲ್ಲಿ**

ಪ್ರಾರಂಭದಲ್ಲಿ ಗಾರ್ಮೆಂಟ್ಸ್ ಉದ್ಯಮವು ಬೆಂಗಳೂರಿನಲ್ಲೆ ನೆಲೆಯಾಗಿತ್ತು. ಈ ಮೊದಲೇ ಹೇಳಿದಂತೆ ಯಾವುದೇ ಕೌಶಲ್ಯ ಬೇಡದ, ಹೆಚ್ಚಿನ ವಿದ್ಯಾಭ್ಯಾಸ ಬಯಸದ, ಸುಲಭವಾಗಿ ದೊರಕುವ ಗಾರ್ಮೆಂಟ್ಸ್ ಉದ್ಯಮಕ್ಕೆ ಬೆಂಗಳೂರು ಅಕ್ಕಪಕ್ಕದ ಜಿಲ್ಲೆಗಳಿಂದ ಮಹಿಳಾ ಕಾರ್ಮಿಕರು ಇಲ್ಲಿಗೆ ವಲಸೆ ಬಂದರು. ಈಗ್ಗೆ ೧೫-೨೦ ವರ್ಷಗಳ ಹಿಂದೆ ವಲಸೆ ಬಂದ ಕಾರ್ಮಿಕರು ಈಗ ಬಹುತೇಕ ಬೆಂಗಳೂರನ್ನೇ ತಮ್ಮದಾಗಿಸಿಕೊಂಡಿದ್ದಾರೆ. ಇತ್ತೀಚೆಗೆ ಗ್ರಾಮೀಣ ಪ್ರದೇಶದಲ್ಲಿ ಕೃಷಿ ಬಿಟ್ಟರೆ ಬೇರೆ ಯಾವುದೇ ಉದ್ಯೋಗಾವಕಾಶವೇ ಇಲ್ಲದಂತಹ ಸಂದರ್ಭದಲ್ಲಿ ಅಲ್ಲಿ ಪ್ರಾರಂಭವಾದ ಗಾರ್ಮೆಂಟ್ಸ್ ಕೆಲಸವು ಮಹಿಳೆಯರಿಗೆ ಸಂಪಾದನೆಯ ದಾರಿ ಮಾಡಿಕೊಟ್ಟಿದೆ ಎಂಬುದನ್ನು ನಾವು ಅಲ್ಲಗಳೆಯುವಂತಿಲ್ಲ.

ಪ್ರಾರಂಭದಲ್ಲಿ ಕರ್ನಾಟಕ ಜಿಲ್ಲೆಗಳಿಂದಲ್ಲದೇ ಪಕ್ಕದ ತಮಿಳುನಾಡು, ಆಂಧ್ರ ಪ್ರದೇಶದಿಂದಲೂ ಸಹ ಕಾರ್ಮಿಕರು ವಲಸೆ ಬಂದು ಸಿಗುವ ಅಲ್ಪ ಸಂಬಳದಲ್ಲಿಯೇ ತಮ್ಮ ತಮ್ಮ ಗಂಡಂದಿರೊಂದಿಗೆ, ಮಕ್ಕಳೊಂದಿಗೆ ಇಲ್ಲಿ ನೆಲೆಯಾದರು. ೨೦೧೦ರಿಂದ ಈಚೆಗೆ ಗಾರ್ಮೆಂಟ್ಸ್ ಉದ್ಯಮವು ಕರ್ನಾಟಕದ ಇತರ ಜಿಲ್ಲೆಗಳಿಗೂ ತನ್ನ ಕಾರ್ಯಕ್ಷೇತ್ರವನ್ನು ವಿಸ್ತರಿಸಿದೆ. ಹೀಗಾಗಿ ಕೆಲವರ್ಷಗಳಿಂದ ಕರ್ನಾಟಕದ ಕೆಲವು ಜಿಲ್ಲೆಗಳಿಂದ ಬೆಂಗಳೂರಿಗೆ ವಲಸೆ ಬರುವ ಕಾರ್ಮಿಕರ ಸಂಖ್ಯೆ ಕಡಿಮೆಯಾಗಿದೆ. ಸ್ವಲ್ಪ ಪ್ರಮಾಣದಲ್ಲಿ ಮತ್ತೆ ತಮ್ಮ ಹಳ್ಳಿಗಳಿಗೇ ಮರಳುತ್ತಿರುವವರೂ ಇದ್ದಾರೆ.

ಪ್ರಸ್ತುತ ಬೆಂಗಳೂರಿನ ಗಾರ್ಮೆಂಟ್ಸ್ ಉದ್ಯಮಕ್ಕೆ ಅಸ್ಸಾಂ, ಒಡಿಶಾ, ಛತ್ತೀಸ್‌ಗಢ, ಬಿಹಾರ, ಪಶ್ಚಿಮ ಬಂಗಾಳ ಮುಂತಾದ ಕಡೆಗಳಿಂದ ಕಾರ್ಮಿಕರು ವಲಸೆ ಬರುತ್ತಿದ್ದಾರೆ. ಅಲ್ಲಿನ ಬಡತನ, ಕೃಷಿ ವೈಫಲ್ಯ, ಉದ್ಯೋಗಾವಕಾಶದ ಕೊರತೆ ಇವೆಲ್ಲವೂ ಆ ಕಾರ್ಮಿಕರು ಇತ್ತ ಮುಖ ಹಾಕುವಂತೆ ಮಾಡಿವೆ. ಗಾರ್ಮೆಂಟ್ಸ್ ಉದ್ಯಮಕ್ಕೆ ಈ ರಾಜ್ಯಗಳಿಂದ ಎರಡು ರೀತಿಯ ವಲಸೆ ಕಾರ್ಮಿಕರನ್ನು ನೋಡಬಹುದು. ಒಂದು – ತಮ್ಮ ತಮ್ಮ ಕುಟುಂಬದೊಂದಿಗೆ ಬಂದ ವಿವಾಹಿತ ಮಹಿಳಾ ಕಾರ್ಮಿಕರು; ಎರಡು – ಮದುವೆಯಾಗದ ೧೮ರಿಂದ ೨೫ ವರ್ಷದ ಯುವತಿಯರು.

**ಕುಟುಂಬದೊಂದಿಗೆ ವಲಸೆ ಬಂದವರು**

ಇದರಲ್ಲಿ ಗಂಡಂದಿರು ಮೊದಲು ಬದುಕು ಅರಸಿ ಇಲ್ಲಿ ಬಂದು, ನಂತರ ಹೆಂಡತಿಯನ್ನೂ ಕರೆದುಕೊಂಡು ಬಂದವರು. ಇವರ ಗಂಡಂದಿರು ಗಾರ್ಮೆಂಟ್ಸ್ ಕಾರ್ಖಾನೆಯಲ್ಲಿಯೇ ಟೈಲರ್ ಅಥವಾ ಕಟ್ಟಡ ನಿರ್ಮಾಣದಂತಹ ಅಸಂಘಟಿತ ಕ್ಷೇತ್ರಗಳಲ್ಲಿ ಕಾರ್ಮಿಕರಾಗಿ ದುಡಿಯುತ್ತಿದ್ದಾರೆ. ಈ ಮಹಿಳೆಯರು ಇಲ್ಲಿಗೆ ದುಡಿಯಲು ಬರಲು ನಿರ್ಧರಿಸಿದ್ದು ಅವರ ಗಂಡಂದಿರೇ.

ವಲಸೆ ಬಂದ ಬಹುತೇಕ ಕಾರ್ಮಿಕರು ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ ಅಥವಾ ಹಿಂದುಳಿದ ವರ್ಗಕ್ಕೆ ಸೇರಿದವರು. ಕುಟುಂಬದೊಂದಿಗೆ (ಗಂಡ) ವಲಸೆ ಬಂದ ಕಾರ್ಮಿಕರು ಹೆಚ್ಚಾಗಿ ಬೆಂಗಳೂರಿನ ಬೊಮ್ಮಸಂದ್ರ ಕೈಗಾರಿಕಾ ಪ್ರದೇಶ ಮತ್ತು ಹೊಸೂರು ರಸ್ತೆಯಲ್ಲಿ ಕೆಲಸ ಮಾಡುತ್ತಿದ್ದು, ಅಲ್ಲಿಯೇ ವಾಸಿಸುತ್ತಿದ್ದಾರೆ. ಅತಿ ಚಿಕ್ಕದಾದ, ಮೂಲಭೂತ ಸೌಕರ್ಯಗಳಿಲ್ಲದ ಮನೆಯನ್ನು ಬಾಡಿಗೆಗೆ ಪಡೆದುಕೊಂಡು ಜೀವನ ಸಾಗಿಸುತ್ತಿದ್ದಾರೆ. ಬರುವ ರೂ. ೬೫೦೦-೮೦೦೦ ವೇತನದಲ್ಲಿ ತಮ್ಮ ಜೀವನ ನಿರ್ವಹಣೆಯೊಂದಿಗೆ ಅವರು ದೂರದ ತಮ್ಮ ಊರುಗಳಲ್ಲಿ ಇರುವ ತಮ್ಮ ತಂದೆ-ತಾಯಿ, ಮಕ್ಕಳನ್ನೂ ನೋಡಿಕೊಳ್ಳಬೇಕಿದೆ. ಬದುಕು ಅರಸಿ ಸಾವಿರಾರು ಕಿ.ಮೀ. ಬಂದ ಅವರಿಗೆ ಅಲ್ಲಿಯದೇ ಚಿಂತೆ. "ಯಾರಾದರೂ ಸತ್ತರೂ ನಮಗೆ ತಕ್ಷಣ ಹೋಗಲು ಆಗುವುದಿಲ್ಲ, ಟ್ರೈನ್‌ನಲ್ಲಿ ಹೋದರೂ ಸಹ ೩ ದಿನ ಬೇಕು" ಎಂದು ಕಾರ್ಮಿಕರು ವಿಷಾದದಿಂದ ಹೇಳುತ್ತಾರೆ. ಆಗಾಗ ಹೋಗಲು ಆಗದಷ್ಟು ಅವರ ಊರುಗಳು ದೂರವಿದೆ, ವರ್ಷಕ್ಕೊಮ್ಮೆ ಹೋಗುವುದೇ ತುಟ್ಟಿಯಾಗುತ್ತದೆ. ಏಕೆಂದರೆ ಹಣ ಖರ್ಚಿನ ಜೊತೆಗೆ, ಅಷ್ಟು ದಿನಗಳ ಕಾಲ ಅವರಿಗೆ ರಜೆಯೂ ದೊರೆಯುವುದಿಲ್ಲ.

**ಸಾಮಾಜಿಕ ಬದುಕು**

ಬದುಕು ಅರಸಿ ಗಾರ್ಮೆಂಟ್ಸ್‌ಗೆ ಬಂದರೂ ಸಹ ಅವರು ಬದುಕಬೇಕಾಗಿರುವುದು ಕನ್ನಡದ ಪರಿಸರದಲ್ಲಿ. ಆದರೆ ಸ್ಥಳೀಯರೊಂದಿಗೆ ವ್ಯವಹರಿಸಲು ಭಾಷೆಯ ತೊಡಕಿನಿಂದಾಗಿ ಅವರು ಗುಂಪು ಗುಂಪಾಗಿ ಒಂದೇ ಏರಿಯಾದಲ್ಲಿಯೇ ವಾಸಿಸುತ್ತಾರೆ. ಕಾರ್ಖಾನೆಯಲ್ಲಿ ಸರಳ ಸಂವಹನ ಮಾಡಲೂ ಸಹ ಅವರಿಗೆ ಸಾಧ್ಯವಾಗುವುದಿಲ್ಲ. ಕಾನೂನು ಪ್ರಕಾರ ತಮಗೆ ನೀಡದ್ದನ್ನು ಪ್ರಶ್ನಿಸಲಾಗುವುದಿಲ್ಲ, ಒಂದು ಭಾಷೆಯ ತೊಡಕು, ಮತ್ತೊಂದು ಪರಕೀಯ ಭಾವನೆ. ಕೆಲವೊಮ್ಮೆ ಸೂಪರ್‌ವೈಸರ್ ಏನನ್ನೋ ಕೂಗಾಡುತ್ತಿದ್ದರೂ, ಏನು ಎಂದು ತಿಳಿಯದ ಅಸಹಾಯಕತೆ. ಏನೋ ಶಕ್ತಿಯಿದ್ದಷ್ಟು ದಿನ ಒಂದಷ್ಟು ದುಡಿದು ಕೂಡಿಟ್ಟುಕೊಂಡು ತಮ್ಮ ಊರು ಸೇರಿಕೊಳ್ಳುವ ತವಕವೇ ಎಲ್ಲರಲ್ಲಿಯೂ ಕಂಡುಬರುತ್ತದೆ. ಆದರೆ ದುಡಿಯಬಹುದು, ಕೂಡಿಡಲು ಸಾಧ್ಯವಿಲ್ಲ ಎಂದು ಒಂದಷ್ಟು ತಿಂಗಳುಗಳು ದುಡಿದ ನಂತರ ಅವರಿಗೆ ಮನವರಿಕೆಯಾಗುತ್ತಿದೆ. ಆದರೆ ಬಡತನವು ಅವರನ್ನು ಅನಿವಾರ್ಯವಾಗಿ ಇಲ್ಲಿಯೇ ಕಟ್ಟಿಹಾಕಿದೆ.

"ನಾವು ನಮ್ಮ ಊರಿನಿಂದ ಇಲ್ಲಿಗೆ ಬಂದು ಭಿಕ್ಷೆ ಬೇಡಿದರೂ ಯಾರಿಗೂ ಗೊತ್ತಾಗುವುದಿಲ್ಲ, ಆದರೆ ನಮ್ಮ ಊರಿನಲ್ಲಿ ಹಾಗೆಲ್ಲ ಮಾಡಲಾಗುವುದಿಲ್ಲ" ಎಂದು ಮಹಿಳಾ ಕಾರ್ಮಿಕರೊಬ್ಬರು ಹೇಳಿದರು.

**ಮದುವೆಯಾಗದ ಯುವತಿಯರ ವಲಸೆ**

ತಮ್ಮ ರಾಜ್ಯ ಸರ್ಕಾರಗಳ ಕೌಶಲ್ಯ ಯೋಜನೆ, ಖಾಸಗೀ ಸಂಸ್ಥೆಗಳು ಮತ್ತು ಎನ್.ಜಿ.ಒ.ಗಳು ಆಯೋಜಿಸುವ ಹೊಲಿಗೆಯಂತಹ ಅಲ್ಪ ಕಾಲದ ತರಬೇತಿ ಪಡೆದು, ಪ್ರಮಾಣ ಪತ್ರಕ್ಕಾಗಿ ೬ ತಿಂಗಳ ಕೆಲಸದ ಅನುಭವ ಪಡೆಯಲು ಈ ಯುವತಿಯರು ಬೆಂಗಳೂರಿನ ಗಾರ್ಮೆಂಟ್ಸ್ ಉದ್ಯಮಕ್ಕೆ ಬರುತ್ತಿದ್ದಾರೆ. ಇವರು ಬರುತ್ತಿದ್ದಾರೆ ಎಂಬುದಕ್ಕಿಂತ 'ಕರೆತರಲಾಗುತ್ತಿದೆ' ಎಂದರೆ ಸೂಕ್ತ. ಏಕೆಂದರೆ, ಗಾರ್ಮೆಂಟ್ಸ್ ಆಡಳಿತವರ್ಗವು ಬೆಂಗಳೂರಿನಲ್ಲಿ ಕಾರ್ಮಿಕರ ಕೊರತೆ ಎದುರಿಸುತ್ತಿದೆ. ಇತರ ರಾಜ್ಯಗಳ ಸರ್ಕಾರಗಳೊಂದಿಗೆ, ಸಂಘಸಂಸ್ಥೆಗಳೊಂದಿಗೆ ಒಪ್ಪಂದ ಮಾಡಿಕೊಂಡು ಈ ರೀತಿ ಕಾರ್ಮಿಕ ಪಡೆಯನ್ನು ಕೆಲಸ ಮಾಡಿಸಲು ಕರೆತರುತ್ತಿದೆ.

ಈ ಯುವತಿಯರು ೧೦-೧೨ನೇ ತರಗತಿಯವರೆಗೂ ವಿದ್ಯಾಭ್ಯಾಸ ಪಡೆದಿದ್ದಾರೆ. ಭುವನೇಶ್ವರ್ ಮತ್ತು ಪಾಟ್ನಾಗಳ ದೀನ್ ದಯಾಳು ಉಪಾಧ್ಯಾಯ ಗ್ರಾಮೀಣ ಕೌಶಲ್ಯ ಯೋಜನೆಯಡಿಯಲ್ಲಿ ತರಬೇತಿ ಪಡೆದ ಈ ಯುವತಿಯರನ್ನು ಕರ್ನಾಟಕದ ಗಾರ್ಮೆಂಟ್ಸ್ ಹೆಚ್.ಆರ್. ವಿಭಾಗದ ಮ್ಯಾನೇಜರ್ ತಾವೇ ಖುದ್ದು ಸಂಪರ್ಕಿಸುತ್ತಾರೆ. ಈ ಯುವತಿಯರಿಗೆ ಟ್ರೈನ್ ಟಿಕೆಟ್‌ಗಳನ್ನು ಒದಗಿಸಿ, ಬೆಂಗಳೂರಿನ ರೈಲ್ವೇಸ್ಟೇಶನ್‌ನಿಂದ ಕರೆತಂದು ಡಾರ್ಮೆಟರಿಗಳಲ್ಲಿ ಇರಿಸಲಾಗುತ್ತದೆ. ಈ ಡಾರ್ಮೆಟರಿ ವ್ಯವಸ್ಥೆಗೆ ಕಾರ್ಮಿಕರು ತಿಂಗಳಿಗೆ ರೂ. ೫೦೦ರಂತೆ ಹಣ ಪಾವತಿಸುತ್ತಿದ್ದಾರೆ. ೩-೪, ಕೆಲವೊಮ್ಮೆ ೬-೮ ಕಾರ್ಮಿಕರು ಒಟ್ಟಿಗೇ ವಾಸಿಸುತ್ತಾರೆ. ಊಟದ ಖರ್ಚನ್ನು ಹಂಚಿಕೊಳ್ಳುತ್ತಾರೆ. ತಿಂಗಳಿಗೊಮ್ಮೆ ಮನೆಗೆ ಹಣ ಕಳುಹಿಸುತ್ತಾರೆ. ಈ ಯುವತಿಯರ ಬಳಿ ಸ್ಮಾರ್ಟ್ ಫೋನ್ ಇಲ್ಲ. ಆದ್ದರಿಂದ 'ಡಿಜಿಟಲ್ ಇಂಡಿಯಾ'ದಲ್ಲಿ ಈಗ ಹತ್ತಿರವಿರುವ ಮೊಬೈಲ್ ಶಾಪ್‌ನವನಿಗೇ ಸ್ವಲ್ಪ ಹಣ ಕೊಟ್ಟು, ತಿಂಗಳಿಗೊಮ್ಮೆ ತಮ್ಮ ತಂದೆ ತಾಯಿಗೆ ಹಣ ಕಳುಹಿಸುವ ವ್ಯವಸ್ಥೆ ಮಾಡಿಕೊಂಡಿದ್ದಾರೆ. ಸಾಂಪ್ರದಾಯಿಕ ಮನಿಆರ್ಡರ್, ಬ್ಯಾಂಕ್ ಟ್ರಾನ್ಸ್‌ಫರ್ ಇವರಿಗೆ ಬಲು ದೂರ. ಏಕೆಂದರೆ ಇವರಿಗೆ ಇವರಿರುವ ಡಾರ್ಮೆಟರಿ ಬಿಟ್ಟರೆ ಬೇರೆ ಪ್ರಪಂಚವೇ ಗೊತ್ತಿಲ್ಲ. ಹೇಗಿದ್ದರೂ ಆರು ತಿಂಗಳು ಕಳೆದ ಮೇಲೆ ತಮ್ಮ ತಾಯ್ನಾಡಿಗೆ ಮರಳುತ್ತೇವೆಂಬ ಭರವಸೆ ಅವರಿಗೆ ಇದೆ, ಅವರು ಯಾರಿಗೂ ಇಲ್ಲಿಯೇ ಇರುವ ಮನಸ್ಸಿಲ್ಲ. ಹೋಗದೇ ಇಲ್ಲಿಯೇ ಬದುಕುವ ಆಯ್ಕೆಯೂ ಅವರಿಗೆ ಇದೆ. ಆದರೆ ಬಹುತೇಕ ಕಾರ್ಮಿಕರು ಇಲ್ಲಿರಲು ಇಷ್ಟಪಡುವುದಿಲ್ಲ. ತಂದೆತಾಯಿಯರನ್ನು ಬಿಟ್ಟುಬಂದ ಅನಾಥ ಭಾವನೆ ಅವರನ್ನು ಕಾಡುತ್ತಿದೆ.

ಪ್ರತಿದಿನ ಡಾರ್ಮೆಟರಿಗಳಿಂದ ಕಾರ್ಖಾನೆಯ ಬಸ್ ಅವರನ್ನು ಕೆಲಸಕ್ಕೆ ಕರೆದೊಯ್ದು, ಕಾರ್ಖಾನೆಯ ಅಂಗಳದಿಂದಲೇ ಬಸ್‌ನಲ್ಲಿ ಡಾರ್ಮೆಟರಿಗಳಿಗೆ ತಂದು ಬಿಡಲಾಗುತ್ತದೆ. ಹೊರಗಿನ ಜನರನ್ನು ಮಾತನಾಡಿಸುವುದಿರಲಿ, ನೋಡುವುದಕ್ಕೂ ಅವಕಾಶ ಇಲ್ಲ. ಜೊತೆಗೆ ಭಾಷೆಯ ಸಮಸ್ಯೆ. ವಾರಕ್ಕೊಮ್ಮೆಯೋ, ಹದಿನೈದು ದಿನಕ್ಕೊಮ್ಮೆಯೋ ೨ ಅಥವಾ ೩ ಗಂಟೆಗಳ ಕಾಲ 'ಶಾಪಿಂಗ್'ಗಾಗಿ ಹೊರಗೆ ಕಳುಹಿಸುತ್ತಾರೆ.

ಈ ಎಲ್ಲ ವ್ಯವಸ್ಥೆಯನ್ನೂ ಎಷ್ಟು ವ್ಯವಸ್ಥಿತವಾಗಿ ಮಾಡಲಾಗಿದೆ ಎಂದರೆ ಮೇಲ್ನೋಟಕ್ಕೆ ಇವರನ್ನು 'ಆಧುನಿಕ ಜೀತ'ದಲ್ಲಿ ಇರಿಸಲಾಗಿದೆ ಎಂದು ಗೊತ್ತೇ

ಆಗುವುದಿಲ್ಲ. ಸ್ಥಳೀಯ ಸೂಪರ್‌ವೈಸರ್ ಅಥವಾ ಮ್ಯಾನೇಜರ್ ಮೂಲಕ ಮನೆಗಳನ್ನು ಬಾಡಿಗೆಗೆ ಪಡೆದು, ಅಲ್ಲಿ ಈ ಯುವತಿಯರನ್ನು ಇರಿಸಲಾಗುತ್ತಿದೆ.

ಇವರಿಗೆ ಬೆಂಗಳೂರಿನ ಬಗ್ಗೆ ತಿಳಿದಿತ್ತೇ? ಎಂದು ಕೇಳಿದಾಗ, ಒಳ್ಳೆ ಸಿಟಿ ಅಂತ ಕೇಳಿದ್ದೆವು ಎಂದು ಈ ಯುವತಿಯರು ಹೇಳಿದರು. ಪುನಃ ಊರಿಗೆ ಹೋಗಿ ಏನು ಮಾಡುತ್ತೀರಿ ಎಂದರೆ ಎಲ್ಲರೂ ಮುಖಮುಖ ನೋಡಿಕೊಂಡರು. ಮದುವೆ ಯಾಗುತ್ತೀರಾ ಎಂದರೆ ಸ್ವಲ್ಪ ಜೋರಾಗಿಯೇ ಇಲ್ಲ ಇಲ್ಲ, ಮದುವೆಯಾದರೆ ಅಡುಗೆ ಮನೆಯಲ್ಲಿಯೇ ನಮ್ಮ ಬದುಕು ಮುಗಿದುಹೋಗುತ್ತದೆ ಎಂದರು. ನನಗೆ ಪೊಲೀಸ್ ಆಗಬೇಕೆಂದು ಇಷ್ಟ, ಆದರೆ ಮುಂದೆ ಓದಲು ಆಗುತ್ತದೋ ಇಲ್ಲವೋ ಗೊತ್ತಿಲ್ಲ ಎಂದು ಕನಸು ಕಣ್ಣಿನಿಂದ ಒಬ್ಬ ಯುವತಿ ಹೇಳಿದಳು. ಇನ್ನೊಬ್ಬಳು, ನನಗೆ ಟೀಚರ್ ಆಗಬೇಕೆಂದು ಆಸೆ, ಆದರೆ ಮನೆಯ ಪರಿಸ್ಥಿತಿಯಲ್ಲಿ ಕಷ್ಟ, ನನ್ನ ತಮ್ಮನನ್ನಾದರೂ ಓದಿಸುತ್ತೇನೆ, ನಾವೆಲ್ಲರೂ ನಮ್ಮ ಕಾಲ ಮೇಲೆ ನಾವು ನಿಲ್ಲಬೇಕೆಂದು ಇಲ್ಲಿಗೆ ಬಂದಿದ್ದೇವೆ ಎಂದು ಆತ್ಮವಿಶ್ವಾಸದಿಂದ ಹೇಳಿದಳು.

ಭಾಷೆ ಬರದ ಕಾರಣ ಭಾವನಾತ್ಮಕವಾಗಿ ಯಾರನ್ನೂ ಅವಲಂಬಿಸಲಾರದೆ, ಕೇವಲ ತನ್ನ ಊರಿನವನೆಂಬ ಒಂದೇ ಕಾರಣಕ್ಕೆ ಈ ಯುವತಿಯರು ಕೆಲವು ಪುರುಷರನ್ನು ನಂಬಿ ಮೋಸ ಹೋದ ಎಷ್ಟೋ ಘಟನೆಗಳಾಗಿವೆ. ಆತ್ಮಹತ್ಯೆಯ ಘಟನೆಗಳಾಗಿವೆ. ಆದರೆ ಇವೆಲ್ಲವೂ ಆಡಳಿತವರ್ಗದ ಹುನ್ನಾರದಿಂದ ಮುಚ್ಚಿ ಹೋಗಿವೆ. ಏಕೆಂದರೆ ಈ ಕಾರ್ಮಿಕರಿಗೆ ಹೊರಜಗತ್ತನ್ನು ನೋಡುವ ಕಿಟಕಿಗಳೇ ಇಲ್ಲ. ಹಗಲು ಗಾರ್ಮೆಂಟ್ಸ್ ಫ್ಯಾಕ್ಟರಿ, ಸಂಜೆ ತಮ್ಮ ಮನೆ ಅಥವಾ ಡಾರ್ಮೆಟರಿ ಇಷ್ಟೇ ಅವರ ಪ್ರಪಂಚವಾಗಿದೆ.

**ಕೆಲಸದ ಪರಿಸ್ಥಿತಿ**

'ಗಾರ್ಮೆಂಟ್ಸ್‌ನಲ್ಲಿ ಹೆಣ್ಣುಮಕ್ಕಳಿಗೆ ತುಂಬ ಕಿರುಕುಳ ಅಂತೆ' ಎಂದು ಗಾರ್ಮೆಂಟ್ಸ್ ಉದ್ಯಮದ ಕೆಲಸದ ಪರಿಸ್ಥಿತಿಯು ಈಗಾಗಲೇ ಕುಖ್ಯಾತಿ ಪಡೆದುಕೊಂಡಿದೆ. ತನ್ನ ಪುರುಷ ಪ್ರಧಾನ ಸ್ವರೂಪದಿಂದ, ಕಾರ್ಮಿಕರನ್ನು ಹಿಂಡಿ ತೆಗೆಯುವ 'ಬೆವರಿನಂಗಡಿ'ಯ ಹೆಸರಿನಿಂದ, ಅತಿ ಕಡಿಮೆ ವೇತನ, ತೀವ್ರ ಕೆಲಸದ ಒತ್ತಡದ ಕಾರಣದಿಂದ ಗಾರ್ಮೆಂಟ್ಸ್ ಕಾರ್ಖಾನೆಗಳಲ್ಲಿ ಕಾರ್ಮಿಕರು ಶೋಷಣೆಗೆ ಒಳಗಾಗುತ್ತಿದ್ದಾರೆ. ಅದರಲ್ಲೂ ಈ ಕಾರ್ಮಿಕರು ಬೇರೆ ರಾಜ್ಯಗಳಿಂದ ಕೇವಲ ಕೆಲಸದ ಅನಿವಾರ್ಯತೆಯಿಂದಲೇ ಬಂದಿರುವವರಾದ್ದರಿಂದ ಇವರು ಇನ್ನೂ ಹೆಚ್ಚಿನ ಶೋಷಣೆಗೆ ಒಳಗಾಗುತ್ತಾರೆ. ೭೦೦೦ರಿಂದ ೮೦೦೦ದಷ್ಟು ಅತ್ಯಲ್ಪ ಕನಿಷ್ಠವೇತನ ಪಡೆದು ಈ ಕಾರ್ಮಿಕರು ಇಲ್ಲಿ ಜೀವನ ಸಾಗಿಸುವುದಲ್ಲದೆ, ತಮ್ಮನ್ನು ಅವಲಂಬಿಸಿರುವವರನ್ನೂ ಸಾಕಬೇಕಿದೆ. ಕೆಲಸದ ಅನಿವಾರ್ಯತೆಯು ಶೋಷಣೆಯನ್ನು ಹಲ್ಲುಕಚ್ಚಿ ಸಹಿಸುವಂತೆ ಮಾಡಿದೆ. ಕೆಲವು ಕಾರ್ಖಾನೆಗಳಲ್ಲಿ ಇವರನ್ನೇ ಒಂದು ಪ್ರತ್ಯೇಕ ಬ್ಯಾಚ್ ಮಾಡಿ ಅಲ್ಲಿಗೆ ಇವರ ಭಾಷೆ ಬರುವ ಸೂಪರ್‌ವೈಸರ್‌ಗಳನ್ನು ನೇಮಿಸಲಾಗಿದೆ. ಅಂದರೆ ತಮಗೆ ಬೇಕಾದಂತೆ ಕೆಲಸ ತೆಗೆಸಿಕೊಳ್ಳಲು ಆಡಳಿತವರ್ಗವು ಈ ರೀತಿಯ ಕ್ರಮವನ್ನು ಕೈಗೊಳ್ಳುತ್ತದೆ, ಆದರೆ ಹೆಚ್.ಆರ್. ವಿಭಾಗದಲ್ಲಿ ತಮ್ಮ ಸಂಬಳದ ವಿವರಗಳನ್ನು ಇವರ ಭಾಷೆಯಲ್ಲಿ ತಿಳಿಸಲು ವ್ಯವಸ್ಥೆ ಮಾಡುವುದಿಲ್ಲ. ಇನ್ನು ಕೆಲವು ಕಡೆ ಪ್ರೊಡಕ್ಷನ್ ವಿಭಾಗದಲ್ಲಿಯೂ ಭಾಷೆಯ ಕೊರತೆಯಾಗುತ್ತದೆ. ಸೂಪರ್‌ವೈಸರ್‌ಗಳ ಆಂಗಿಕ ಅಭಿನಯದಿಂದ, ಕಿರುಚಾಟದಿಂದ ಅವನು ತಮ್ಮನ್ನು ಬೈಯುತ್ತಿದ್ದಾನೆ ಎಂದು ತಿಳಿದುಕೊಳ್ಳುತ್ತೇವೆ ಎಂದು ಕೆಲವು ಮಹಿಳಾ ಕಾರ್ಮಿಕರು ಹೇಳಿದರು. ಇನ್ನು ಆರೋಗ್ಯ ಕೆಟ್ಟರೆ ಇ.ಎಸ್.ಐ. ಕಾರ್ಡ್ ಇದ್ದರೂ ಸಹ ಡಿಸ್ಪೆನ್ಸರಿಗೆ ಹೋಗಲು ಹಿಂಜರಿಯುತ್ತಾರೆ. ಕಾರಣ ಮತ್ತದೇ ಭಾಷೆಯ ಸಮಸ್ಯೆ. ಅಲ್ಲಿನ ಸಿಬ್ಬಂದಿಗಳು ಇವರನ್ನು ಭಾಷೆಯ ಕಾರಣಕ್ಕಾಗಿ ಹೀಯಾಳಿಸಿದ್ದಿದೆ.

ತಮ್ಮ ವೇತನದ ವಿವರ ತಿಳಿಯಬೇಕಾದಲ್ಲಿ, ಕೆಲಸದ ಬಗ್ಗೆ ಇನ್ನೇನಾದರೂ ಮಾಹಿತಿ ಬೇಕಾದಲ್ಲಿ ಇವರಿಗೆ ತಿಳಿಸುವ ವ್ಯವಸ್ಥೆಯೇ ಇಲ್ಲ. ಗಾರ್ಮೆಂಟ್ಸ್ ಉದ್ಯಮವು ಸಂಘಟಿತ ಉದ್ಯಮವೆಂದು ಗುರುತಿಸಿಕೊಂಡಿದ್ದು, ಕಾರ್ಖಾನೆಯ ಕಾಯಿದೆ, ಕಾರ್ಮಿಕ ಕಾಯಿದೆಯು ಅನ್ವಯವಾಗುತ್ತದೆ. ಇಲ್ಲಿ ಮಾಲೀಕರ ಮತ್ತು ಕಾರ್ಮಿಕರ ಕೈಗಾರಿಕಾ ಬಾಂಧವ್ಯವೇ ಇಲ್ಲ. ಊಳಿಗಮಾನ್ಯ ಪದ್ಧತಿಯ ಅನ್ನ ಹಾಕುವ ಧಣಿ ಮತ್ತು ಕೂಲಿ ಕೆಲಸಗಾರರ ಸಂಬಂಧವೇ ಮೇಲುಗೈಯಾಗಿದೆ.

೨೦೧೬ರಲ್ಲಿ ಪಿ. ಎಫ್. ಕಾಯಿದೆಯ ತಿದ್ದುಪಡಿಯಿಂದ ರೊಚ್ಚಿಗೆದ್ದ ಲಕ್ಷಾಂತರ ಕಾರ್ಮಿಕರು ಬೀದಿಗಿಳಿದು ಪ್ರತಿಭಟಿಸಿದ್ದರು. ಆಗ ಹೆಚ್ಚು ದ್ವಂದ್ವಕ್ಕೊಳಗಾದವರು ಈ ವಲಸೆ ಕಾರ್ಮಿಕರು. ಏಕೆಂದರೆ ಅವರಿಗೆ ಪ್ರತಿಭಟಿಸಬೇಕೆಂಬ ಮನಸ್ಸಿದೆ, ಆದರೆ ಕೆಲಸ ಕಳೆದುಕೊಳ್ಳುವ ಭಯದಿಂದ ಧೈರ್ಯವಿಲ್ಲ.

ಉತ್ತರದ ರಾಜ್ಯಗಳ ಕಾರ್ಮಿಕರ ವಲಸೆಯು ಹಲವಾರು ಉತ್ತರಿಸಲಾಗದ ಸಾಮಾಜಿಕ-ಆರ್ಥಿಕ ಪ್ರಶ್ನೆಗಳನ್ನು ಎತ್ತುತ್ತವೆ. ಬೆಂಗಳೂರಿನ ಐಟಿ ಉದ್ಯಮದಲ್ಲಿ ಗಣನೀಯ ಪ್ರಮಾಣದಲ್ಲಿ ಉತ್ತರ ಭಾರತದ ಕೆಲಸಗಾರರು ಇದ್ದು, ಅವರ ಸಾಮಾಜಿಕ ಜೀವನಕ್ಕೂ, ಬಡತನದ ಕಾರಣಕ್ಕಾಗಿ ಗಾರ್ಮೆಂಟ್ಸ್ ಉದ್ಯಮದಲ್ಲಿ ಕೆಲಸ ಅರಸಿ ವಲಸೆ ಬಂದ ಈ ಕಾರ್ಮಿಕರ ಸಾಮಾಜಿಕ ಜೀವನಕ್ಕೂ ಅಜಗಜಾಂತರವಿದೆ. ಕೇವಲ ಎರಡು ತಿಂಗಳ ತರಬೇತಿಯನ್ನು ನೀಡಿ, ಸರ್ಕಾರಗಳೇ ಈ ಅಕುಶಲ ಕಾರ್ಮಿಕ ಪಡೆಯನ್ನು ಒದಗಿಸುತ್ತಾ ವಲಸೆಯನ್ನು ಪ್ರೋತ್ಸಾಹಿಸುತ್ತಿವೆಯೇ? ಈ ಯುವತಿಯರು "ತಮ್ಮ ರಾಜ್ಯದಲ್ಲಿ ಈ ರೀತಿಯ ಯಾವುದೇ ಉದ್ಯೋಗಾವಕಾಶ ಇಲ್ಲ" ಎಂದು ಹೇಳಿದ್ದು ಇದನ್ನು ಇನ್ನಷ್ಟು ಸ್ಪಷ್ಟವಾಗಿಸಿದೆ. ಇಲ್ಲಿ ಯಾವುದೇ ಸೌಲಭ್ಯ ಬೇಡದ, ಕಡಿಮೆ ಕೂಲಿಗೆ ಹೆಚ್ಚು ದುಡಿಯುವ, ಅನಿವಾರ್ಯತೆ ಇರುವ ಕಾರ್ಮಿಕರನ್ನು ಈ ಉದ್ಯಮ ಎದುರುನೋಡುತ್ತಿದೆ. ಈ ಅವಶ್ಯಕತೆಯನ್ನು ಈ ರಾಜ್ಯಗಳು ಪೂರೈಸುತ್ತಿವೆ. ಒಂದು ತಂಡ ೬ ತಿಂಗಳ ನಂತರ ಕೆಲಸ ಬಿಟ್ಟು ಹೋದರೂ, ಅವರ ಹಿಂದೆಯೇ ಇನ್ನೊಂದು ಬ್ಯಾಚ್ ತಯಾರಾಗಿ ನಿಂತಿರುತ್ತದೆ.

ಗಾರ್ಮೆಂಟ್ಸ್ ಆಡಳಿತವರ್ಗವು ಹೆಮ್ಮೆಯಿಂದ ತಾವು ಮಹಿಳೆಯರಿಗೆ ಉದ್ಯೋಗ ಸೃಷ್ಟಿಸಿದ್ದೇವೆ, ಅವರನ್ನು ಆರ್ಥಿಕವಾಗಿ ಸಬಲರನ್ನಾಗಿಸುತ್ತಿದ್ದೇವೆ ಎಂದು ತಮ್ಮ ಬೆನ್ನು ತಾವೇ ತಟ್ಟಿಕೊಳ್ಳುತ್ತಿದೆ. ಆದರೆ ಜಾಗತೀಕರಣದ ಸುಳಿಗೆ ಸಿಕ್ಕು ಬೇರಾವುದೇ ಬದುಕುವ ಉಪಾಯವಿಲ್ಲದೆ, ಅನಿವಾರ್ಯ ಕಾರಣಗಳಿಂದ ಈ ಉದ್ಯೋಗಕ್ಕೆ ಬರುತ್ತಿರುವ ಈ ಮಹಿಳೆಯರನ್ನು ಅಕ್ಷರಶಃ 'ಜೀತದಾಳು'ಗಳನ್ನಾಗಿಸ ಲಾಗಿದೆ. ಅವರಿಗೆ ಘನತೆಯ ವೇತನ ನೀಡುತ್ತಿಲ್ಲ, ಇದು ಆರ್ಥಿಕ ಸಬಲೀಕರಣವೇ? ಅವರನ್ನು ಕೇವಲ ಒಂದು ಹೊಲಿಗೆಯನ್ನು ಹಾಕುವ ಗಾಣದೆತ್ತಿನಂತೆ ಮಾಡಿ, ಬೇರಾವುದೇ ಕೌಶಲ್ಯ ಕಲಿಸುತ್ತಿಲ್ಲ, ಇದು ಸಬಲೀಕರಣವೇ? ಹೆಣ್ಣುಮಕ್ಕಳನ್ನು "ಹಿಂಡಿ" ಕೆಲಸ ತೆಗೆಸಲು ಸೂಪರ್‌ವೈಸರ್, ಫ್ಲೋರ್ ಇನ್‌ಚಾರ್ಜ್‌ಗಳೆಂಬ ಪುರುಷ "ಮಾಸ್ಟರ್"ಗಳನ್ನು ನೇಮಿಸಿ ಅವರ ಕೈಕೆಳಗೆ ಕೆಲಸ ಮಾಡಿಸುವುದು ಮಹಿಳಾ ಸಬಲೀಕರಣವೇ? ಯಾವ ರೀತಿಯ ಹಕ್ಕು ಪ್ರತಿಪಾದನೆಗೂ ಅವಕಾಶವೇ ಇಲ್ಲದಿರುವುದು ಮಹಿಳಾ ಸಬಲೀಕರಣವೇ? ಇಂತಹ ಉದ್ಯೋಗಗಳನ್ನು ಸೃಷ್ಟಿಸಿ ಮಹಿಳೆಯರನ್ನು ಕಟ್ಟಿಹಾಕಲಾಗುತ್ತಿದೆ.

ಗಾರ್ಮೆಂಟ್ಸ್ ಉದ್ಯಮದ ಸ್ವರೂಪ ಜಾಗತಿಕವಾದದ್ದು. ಮೂರು ಮೂರು ತಿಂಗಳಿಗೊಮ್ಮೆ ವಿವಿಧ ಫ್ಯಾಷನ್ ಬಯಸುವ ವಿದೇಶೀ ಗ್ರಾಹಕರು, ಕೇವಲ ಹೆಸರಿನ ಬಲದಿಂದಲೇ ಲಾಭ ಮಾಡುವ ಅಂತರರಾಷ್ಟ್ರೀಯ ಬ್ರಾಂಡ್‌ಗಳು, ಬಂಡವಾಳ ಹೂಡಿದ ಸ್ಥಳೀಯ ಮಾಲೀಕರು, ಎಲ್ಲೋ ಕರ್ನಾಟಕದ ಮಂಡ್ಯ, ಕೋಲಾರ, ಚಿತ್ರದುರ್ಗ, ಮೈಸೂರುಗಳ ಗ್ರಾಮೀಣ ಭಾಗದ ಮಹಿಳೆಯರ ಶ್ರಮ, ಎಲ್ಲಿಂದೆಲ್ಲಿಗೆ ಕೊಂಡಿ ಬೆಸೆದಿದೆ? ಒಂದರ್ಥದಲ್ಲಿ ಗಾರ್ಮೆಂಟ್ಸ್ ಉದ್ಯಮವು ಜಾಗತೀಕರಣದ ನಿಜವಾದ ಕೂಸು.

ಜಾಗತೀಕರಣದ, ನವ ಉದಾರವಾದೀ ಆರ್ಥಿಕತೆಯ ಪರಿಣಾಮವಾಗಿ ಪ್ರಜೆಗಳ ಮೂಲಭೂತ ಅವಶ್ಯಕತೆಗಳನ್ನು ಪೂರೈಸುವ ಜವಾಬ್ದಾರಿಯನ್ನು ಸರ್ಕಾರಗಳು ಕೈ ಬಿಟ್ಟು 'ಕಲ್ಯಾಣ ರಾಜ್ಯ'ದ ಪರಿಕಲ್ಪನೆಯನ್ನೇ ಬಿಟ್ಟುಕೊಟ್ಟಿತೋ, ಅಲ್ಲಿಂದಲೇ ಬಡವರ ಕಾರ್ಮಿಕರ ಬದುಕು ದುಸ್ತರವಾಗಿದೆ. ವ್ಯಕ್ತಿಗಳು ದೇಶಾದ್ಯಂತ ತಮ್ಮಿಷ್ಟ ಬಂದ ಕಡೆ ಬದುಕಬಹುದು ಎಂಬ ಸಂವಿಧಾನದ ಹಕ್ಕಿನ ಹಿನ್ನೆಲೆಯಲ್ಲಿ ವಲಸೆಯನ್ನು ಒಪ್ಪಿಕೊಳ್ಳಬೇಕೋ ಅಥವಾ ಕಾರ್ಮಿಕರ ಬದುಕನ್ನು ದುಸ್ತರಗೊಳಿಸುವಂತಹ, ಅವರ ನೆಲದಿಂದ ಹೊರದಬ್ಬುವಂತಹ ರಾಜಕೀಯ, ಸಾಮಾಜಿಕ ಕಾರಣಗಳ ಹಿನ್ನೆಲೆಯಲ್ಲಿ, ಸಂವಿಧಾನದ ಆಶಯದ ಕ್ರೂರ ವ್ಯಂಗ್ಯವಾಗಿ ಇದನ್ನು ಪರಿಗಣಿಸಬೇಕೋ? ಉತ್ತರ ಸರಳವಾಗಿಲ್ಲ. ಕಟ್ಟಕಡೆಗೆ ಮುಖ್ಯವಾಗುವುದು ಕಾರ್ಮಿಕರ ದಿನನಿತ್ಯದ ಬದುಕು ಅಷ್ಟೇ.

**ಪ್ರತಿಭಾ ಆರ್.**
ಸಂಶೋಧನಾ ವಿದ್ಯಾರ್ಥಿನಿ, ಮಹಿಳಾ ಅಧ್ಯಯನ ವಿಭಾಗ
ಅಕ್ಕಮಹಾದೇವಿ ಮಹಿಳಾ ವಿಶ್ವವಿದ್ಯಾಲಯ, ವಿಜಯಪುರ



# “ಏಕರೂಪವಾದ ಮತ್ತು ಬಹುತ್ವದ ಟಿಪ್ಪಣಿಗಳು

ರಹಮತ್ ತರೀಕೆರೆ

ಭಾರತಕ್ಕೆ ರಾಜಕೀಯವಾಗಿ ಮಾತ್ರವಲ್ಲ, ಭಾಷಿಕವಾಗಿ ಆಹಾರಾತ್ಮಕವಾಗಿ ಉಡುಗೆ ತೊಡುಗೆಯ ವಿಷಯದಲ್ಲಿ ಧಾರ್ಮಿಕವಾಗಿ ಕೂಡ ಸಾಂಸ್ಕೃತಿಕ ಫೆಡರಲಿಸಂ ಅಗತ್ಯವಿದೆ. ಎಂತಲೇ ಬಹುತ್ವದ ಪ್ರಶ್ನೆಯು ಅಂತಿಮವಾಗಿ ಈ ದೇಶದ ಹೃದಯಸ್ವರೂಪಿ ಪ್ರಶ್ನೆ. ಬಹುತ್ವವನ್ನು ಮನ್ನಿಸುವುದು ಎಂದರೆ ಅದರ ದುರ್ಬಲ ಘಟಕಗಳಿಗೆ, ಅಳಿವಿನಂಚಿನಲ್ಲಿರುವ ಭಾಷೆ ಪ್ರಾಣಿ ಪಕ್ಷಿ ಸಂಸ್ಕೃತಿಗಳಿಗೆ, ತಮ್ಮ ಘನತೆಯಲ್ಲಿ ಬದುಕುವುದಕ್ಕೆ ಅವಕಾಶ ಕಲ್ಪಿಸುವ ಪ್ರಶ್ನೆ; ಪುಟ್ಟಗುಂಪುಗಳ ಉಣ್ಣುವ ಉಡುವ ಚಿಂತಿಸುವ ಬರೆಯುವ ಮಾತಾಡುವ ಹಕ್ಕುಗಳನ್ನು ಎತ್ತಿಹಿಡಿಯುವ ಪಶ್ನೆ; ಅಂತಿಮವಾಗಿ ಡೆಮಾಕ್ರಸಿಯ ಪ್ರಶ್ನೆ.

೧

ಈಚೆಗೆ ಭಾರತದ ಗೃಹಮಂತ್ರಿ ಅಮಿತ್‌ಶಾ ಅವರು 'ಹಿಂದಿದಿವಸ'ದ ಸಂದರ್ಭದಲ್ಲಿ 'ಒಂದು ದೇಶ ಒಂದು ಭಾಷೆ' ಎಂದು ಹೇಳಿಕೆ ಮಾಡಿದರು. ಇದಾದ ಬಳಿಕ ಅವರು ಭಾರತದ ಬಹುಪಕ್ಷ ಪದ್ಧತಿಯನ್ನು ತೆಗೆದು ದ್ವಿಪಕ್ಷ ಪದ್ಧತಿಯ ಬಗ್ಗೆಯೂ ಮಾತಾಡಿದರು. ಸಂವಿಧಾನದಲ್ಲಿ ಉಲ್ಲೇಖವಾಗಿರುವ ಎಲ್ಲ ನುಡಿಗಳೂ ರಾಷ್ಟ್ರಭಾಷೆಗಳೆಂದು, ಪ್ರಾದೇಶಿಕ ಪಕ್ಷಗಳು ಪ್ರಾಂತೀಯ ಆಶೋತ್ತರಗಳನ್ನು ಸಮರ್ಥವಾಗಿ ಪ್ರತಿನಿಧಿಸುತ್ತವೆಂದು ಭಾವಿಸಿರುವ ಚಿಂತಕರು ಹಾಗೂ ರಾಜಕಾರಣಿಗಳು, ಶಾರವರ ಹೇಳಿಕೆಗಳನ್ನು ಒಪ್ಪಿಲ್ಲ. ಈ ಆಲೋಚನೆ ದೇಶವನ್ನು ಸರ್ವಾಧಿಕಾರಕ್ಕೆ ಕೊಂಡೊಯ್ಯುವ ಪೂರ್ವಪೀಠಿಕೆಯೆಂದು ಆತಂಕದಿಂದ, ಚರ್ಚೆ ಮಾಡುತ್ತಿದ್ದಾರೆ. ಈ ಹೇಳಿಕೆ ಮತ್ತು ಭಿನ್ನಮತಗಳು ಭಾರತದಲ್ಲಿ ಬಹುತ್ವದ ಚರ್ಚೆಯನ್ನು ಮತ್ತೊಮ್ಮೆ ಮುಂಚೂಣಿಗೆ ತಂದಿವೆ.

'ಬಹುತ್ವ' ಎಂಬ ಪರಿಕಲ್ಪನೆಯು ಕನ್ನಡದ ಮಟ್ಟಿಗೆ ಹೊಸತಲ್ಲ. ಕಳೆದೆರಡು ದಶಕಗಳಿಂದ ಸಾಹಿತ್ಯ ಧರ್ಮ ಸಂಸ್ಕೃತಿ ರಾಜಕಾರಣಗಳಲ್ಲಿ ಚರ್ಚೆಗಳಲ್ಲಿ ಅದು ಮತ್ತೆಮತ್ತೆ ಪ್ರಸ್ತಾಪವಾಗುತ್ತಿದೆ. ಇದಕ್ಕೆ ಮುಖ್ಯ ಕಾರಣ, ಏಕರೂಪೀ ಸಂಸ್ಕೃತಿಯನ್ನು ಹೇರುವ ಶಕ್ತಿ ರಾಜಕಾರಣವು ದೇಶವ್ಯಾಪಿ ಹರಡಿಕೊಂಡಿರುವುದು ಮತ್ತು ಅಧಿಕಾರ ಹಿಡಿದಿರುವುದು. ಸ್ವಾತಂತ್ರ್ಯ ಚಳುವಳಿಯ ಕಾಲದಲ್ಲಿ ಧರ್ಮ ಜಾತಿ ಪ್ರಾಂತ್ಯ ಭಾಷೆಗಳ ಗಡಿಗಳನ್ನು ಮೀರಿ ಒಗ್ಗಟ್ಟು ತೋರಿಸುವ ಆಶಯ ಪ್ರಧಾನವಾಗಿತ್ತು. ಆಗ ಬಹುತ್ವದ ಪ್ರಶ್ನೆಯು ರಾಷ್ಟ್ರೀಯ ವಿಮೋಚನ ಚಳುವಳಿಯಲ್ಲಿ ಬಿರುಕು ತರಬಹುದೆಂಬ ಅಳುಕಿತ್ತು. ಸ್ವಾತಂತ್ರ್ಯಾನಂತರ ಈ ಪ್ರಶ್ನೆಯು 'ವಿವಿಧತೆಯಲ್ಲಿ ಏಕತೆ' ಇತ್ಯಾದಿ ಹೇಳಿಕೆಗಳ ಮೂಲಕ ಚಾಲ್ತಿ ಪಡೆದುಕೊಂಡಿತು. ಇದಕ್ಕೆ ಹಲವು ಚಾರಿತ್ರಿಕ ಕಾರಣಗಳಿವೆ: ಅವೆಂದರೆ–ಭಾರತದ ವಿಭಜನೆ ಮತ್ತು ಗಾಂಧಿಕೊಲೆಯ ಬಳಿಕ ಹಬ್ಬಿದ ಮತೀಯದ್ವೇಷ ಮತ್ತು ಧಾರ್ಮಿಕ ಅಲ್ಪಸಂಖ್ಯಾತರನ್ನು ಕುರಿತು ರಕ್ಷಣಾತ್ಮಕ ನಿಲುವು ಏರ್ಪಟ್ಟಿದ್ದು; ವಿಭಿನ್ನ ಭಾಷಿಕ ಪ್ರಾಂತ್ಯಗಳು ಭಾರತದ ಒಕ್ಕೂಟದೊಳಗೆ ಸೇರಿಕೊಂಡಿದ್ದು; ಭಾಷಾವಾರು ಪ್ರಾಂತ್ಯಗಳು ರಚನೆಯಾಗಿದ್ದು; ಭಾರತದ ಬುಡಕಟ್ಟುಗಳ ಸಾಂಸ್ಕೃತಿಕ ಅಸ್ಮಿತೆಯನ್ನು ಕಾಪಾಡುವ ಒತ್ತಡ ನಿರ್ಮಾಣವಾಗಿದ್ದು; ಬೇರೆಬೇರೆ ಸೈದ್ಧಾಂತಿಕ ಮತ್ತು ಪ್ರಾದೇಶಿಕ ಹಿನ್ನೆಲೆಯುಳ್ಳ ರಾಜಕೀಯ ಪಕ್ಷಗಳು ಒಗ್ಗೂಡಿ ಪ್ರಜಾಪ್ರಭುತ್ವ ವ್ಯವಸ್ಥೆಯನ್ನು ಕಟ್ಟಿಕೊಳ್ಳುವ ಸಂದರ್ಭ ನಿರ್ಮಾಣವಾಗಿದ್ದು; ಆರ್ಥಿಕವಾಗಿ ಸಾಮಾಜಿಕವಾಗಿ ಹಿಂದುಳಿದವರನ್ನು ಒಳಗೊಳ್ಳುವ ಸಮಾಜವಾದಿ ನೀತಿಗಳ ಮೂಲಕ ಕಲ್ಯಾಣರಾಷ್ಟ್ರದ ಕಲ್ಪನೆಯನ್ನು ಮುಂದಿಡಬೇಕಾಗಿದ್ದು ಇತ್ಯಾದಿ.

೨

ಭಾರತವು ಸಹಜವಾಗಿಯೇ ಬಹುತ್ವವುಳ್ಳ ಸಮಾಜ. ಇಲ್ಲಿ ಹಲವು ಧರ್ಮ ಭಾಷೆ ಸಂಸ್ಕೃತಿಗಳು ಇರುವುದು ಮಾತ್ರವಲ್ಲ, ಒಂದೇ ಧರ್ಮ ಸಮುದಾಯ ಭಾಷೆಗಳಲ್ಲೂ ಹಲವು ಸ್ತರ ಪಂಗಡ ಶಾಖೆಗಳಿವೆ. ಅಖಿಲ ಭಾರತೀಯ ಹರಡಿಕೆಯುಳ್ಳ ಸಮುದಾಯಗಳನ್ನು (ಉದಾ: ಬ್ರಾಹ್ಮಣ ಮುಸ್ಲಿಂ ಕ್ರೈಸ್ತ ದಲಿತ) ನೋಡಿದರೂ, ಅಲ್ಲಿ ಆಹಾರ ಮಾತು ಉಡುಪು ಆಚರಣೆಗಳಲ್ಲಿ ಬಹುತ್ವವಿದೆ. ಈ ತಥ್ಯವು ಸಮುದಾಯಗಳು ಸೃಷ್ಟಿಸಿಕೊಂಡಿರುವ ಭಾಷೆ ಸಾಹಿತ್ಯ ಸಂಗೀತ ದೈವಾರಾಧನೆಗಳಿಗೂ ಅನ್ವಯವಾಗುತ್ತದೆ. ಭಾರತೀಯ ಸಂಗೀತವೆಂಬ ಕಲ್ಪಿತ ಜಗತ್ತನ್ನು ಗಮನಿಸಬೇಕು. ಅಲ್ಲಿ ಸಂಗೀತಕ್ಕೆ ಬಳಕೆಯಾಗುವ ಸಾಹಿತ್ಯ, ಅವುಗಳ ಭಾಷೆ, ಅವನ್ನು ಹಾಡಲು ಅಳವಡಿಸುವ ರಾಗ ಮತ್ತು ಮಟ್ಟುಗಳು, ಘರಾಣೆಗಳು ಬಹುರೂಪಿಯಾಗಿವೆ. ಕನ್ನಡವೆಂಬ ಒಂದು ಭಾಷೆಯಲ್ಲೇ ಹತ್ತೆಂಟು ಪ್ರಾದೇಶಿಕ ರೂಪಗಳಿವೆ. ಕುಂದಾಪುರ ಕನ್ನಡದಲ್ಲಿಯೇ ಬ್ರಾಹ್ಮಣರು ಮತ್ತು ಬ್ರಾಹ್ಮಣೇತರರ ಮಾತಿನಲ್ಲಿ ಫರಕಿದೆ. ಇನ್ನು ಕನ್ನಡದೊಳಗೆ ಉರ್ದು ಇಂಗ್ಲಿಷ್ ಫಾರಸಿ ಸಂಸ್ಕೃತ ಮರಾಠಿ ಪೋರ್ಚುಗೀಸ್ ಶಬ್ದಗಳು ಮೂಲಪತ್ತೆ ಮಾಡಲಾಗದಂತೆ ಸೇರಿಕೊಂಡಿವೆ. ಭಾರತೀಯ ದೇಶಭಾಷೆ ಧರ್ಮ ಸಂಗೀತ ಸಂಸ್ಕೃತಿಗಳಿಗೆ ಹೇರಿಕೆಯನ್ನು ತಡೆದು ತನ್ನತನ ಉಳಿಸಿಕೊಳ್ಳುವ

ಗುಣವಿರುವಂತೆ, ತನ್ನ ಒಳಗತ್ಯಕ್ಕಾಗಿ ಸೇರುವುದನ್ನು ಒಳಗೊಂಡು ತನ್ನದಾಗಿಸುವ ಗುಣವೂ ಇದೆ. ಹೀಗಾಗಿಯೇ ಧರ್ಮ ಸಂಗೀತ ಭಾಷೆಗಳನ್ನು ಶುದ್ಧೀಕರಿಸುವ ಯತ್ನಗಳೆಲ್ಲವೂ ಹಾಸ್ಯಾಸ್ಪದವಾಗಿ ಕೊನೆಗೊಂಡಿವೆ ಇಲ್ಲವೆ ಕುರುಡು ಮೂಲಭೂತವಾದಕ್ಕೆ ಕರೆದೊಯ್ದಿವೆ.

ಬಹುತ್ವವು ಭಾರತೀಯ ದೇಶಭಾಷೆಗಳಲ್ಲಿ ಹುಟ್ಟಿರುವ ಸಾಹಿತ್ಯದಲ್ಲಿ ಇನ್ನೂ ಸ್ವಾರಸ್ಯಕರ. ಭಾರತೀಯ ಪ್ರಜೆಗಳಂತೆ ಭಾರತೀಯ ಲೇಖಕರಲ್ಲೂ ಹೆಚ್ಚಿನವರು ಬಹುಭಾಷಿಕರು; ತಮ್ಮನ್ನು ಚತುರ್ಭಾಷಾ ವಿಶಾರದರು ಎಂದು ಕರೆದುಕೊಂಡವರು; ಹಲವು ಭಾಷೆಗಳಲ್ಲಿರುವ ಸಾಹಿತ್ಯದಿಂದಲೂ ಹಲವು ತಾತ್ವಿಕ ಮೂಲಗಳಿಂದಲೂ ಪ್ರೇರಣೆ ಪಡೆದವರು. ತೇಜಸ್ವಿ ಲೋಹಿಯಾ ಕುವೆಂಪು ಕಾರಂತರಿಂದ ಪ್ರಭಾವಿತರಾದ ಬಗ್ಗೆ; ಕುವೆಂಪು ತಮ್ಮ ಮಹಾಕಾವ್ಯ ರಚನೆಗೆ ಜಗತ್ತಿನ ಹತ್ತಾರು ಕವಿಗಳಿಂದ ಪ್ರೇರಣೆ ಪಡೆದಿದ್ದ ಬಗ್ಗೆ ಹೇಳಿಕೊಳ್ಳುವುದನ್ನು ನೆನೆಯಬಹುದು. 'ಕನ್ನಡಕೃತಿ' ಗಳೆಂದು ಕರೆಯಲಾಗುವ 'ವಡ್ಡಾರಾಧನೆ' 'ಇಂದಿರಾಬಾಯಿ' ಮುಂತಾದ ಪಠ್ಯಗಳು ಮೂಲತಃ ಬಹುಭಾಷಿಕ ಪಠ್ಯಗಳು. ಅಲ್ಲಿ ಪ್ರಾಕೃತ, ಸಂಸ್ಕೃತ ಪದ್ಯಗಳೂ ಕೊಂಕಣಿ, ತುಳು ಇಂಗ್ಲಿಷ್ ಸಂಭಾಷಣೆಗಳೂ ಇವೆ. ಜನಪದದಲ್ಲೂ ತತ್ವಪದಕಾರರಲ್ಲೂ ಬಹುಭಾಷೆಗಳಲ್ಲಿ ರಚನೆ ಮಾಡುವವರು ಇದ್ದಾರೆ. ಜ್ಞಾನದ ದೃಷ್ಟಿಯಿಂದಲೂ ನಮ್ಮ ಪಠ್ಯಗಳು ಏಕರೂಪಿಯಲ್ಲ. 'ಕವಿರಾಜಮಾರ್ಗ'ವು ಅಲಂಕಾರ ಗ್ರಂಥವಾಗಿದ್ದೂ ಸಾಂಸ್ಕೃತಿಕ ಪಠ್ಯವಾಗಿರುವುದು ಹೀಗೆ. ಕುಮಾರವ್ಯಾಸನು ತನ್ನ ಕಾವ್ಯವು ಅರಸುಗಳಿಗೆ ವೀರವನ್ನು, ದ್ವಿಜರಿಗೆ ವೇದದಸಾರವನ್ನು ಮಂತ್ರಿಗಳಿಗೆ ರಾಜತಂತ್ರವನ್ನು ವಿರಹಿಗಳಿಗೆ ಶೃಂಗಾರವನ್ನು ಕಲಿಸುತ್ತದೆ ಎಂದು ಘೋಷಿಸುತ್ತಾನೆ. ಕನ್ನಡದ ಮಹತ್ವದ ಕೃತಿಗಳು– 'ಮಲೆಗಳಲ್ಲಿ ಮದುಮಗಳು' 'ಗ್ರಾಮಾಯಣ' 'ನಿಸರ್ಗ' 'ಹಳ್ಳಬಂತುಹಳ್ಳ' 'ಬದುಕು' 'ಗಂಗವ್ವ ಗಂಗಾಮಾಯಿ' 'ಕುಸುಮಬಾಲೆ'–ಸಮಾಜದ ಬಹುಮುಖೀ ಅನುಭವವನ್ನು ಒಳಗೊಂಡಿವೆ. (ಅನುಭವ ದರ್ಶನದ ದೃಷ್ಟಿಯಿಂದ ಈ ಬಗೆಯ ಬಹುತ್ವಕ್ಕೆ ತುಸು ಎರವಾದವರು ನವ್ಯರೆನ್ನಬಹುದು.) ವಚನ ಚಳುವಳಿಯನ್ನಾಗಲಿ, ತತ್ವಪದಗಳನ್ನಾಗಲಿ, ಜನಪದ ಸಾಹಿತ್ಯವನ್ನಾಗಲಿ ಬಹುತ್ವದ ದೃಷ್ಟಿಯಿಂದ ನೋಡಿದರೆ, ಅವು 'ಎಲ್ಲ ಮರಗಳ ಕಾಡು' ಎಂದು ಅರಿವಾಗುವುದು.

೩

ಹೀಗೆ ಭಾರತೀಯ ಭಾಷೆ, ಸಾಹಿತ್ಯ, ಧರ್ಮ, ಸಂಸ್ಕೃತಿ ಆಚರಣೆ ರಾಜಕಾರಣಗಳಲ್ಲಿ ನೆಲೆಸಿರುವ ಬಹುತ್ವವು, ಕೇವಲ ಸಂಭ್ರಮದ ಸಂಗತಿಯಾಗಿಲ್ಲ. ಯಾಕೆಂದರೆ, ಬಹುಧರ್ಮ ಬಹುಭಾಷೆ ಬಹುಸಂಸ್ಕೃತಿ ಬಹುಸಮುದಾಯ ಬಹುಪ್ರಾಂತ್ಯಗಳ ಒಳಗೆ ತರತಮ, ಸಂಘರ್ಷ ಕೊಡುಕೊಳು ಹಾಗೂ ಸಾಮರಸ್ಯದ ನೆಲೆಗಳಿವೆ; ಸಂಕರ ಮತ್ತು ಹೊಸಹುಟ್ಟುಗಳಿವೆ. ಹೀಗಾಗಿಯೇ ಬಹುತ್ವದೊಳಗಿರುವ ಧಾರೆಗಳ ನಡುವೆ ಇರುವ ಸಂಬಂಧದ ಸ್ವರೂಪ ಎಂಥದ್ದು? ಅವುಗಳ ಸಹನಶೀಲತೆ ಶರಣಾಗತಿ ಸಂಘರ್ಷ ಪ್ರತಿರೋಧ ರಾಜಿಗಳ ಹಿಂದಿನ ಒತ್ತಾಸೆಗಳು ಯಾವುವು? ಈ ಬಹುತ್ವವನ್ನು ತಮ್ಮ ಹಿತಾಸಕ್ತಿಗೆ ಬಳಸಿಕೊಳ್ಳುತ್ತಿರುವ ಶಕ್ತಿಗಳು ಯಾವುವು? ಈ ಪ್ರಶ್ನೆಗಳನ್ನು ಎಚ್ಚರದಿಂದ ಪರಿಶೀಲಿಸಬೇಕಿದೆ; ಈ ಹಿನ್ನೆಲೆಯಲ್ಲಿ ಬಹುತ್ವಕ್ಕಿರುವ ಮುಖ್ಯ ಆಯಾಮಗಳನ್ನೂ ಅವು ಸೃಷ್ಟಿಸಿರುವ ಸಾಧ್ಯತೆ ಮತ್ತು ಸಮಸ್ಯೆಗಳನ್ನೂ ತಿಳಿಯಬೇಕಿದೆ. ಭಾರತೀಯ ಸಮಾಜದಲ್ಲಿ ಬಹುತ್ವಕ್ಕಿರುವ ಕೆಲವು ಆಯಾಮಗಳನ್ನು ಹೀಗೆ ಗುರುತಿಸಬಹುದು:

ಅ. ನಿರ್ಲಿಪ್ತತೆಯ ಆಯಾಮ: ಇಲ್ಲಿ ಹಲವು ವಿಭಿನ್ನವಾದ ಸಂಗತಿಗಳು ಒಟ್ಟಿಗಿದ್ದರೂ 'ನಿರ್ಲಿಪ್ತ' ಎನ್ನುವ ಪರಿಯಲ್ಲಿರುತ್ತವೆ. ನಿದರ್ಶನಕ್ಕೆ–ಮಹಾನಗರಗಳಲ್ಲಿ ಹಲವು ಭಾಷಿಕರು ಒಟ್ಟಿಗೆ ಇರುವುದು; ಮಹಾನಗರದ ಅಪಾರ್ಟ್‌ಮೆಂಟುಗಳಲ್ಲಿ ಹಲವು ರಾಜ್ಯದ ಹಲವು ಭಾಷೆಯ ಹಲವು ಜಾತಿ–ಧರ್ಮದ ಜನರಿರುವುದು; ಬಸ್ಸು ರೈಲು ವಿಮಾನಗಳಲ್ಲಿ, ಹೋಟೆಲು ಟಾಕೀಸುಗಳಲ್ಲಿ ಶಾಲಾಕಾಲೇಜುಗಳಲ್ಲಿ ಹಲವು ಹಿನ್ನೆಲೆಯಿಂದ ಬಂದವರು ಸಮಾನವಾದ ಉದ್ದೇಶಕ್ಕೆ ಒಟ್ಟಿಗೆ ಇರುವುದಕ್ಕೆ ಇದು ಸಮೀಪವಾದುದು. ಹಲವು ಬಗೆಯ ಒಣಕಾಳುಗಳು ಒಂದೇ ಬಟ್ಟಲಲ್ಲಿರುವಂತೆ, ಜನ ಅನಿವಾರ್ಯವಾಗಿ ಒಟ್ಟಿಗಿರುತ್ತಾರೆ. ಇಲ್ಲಿರುವ ವೈವಿಧ್ಯತೆಯಲ್ಲಿ ಅಲ್ಪಮಟ್ಟಿನ ಕೊಡುಕೊಳು ಇರುತ್ತದೆಯಾದರೂ, ಅದಕ್ಕೆ ಆಳವಾದ ಬೇರುಗಳಿರುವುದಿಲ್ಲ.

ಆ. ತರತಮವಾದಿ ಆಯಾಮ : ಇಲ್ಲಿ ವೈವಿಧ್ಯ / ಬಹುತ್ವವು ಶ್ರೇಣೀಕರಣ ದಲ್ಲಿರುತ್ತದೆ. ಜಾತಿ ಆಧಾರದಲ್ಲಿ ವಿಭಜನೆಯಾಗಿರುವ ಹಳ್ಳಿಗಳು ಅಥವಾ ಕೇರಿಗಳು, ಅದರೊಳಗಿರುವ ಜನರು ಇದಕ್ಕೆ ಸಾಕ್ಷಿ. ಇಲ್ಲಿ ಕೊಡುಕೊಳು ಗಾಢವಾಗಿರುತ್ತವೆ. ಆದರದು ಭೇದಭಾವದಿಂದ ಕೂಡಿರುತ್ತದೆ. ಇದರ ಸ್ವರೂಪವನ್ನು ಊರಹಬ್ಬಗಳಲ್ಲಿ ನೋಡಬಹುದು. ಹಲವಾರು ಜಾತಿಯ ಮರಗಿಡಬಳ್ಳಿಗಳು ಶ್ರೇಣೀಕರಣವಿಲ್ಲದೆ ಒಟ್ಟಿಗಿರುವ ಕಾಡಿನ ಜತೆಯಿಟ್ಟು ನೋಡಿದರೆ, ಇಲ್ಲಿನ ತರತಮ ಸ್ಪಷ್ಟವಾಗುವುದು. ಈ ತರತಮವಾದಿ ಬಹುತ್ವದಲ್ಲಿ ಕಟ್ಟುಪಾಡಿನ ಉಲ್ಲಂಘನೆಗಳೂ ಜರುಗುತ್ತವೆ. ಆದರೆ ಅವನ್ನು ಅಪೇಕ್ಷಣೀಯವೆಂದು ಸಮಾಜ ಭಾವಿಸುವುದಿಲ್ಲ.

ಇ. ಸಂಕರದ ಆಯಾಮ: ಇಲ್ಲಿ ಸಮಾಜದಲ್ಲಿರುವ ಶ್ರೇಣೀಕೃತ ವೈವಿಧ್ಯ ಮತ್ತು ಅದರ ವಿವಿಧ ಘಟಕಗಳ ನಡುವಣ ತಿಕ್ಕಾಟಗಳ ಜತೆಜತೆಗೇ, ಸಹನಶೀಲತೆ, ಪರಸ್ಪರರ ಅಸ್ತಿತ್ವವನ್ನು ಗೌರವಿಸುವಿಕೆ, ಕೊಡುಕೊಳುವಿಕೆಯ ಸ್ಪೇಸ್ ಹೆಚ್ಚಿರುತ್ತದೆ. ವಿಭಿನ್ನ ಘಟಕಗಳು ಪರಸ್ಪರ ಕೂಡುವ ತಾಣಗಳನ್ನು ತವಕದಲ್ಲಿ ಹುಡುಕಿಕೊಳ್ಳುತ್ತವೆ. ತಮ್ಮ ವಿಶಿಷ್ಟತೆ ಬಿಟ್ಟುಕೊಡದೆ ಕೂಡಲು ತೆರೆದುಕೊಂಡಿರುತ್ತವೆ. ಪರಸ್ಪರರ ಕನ್ನಡಿಯಲ್ಲಿ ನೋಡಿಕೊಂಡು ಕಲಿಯುವಿಕೆಯೂ ಇಲ್ಲಿರುತ್ತದೆ. ಚಾರಿತ್ರಿಕವಾದ ಇಲ್ಲಿನ ಕೂಡುವಿಕೆಯಲ್ಲಿ ಹೆಚ್ಚಿನ ಸೀಮೋಲ್ಲಂಘನೆ ಸಂಭವಿಸುತ್ತದೆ. ತತ್ಪರಿಣಾಮವಾಗಿ ಹೊಸತೊಂದು ರೂಪವೇ ಹುಟ್ಟಿಬಿಡುತ್ತದೆ. ಉರ್ದು, ಮೊಹರಂ, ಸೂಫಿಸಂ, ಹಿಂದೂಸ್ತಾನಿ ಸಂಗೀತ; ಹುಸೇನಿ ಬ್ರಾಹ್ಮಣರು, ಪಿಂಜಾರರು ತರಹದ ಸಮುದಾಯಗಳು; ಎರಡನೇ ಇಬ್ರಾಹಿಮನ 'ಕಿತಾಬೆನವರಸ್' ತರಹದ ಕೃತಿಗಳು, ದಾರಾಶುಕೊನಂತಹ ದಾರ್ಶನಿಕರು; ರಾಮಕೃಷ್ಣ ಪರಮಹಂಸ, ಸಾಯಿಬಾಬಾ, ಶಿಶುನಾಳ ಶರೀಫ ಮುಂತಾದ ಸಂತರು; ಬಿಸ್ಮಿಲ್ಲಾಖಾನ್, ಜೇಸುದಾಸ್, ಟಿ. ಎಂ. ಕೃಷ್ಣ ಅಥವಾ ಪರ್ವೀನ್ ಸುಲ್ತಾನರ ಶಾಸ್ತ್ರೀಯಸಂಗೀತ–ಇವು ಸೀಮೋಲ್ಲಂಘನೆಯ ಫಲಗಳು. ಇವು ಕಲಬೆರಕೆಯ ಸಂಗತಿಗಳಾಗಿ ಮೊದಲ ಘಟ್ಟದಲ್ಲಿ ಉಪೇಕ್ಷೆ ಅನುಮಾನಕ್ಕೆ ಒಳಗಾಗುತ್ತವೆ; ಆದರೆ ಕಾಲಕ್ರಮೇಣ ಸಾರ್ವಜನಿಕ ಮಾನ್ಯತೆ ಮತ್ತು ಸ್ವೀಕಾರ ಪಡೆಯುತ್ತವೆ. ಈ ಹಿನ್ನೆಲೆಯಲ್ಲೇ ವೇದಾಂತದ ತಲೆ ಮತ್ತು ಇಸ್ಲಾಮಿನ ದೇಹದಲ್ಲಿ ಭಾರತ ಕಟ್ಟುವ ವಿವೇಕಾನಂದರ ಕಲ್ಪನೆ; ಗಾಂಧಿಯವರ ಸರ್ವಧರ್ಮ ಪ್ರಾರ್ಥನೆಗಳು, ಹಿಂದೂಸ್ತಾನಿ ಭಾಷೆಯ ಒಲವು ಮೂಡಿದವು.

ಈ. ನಿಭಾವಣೆಯ ಆಯಾಮ: ಇಲ್ಲಿ ಸಮಾಜದಲ್ಲಿರುವ ಬಹುತ್ವವನ್ನು ಅಧಿಕಾರಸ್ಥ ವರ್ಗ ಮತ್ತು ಜಾತಿಗಳು ತಮ್ಮ ಹಿತಾಸಕ್ತಿಗಾಗಿ ಹುಶಾರಾಗಿ ನಿಭಾಯಿಸುವಿಕೆ ಇರುತ್ತದೆ. ಹಿಂದುತ್ವವು ಭಾರತದ ಜಾತಿಗಳನ್ನು ಅವುಗಳಲ್ಲಿರುವ ಶ್ರೇಣೀಕರಣದ ಸಮೇತ ಉಳಿಸಿಕೊಳ್ಳಲು, ಅದೇಕಾಲಕ್ಕೆ ಸಮಾನತೆಗಾಗಿ ಅವುಗಳ ನಡುವೆ ಸಂಘರ್ಷ ನಡೆಯದಂತೆ ಸಾಮರಸ್ಯ ಏರ್ಪಡಿಸಲು, ಇಸ್ಲಾಂ ಕ್ರೈಸ್ತಗಳನ್ನು ಶತ್ರುಗಳಾಗಿ ಕಟ್ಟಿಕೊಡಲು ಮಾಡುವ ಯತ್ನಗಳು ಇಂಥವು; ಇಲ್ಲಿ ಆರ್ಥಿಕ ಸಾಮಾಜಿಕ ತರತಮ ಉಳಿಸಿಕೊಂಡೇ ವೈವಿಧ್ಯವನ್ನು ನಿರ್ದಿಷ್ಟ ಅಜೆಂಡಾಕ್ಕಾಗಿ ನಿಭಾಯಿಸುವ ಸೋಶಿಯಲ್ ಇಂಜಿನಿಯರಿಂಗ್ ಇರುತ್ತದೆ. ಜಾಗತೀಕರಣದ ಭಾಗವಾಗಿ ಬಂದಿರುವ ಮಾರುಕಟ್ಟೆ ಶಕ್ತಿಗಳು ಕೂಡ ಬಹುತ್ವಗಳನ್ನು ತಮ್ಮ ವಾಣಿಜ್ಯ ಹಿತಾಸಕ್ತಿಯ ಅಗತ್ಯಕ್ಕೆ ತಕ್ಕಂತೆ ಭಾರತದ ಬಹುತ್ವವನ್ನು ಹೀಗೆ 'ಬಳಸಿ'ಕೊಳ್ಳುತ್ತ ಬಂದಿವೆ.

ಉ. ಬಿಕ್ಕಟ್ಟಿನ ಆಯಾಮ : ಕೆಲವೊಮ್ಮೆ ಅನಿವಾರ್ಯ ಮತ್ತು ತುರ್ತಿನ ಕಾರಣಗಳಿಂದ ಬಹುತ್ವದ ಮಹತ್ವವನ್ನು ಸಮಾಜ ಪರಿಭಾವಿಸಬಹುದು. ಡ್ಯಾಮು ಹಸಿರುಕ್ರಾಂತಿ ಯಾಂತ್ರೀಕೃತ ಕೃಷಿ, ಜಂಕ್ ಆಹಾರದ ಜನಪ್ರಿಯತೆ ಬಂದು ಬೆಳೆಪದ್ಧತಿ ಮತ್ತು ಆಹಾರ ಪದ್ಧತಿಯಲ್ಲಿದ್ದ ಬಹುತ್ವವು ನಾಶವಾಯಿತು. ಇದು ಮನುಷ್ಯರ ಆರೋಗ್ಯದ ಮೇಲೆ ಕೆಟ್ಟಪರಿಣಾಮ ತಂದಿತು. ಇಂಥ ಬಿಕ್ಕಟ್ಟಿನಲ್ಲಿ ಸಹಜಕೃಷಿಗೂ ಸಾವಯವ ಕೃಷಿಗೂ ಸಿರಿಧಾನ್ಯಗಳಿಗೂ ಮಾಂಸಾಹಾರಕ್ಕೂ ಸ್ವಾಗತ ಸಿಕ್ಕುತ್ತಿದೆ. ಇದರ ಆರೋಗ್ಯದ ಕಾಳಜಿಗಳಿವೆ. ನಿಜವಾದ ಬಹುತ್ವವು ಬಿಕ್ಕಟ್ಟಿನ ಕಾಲದಲ್ಲಿ ಆಸ್ತಿತ್ವದ ಪ್ರಶ್ನೆಯಾಗಿ ಬರುವಂತಿರಬಾರದು. ಶಾಂತಿಕಾಲದಲ್ಲೂ ಸಮಾಜದ ಸಹಜ ಲಯವಾಗಿರಬೇಕು.

ಊ. ವಿನಾಶಕ ಆಯಾಮ: ಇಲ್ಲಿ ಬಹುರೂಪಿಯಾದ ಭಾರತದ ಸಮಾಜ ಸಾಹಿತ್ಯ ಸಂಗೀತ ಧರ್ಮ ಭಾಷೆಗಳನ್ನು ಏಕರೂಪಿಯಾಗಿ ಗ್ರಹಿಸಲಾಗುತ್ತದೆ. ಇಲ್ಲಿ ವಿಭಿನ್ನತೆ ವೈವಿಧ್ಯ ಭಿನ್ನಮತಗಳು ಸಹಬಾಳುವೆ ಮಾಡುವುದನ್ನು ಉತ್ತೇಜಿಸಲಾಗುವುದಿಲ್ಲ. ತನ್ನ ಜತೆಗೆ ತನಗಿಂತ ವಿಭಿನ್ನವಾಗಿರುವುದು ಇರಬಾರದು,

ಇದ್ದರೂ ಸಮಾನ ಸ್ಥಾನದಲ್ಲಿರಬಾರದು, ಅಧೀನದಲ್ಲಿರಬೇಕು ಎನ್ನುವ ಯಜಮಾನಿಕೆ ಧೋರಣೆ ಇರುತ್ತದೆ; ಧರ್ಮದ ಒಂದು ರೂಪವನ್ನು ಅಧಿಕೃತವೆಂದೂ ಉಳಿದವನ್ನು ಅನಧಿಕೃತವೆಂದೂ ಭಾವಿಸುವ ಹಠಮಾರಿತನ ಇಲ್ಲಿರುತ್ತದೆ. ಈ ನಿಲುವು ಬಲಿಷ್ಠರು ಮಾತ್ರ ಬದುಕಬಹುದು ಎಂಬ ತತ್ವಕ್ಕೆ ಕೊಂಡೊಯ್ಯುತ್ತದೆ. ಸಂಘಪರಿವಾರದವರು ಹೇಳುವ 'ಹಿಂದೂ ಹಿಂದಿ ಹಿಂದೂಸ್ಥಾನ್' ತ್ರಿವಳಿ ಪರಿಕಲ್ಪನೆಯಲ್ಲಿ, ಗೊಂಡಿ ತುಳು ಉರ್ದು ಕನ್ನಡ ತಮಿಳಿನಂತಹ ಸ್ವತಂತ್ರ ಸಮೃದ್ಧ ಭಾಷೆಗಳ ಸಮಾನ ಅಸ್ತಿತ್ವವನ್ನು ಮನ್ನಿಸುವುದಿರಲಿ; 'ಹಿಂದಿ'ಯ ಆಸುಪಾಸಿನಲ್ಲೇ ಇರುವ ಇಂಡೋ ಆರ್ಯನ್ ಗುಂಪಿಗೆ ಸೇರಿದ ಮಾಗಧಿ ಅವಧಿ ಮೈಥಿಲಿ ಭೋಜಪುರಿ ಮೇವಾರಿಗಳನ್ನು ಹಿಂದಿಯ ಏಕರೂಪದಲ್ಲಿ ಕರಗಿಸುವ ಇರಾದೆಯಿದೆ. ಇದರಂತೆಯೇ ಈಚೆಗೆ ಪ್ರಭಾವಶಾಲಿಯಾಗಿರುವ ಅರಬ್‌ಮೂಲದ ವಹಾಬಿ ಇಸ್ಲಾಮಿಕ್ ಪಂಥಗಳು, ಭಾರತದ ಮುಸ್ಲಿಮರು ಸ್ಥಳೀಯ ಪ್ರಾದೇಶಿಕ ನೆಲೆಯಲ್ಲಿ ಕಟ್ಟಿಕೊಂಡಿರುವ ಎಲ್ಲ ಬಗೆಯ ಸಾಂಸ್ಕೃತಿಕ ಲೋಕಗಳನ್ನು ನಿರಾಕರಿಸುತ್ತಿವೆ; ಅವು ಸೂಫಿ ಶಿಯಾ ಅಹಮದಿಯಾ ಪಂಗಡಗಳ ಅಸ್ತಿತ್ವವನ್ನೇ ನಿರಾಕರಿಸುತ್ತವೆ. ಎಲ್ಲ ಏಕರೂಪೀ ವಾದಗಳು ಧರ್ಮ ಜನಾಂಗ ಭಾಷೆ ಸಂಸ್ಕೃತಿಗಳಲ್ಲಿ ಬೆರಕೆಯಾಗಿದೆಯೆಂಬ ಹಾಗೂ ಅವನ್ನು ಶುದ್ಧೀಕರಿಸಬೇಕೆಂಬ ವ್ಯಸನಕ್ಕೆ ಬಿದ್ದಿರುತ್ತವೆ. ಈ ಏಕರೂಪವಾದಿ ಸಿದ್ಧಾಂತಗಳಿಗೆ ರಾಜಕೀಯ ಅಧಿಕಾರ ಸಿಕ್ಕರೆ ಅವು ಕೇವಲ ಅಮೂರ್ತ ಚಿಂತನಾಕ್ರಮವಾಗಿ ಇರುವುದಿಲ್ಲ. ಸಮುದಾಯಗಳಲ್ಲಿ ಆಲೋಚನಕ್ರಮ ಧರ್ಮ ಭಾಷೆ ಎಕಾನಮಿ ಆಹಾರ ಪಾನೀಯ ಆಚರಣೆಗಳನ್ನು ವ್ಯವಸ್ಥಿತವಾಗಿ ನಾಶಮಾಡಲು ಹವಣಿಸುತ್ತವೆ. ಮುಸ್ಲಿಂ ಮೂಲಭೂತವಾದ, ಬಲಪಂಥೀಯ ಹಿಂದುತ್ವ, ನಾಜಿವಾದ, ಯಹೂದಿಗಳ ಜಿಯೋನಿಜಂ, ಪುರುಷವಾದ, ವಸಾಹತುವಾದ ಸಾಮ್ರಾಜ್ಯಶಾಹಿವಾದ ಹಾಗೂ ಮಾರುಕಟ್ಟೆವಾದಗಳು ಈ ವರ್ತನೆಯನ್ನು ಬೇರೆಬೇರೆ ಪ್ರಮಾಣ ಮತ್ತು ರೂಪದಲ್ಲಿ ತೋರಿರುವುದನ್ನು ಚರಿತ್ರೆ ದಾಖಲಿಸಿದೆ. ಇವು ತೋರಿದ ಅಸಹನೆಯಿಂದ ಯುದ್ಧ, ಹಿಂಸೆ, ಜನಾಂಗನಾಶ, ಪುಸ್ತಕನಾಶ, ಸ್ಮಾರಕಗಳ ನಾಶ, ಹೆಸರು ಬದಲಾವಣೆಗಳು ಸಂಭವಿಸುತ್ತವೆ. ಭಾರತದಲ್ಲಿ ಮುಸ್ಲಿಮರಿಗೆ ಸಂಬಂಧಿಸಿದ ಐತಿಹಾಸಿಕ ಹೆಸರುಗಳನ್ನು ಬದಲಿಸುತ್ತಿರುವುದರಲ್ಲಿಯೂ, ಬಮಿಯಾನ್ ಬುದ್ಧನನ್ನು ಕೆಡಹಿದ್ದರಲ್ಲಿಯೂ ಇದೇ ಇರಾದೆಯಿದೆ. ಈಚೆಗೆ ಭಾರತದಲ್ಲಿ ಆಕ್ರಮಣಶೀಲವಾಗಿರುವ ಸಸ್ಯಾಹಾರವಾದವು ಮಾಂಸಾಹಾರವನ್ನು ತಾಮಸಕ್ಕೆ ಕ್ರೂರತೆಗೆ ಜೋಡಿಸಿರುವುದನ್ನು, ಅದರಲ್ಲೂ ದನಮಾಂಸದ ವಿಷಯದಲ್ಲಿ ಬೀದಿಯಲ್ಲಿ ಬಡಿದು ಜನರನ್ನು ಕೊಲ್ಲುತ್ತಿರುವುದನ್ನು ಇಲ್ಲಿಯೇ ಉಲ್ಲೇಖಿಸಬೇಕು. ಕಾಂಗ್ರೆಸ್‌ಮುಕ್ತ, ಕಮ್ಯುನಿಸ್ಟ್ ಮುಕ್ತ, ಮುಸ್ಲಿಂಮುಕ್ತ ಭಾರತದ ಪರಿಕಲ್ಪನೆಗಳು ಇದೇ ಹಿನ್ನೆಲೆಯಲ್ಲಿ ಹುಟ್ಟಿದವು. ಈ ಬಗೆಯ ನೇತ್ಯಾತ್ಮಕ ಪರಿಕಲ್ಪನೆಗಳು ಆಳದಲ್ಲಿ ತಮ್ಮದೇ ಸಮುದಾಯಗಳ ಮಹಿಳೆಯರಿಲ್ಲದ ಸಾರ್ವಜನಿಕ ಬದುಕನ್ನು ಪರಿಕಲ್ಪಿಸಿಕೊಳ್ಳುತ್ತವೆ. ಇಂಥ ಬಹುತ್ವವಿರೋಧೀ ಏಕರೂಪವಾದಗಳು ಭಾರತದಲ್ಲಿ ಮಾತ್ರವಲ್ಲ, ಹಲವು ಧಾರ್ಮಿಕ ಸಮುದಾಯಗಳು ಸಮಾನ ಹಕ್ಕಿನಿಂದ ಬದುಕಬೇಕಾದ ಪಾಕಿಸ್ತಾನ, ಬಾಂಗ್ಲಾದೇಶ, ಮ್ಯಾನ್ಮಾರ್, ಶ್ರೀಲಂಕಾಗಳಲ್ಲೂ ಅಪಾರ ಪ್ರಮಾಣದ ನಷ್ಟವನ್ನು ಉಂಟುಮಾಡಿವೆ.

೪

ಭಾರತವು ಹಲವು ರಾಜ್ಯಗಳು ಬೇರೆಬೇರೆ ಕಾಲಘಟ್ಟದಲ್ಲಿ ವಿಶಿಷ್ಟ ಕಾರಣಗಳಿಂದ ಸೇರಿಕೊಂಡು ರೂಪುಗೊಂಡಿರುವ ಒಂದು ಫೆಡರಲ್ ವ್ಯವಸ್ಥೆಯುಳ್ಳ ದೇಶ. ಅದು ಹೀಗೆ ಗಣರಾಜ್ಯವಾಗುವ ಮುನ್ನವೇ, ಗಣರಾಜ್ಯವಾಗಿ ಭಾಷಾವಾರು ಪ್ರಾಂತ್ಯಗಳಾಗಿ ಮರುಸಂಘಟನೆಗೊಳ್ಳುವ ಮುನ್ನವೇ, ಟಾಗೂರರು ಪಂಜಾಬ ಸಿಂಧು ಗುಜರಾತ ಮರಾಠಾ ದ್ರಾವಿಡ ಉತ್ಕಲ ವಂಗ ಎಂದು ಬಹುತ್ವದ ಪರಿಭಾಷೆಯಲ್ಲಿ ಅದನ್ನು ವರ್ಣಿಸಿದ್ದರು; ಕುವೆಂಪು ಅವರ ನಾಡಗೀತೆಯೂ ಭಾರತವನ್ನು ಹೀಗೆ ಸಾಂಸ್ಕೃತಿಕವಾಗಿ ಫೆಡರಲ್ ವ್ಯವಸ್ಥೆಯಾಗಿ ಕಲ್ಪಿಸಿಕೊಂಡು ರಚನೆಯಾಗಿದೆ. ಭಾರತಕ್ಕೆ ರಾಜಕೀಯವಾಗಿ ಮಾತ್ರವಲ್ಲ, ಭಾಷಿಕವಾಗಿ ಆಹಾರಾತ್ಮಕವಾಗಿ ಉಡುಗೆ ತೊಡುಗೆಯ ವಿಷಯದಲ್ಲಿ ಧಾರ್ಮಿಕವಾಗಿ ಕೂಡ ಸಾಂಸ್ಕೃತಿಕ ಫೆಡರಲಿಸಂ ಅಗತ್ಯವಿದೆ. ಎಂತಲೇ ಬಹುತ್ವದ ಪ್ರಶ್ನೆಯು ಅಂತಿಮವಾಗಿ ಈ ದೇಶದ ಹೃದಯಸ್ವರೂಪಿ ಪ್ರಶ್ನೆ. ಬಹುತ್ವವನ್ನು ಮನ್ನಿಸುವುದು ಎಂದರೆ ಅದರ ದುರ್ಬಲ ಘಟಕಗಳಿಗೆ, ಅಳಿವಿನಂಚಿನಲ್ಲಿರುವ ಭಾಷೆ ಪ್ರಾಣಿ ಪಕ್ಷಿ ಸಂಸ್ಕೃತಿಗಳಿಗೆ, ತಮ್ಮ ಘನತೆಯಲ್ಲಿ ಬದುಕುವುದಕ್ಕೆ ಅವಕಾಶ ಕಲ್ಪಿಸುವ ಪ್ರಶ್ನೆ; ಪುಟ್ಟಗುಂಪುಗಳ ಉಣ್ಣುವ ಉಡುವ ಚಿಂತಿಸುವ ಬರೆಯುವ ಮಾತಾಡುವ ಹಕ್ಕುಗಳನ್ನು ಎತ್ತಿಹಿಡಿಯುವ ಪಶ್ನೆ; ಅಂತಿಮವಾಗಿ ಡೆಮಾಕ್ರಸಿಯ ಪ್ರಶ್ನೆ.

ಕನ್ನಡ ಕಾವ್ಯ ಮತ್ತು ಶಾಸನಗಳಲ್ಲಿ ಆದರ್ಶರಾಜ್ಯವನ್ನು ಬಹುತ್ವದ ಪರಿಭಾಷೆಯಲ್ಲಿ ವರ್ಣಿಸುವ ಚಿತ್ರಗಳು ಸಿಗುತ್ತವೆ. 'ಬಹುಧರ್ಮಧೇನುನಿವಹಕ್ಕಾಡುಂಬೊಲಂ' (ಹಲವು ಧರ್ಮದ ಹಸುಗಳು ಒಟ್ಟಿಗೆ ಇರುವ ಮೈದಾನ); ನಾಡಗೀತೆಯಲ್ಲಿರುವ 'ಹಿಂದೂ ಕ್ರೈಸ್ತ ಮುಸಲ್ಮಾನ ಪಾರಸಿಕ ಜೈನರುದ್ಯಾನ'; ಇಕ್ಬಾಲರ ಗೀತೆಯಲ್ಲಿ ಬರುವ 'ಹಂ ಬುಲ್‌ಬುಲೇ ಹೈ ಇಸಕೆ ಈ ಗುಲಸಿತಾ ಹಮಾರ'; 'ನೂರುಮರ ನೂರುಸ್ವರ' ಎಂಬ ಕಲ್ಪನೆ–ಇವುಗಳಲ್ಲಿ ಕೆಲವು. ಇಲ್ಲಿ ಹಸು, ಧಾರ್ಮಿಕ ಸಮುದಾಯಗಳು, ಹೂದೋಟ, ಮರ ಹಕ್ಕಿ ಸ್ವರ ಇತ್ಯಾದಿ ರೂಪಕಗಳಿವೆ. ಇವು ಪರಸ್ಪರ ವಿಭಿನ್ನವಾದ ಸಂಗತಿಗಳು ಪರಸ್ಪರರ ಅಸ್ತಿತ್ವ ಮನ್ನಿಸುತ್ತ ಜತೆಗೆ ಬದುಕುತ್ತಿರುವುದನ್ನು ಸೂಚಿಸುತ್ತಿವೆ. ಆದರೆ ಇವು ಗಳಿಸಿಕೊಳ್ಳಬೇಕಾದ ಆದರ್ಶಸ್ಥಿತಿಯನ್ನು ಹೇಳುತ್ತವೆಯೇ ಹೊರತು ವಾಸ್ತವವನ್ನಲ್ಲ; ಆದರೆ ಕಷ್ಟಕಾಲಗಳಲ್ಲಿ ಇಂಥ ಆದರ್ಶಗಳನ್ನು ಮತ್ತೆಮತ್ತೆ ಹೇಳಿಕೊಳ್ಳುವ ಅಗತ್ಯ ಸಮಾಜಕ್ಕೆ ಬೀಳುತ್ತದೆ. ಕವಿರಾಜಮಾರ್ಗಕಾರನು 'ಪರಧರ್ಮಮಂ ಪರವಿಚಾರಮುಮಂ ನೆರೆ ಸೈರಿಸಲ್ಕೆ ಕಸವರಂ' (ಮತ್ತೊಬ್ಬರ ಧರ್ಮ ಮತ್ತು ವಿಚಾರಗಳನ್ನು ಸೈರಿಸಿಕೊಳ್ಳುವುದು ಚಿನ್ನಕ್ಕೆಸಮಾನ) ಎಂಬ ಆದರ್ಶದ ಹೇಳಿಕೆಯನ್ನು ಇಂಥ ಕಷ್ಟಕಾಲದಲ್ಲೇ ಮಾಡಿರಬಹುದು. ಈ ಹೇಳಿಕೆ ವಾಸ್ತವ ಹೀಗಿಲ್ಲವೆಂದು ಧ್ವನಿಸುತ್ತಿದೆ ಮತ್ತು ಇಂಥದೊಂದು ವಾಸ್ತವ ನಿರ್ಮಾಣಗೊಳ್ಳಬೇಕೆಂದು ಕನಸಿಸುತ್ತಿದೆ.



*ಇ–ಜ್ಞಾನ ಟ್ರಸ್ಟ್ ಮತ್ತು ಅದಮ್ಯ ಚೇತನ ಸಂಸ್ಥೆಯವರು ದಿನಾಂಕ : ೩೦–೦೮–೨೦೧೯ರಂದು ೬೦ ಶಾಲೆಗಳಿಗೆ ಉಚಿತ ಗ್ರಂಥಾಲಯ ಪುಸ್ತಕ ವಿತರಣೆಯ ಕಾರ್ಯಕ್ರಮವನ್ನು ಬೆಂಗಳೂರಿನಲ್ಲಿ ಹಮ್ಮಿಕೊಂಡಿದ್ದರು. ಆ ಸಂದರ್ಭದಲ್ಲಿ ಟಿ. ಎಸ್. ಗೋಪಾಲ್ ಅವರ 'ನವಕರ್ನಾಟಕ ಕನ್ನಡ ಕಲಿಕೆ' ಮಾಲಿಕೆಯ 'ಕನ್ನಡ ಒಗಟುಗಳು' ಮತ್ತು 'ಭಾರತೀಯ ಕಾವ್ಯ ಮೀಮಾಂಸೆ' ಪುಸ್ತಕಗಳನ್ನು ಬೆಂಗಳೂರಿನಲ್ಲಿ ಬಿಡುಗಡೆ ಮಾಡಲಾಯಿತು. ವೇದಿಕೆಯಲ್ಲಿ ಟಿ. ಎಸ್. ಗೋಪಾಲ್, ಟಿ. ಜಿ. ಶ್ರೀನಿಧಿ, ವೈ. ಬಿ. ರಾಮಕೃಷ್ಣ, ಎಚ್. ಆರ್. ಅಪ್ಪಣ್ಣಯ್ಯ, ತೇಜಸ್ವಿನಿ ಅನಂತಕುಮಾರ್, ಎ. ರಮೇಶ ಉಡುಪ ಉಪಸ್ಥಿತರಿದ್ದರು.*

ಬಹುತ್ವವು ಭಾರತದಂತಹ ದೇಶಗಳ ನರಮಂಡಲ ಅಥವಾ ಶ್ವಾಸಕೋಶ. ಅದು ಸಮುದ್ರದಲ್ಲಿ ಜಲಚರಗಳಂತೆ, ನೆಲದೊಳಗಿನ ಖನಿಜದಂತೆ ನಿಸರ್ಗಸಹಜವಾಗಿ ಸಿಗುವಂಥದ್ದಲ್ಲ. ಅದು ಕರ್ನಾಟಕತ್ವ, ಭಾರತೀಯತೆ, ದಲಿತತ್ವ, ಜಾತ್ಯತೀತತೆ, ಸ್ತ್ರೀತ್ವಗಳ ಹಾಗೆ, ಎಚ್ಚರಿಕೆ ಹೊಣೆಗಾರಿಕೆ ಹಾಗೂ ಆದರ್ಶಮೌಲ್ಯಪ್ರಜ್ಞೆಯಿಂದ ಸಮಾಜವು ಕಟ್ಟಿಕೊಳ್ಳುವ ಜೀವನತತ್ವ; ದೇಶತತ್ವ ಕೂಡ. ಹೀಗೆ ಕಟ್ಟಿಕೊಳ್ಳುವಾಗ, ಬಹುತ್ವದ ಹಾದಿಯ ತೊಡಕುಗಳಾದ ಪ್ರಾದೇಶಿಕ ದುರಭಿಮಾನ, ಕೋಮುವಾದ ಮತೀಯ ರಾಷ್ಟ್ರೀಯತೆ, ಮೂಲಭೂತವಾದ ಕುರುಡು ಪಾಶ್ಚಿಮಾತ್ಯೀಕರಣ ಮಾರುಕಟ್ಟೀಕರಣಗಳ ಬಗ್ಗೆ ವಿಮರ್ಶಾತ್ಮಕ ಪ್ರತಿರೋಧ ಸೃಷ್ಟಿಸುವುದು; ಬಹುತ್ವದೊಳಗಿನ ನೇತ್ಯಾತ್ಮಕ ಅಂಶಗಳಾದ ಜಾತಿಪದ್ಧತಿ ಅಸ್ಪೃಶ್ಯತೆ ಸ್ತ್ರೀ ಅಸಮಾನತೆಯ ನಂಬಿಕೆ ಮತ್ತು ಆಚರಣೆಗಳನ್ನು ಇಲ್ಲವಾಗಿಸುವುದು ಕೂಡ ಸಾಧ್ಯವಾಗಬೇಕು. ಜೀವಪರ ಬಹುತ್ವವನ್ನು ಉಳಿಸಿಕೊಳ್ಳುವ ಮತ್ತು ಅದನ್ನು ಡೆಮಾಕ್ರಟೈಜ್ ಮಾಡುವ ಮೆಕ್ಯಾನಿಸಮನ್ನು ಸ್ಪಂದನಶೀಲ ನಾಗರಿಕ ಸಮಾಜವು ನಿರಂತರ ಶೋಧಿಸುತ್ತಿರಬೇಕು; ಈ ಕುರಿತು ಸುದ್ದಿಮಾಧ್ಯಮಗಳನ್ನು ಸಮುದಾಯಗಳನ್ನು ಪ್ರಭುತ್ವವನ್ನು ಶಿಕ್ಷಣವನ್ನು ಸೆನ್ಸಿಟೈಜ್ ಮಾಡುತ್ತಲಿರಬೇಕು. ಹದುಳದಾಯಕ ಬಹುತ್ವವನ್ನು ನಿಭಾಯಿಸುವುದು, ಸಾರ್ವಜನಿಕ ಚಿಂತಕರಿಗೆ, ನಾಗರಿಕ ಸಮಾಜಕ್ಕೆ ಹಾಗೂ ಪ್ರಭುತ್ವಕ್ಕೆ ಸದಾ ಸವಾಲಿನ ಹೊಣೆಗಾರಿಕೆ. ಅರ್ಥಪೂರ್ಣವಾದ ನಮ್ಮದಿಯ ದೇಶವು ಹಲವು ಭಾಷೆ ಧರ್ಮ ಸಮುದಾಯಗಳ ದುಡಿಮೆ ಕೊಡುಗೆಗಳಿಂದಲೇ ರೂಪುಗೊಳ್ಳುವುದು. ಇಂಥ ಒಳಗೊಳ್ಳುವ ಬಹುತ್ವದ ತತ್ವವನ್ನು ಉಲ್ಲಂಘಿಸಿಕೊಂಡ ದೇಶಗಳು ಛಿದ್ರಗೊಂಡಿರುವುದನ್ನು ಚರಿತ್ರೆ ದಾಖಲಿಸಿದೆ. ಎಂತಲೇ ಭಾರತವನ್ನು ಏಕರೂಪೀಕರಣದತ್ತ ಮತ್ತು ಛಿದ್ರೀಕರಣದತ್ತ ಒಯ್ಯುವ ಆಲೋಚನೆ ಮತ್ತು ಹೇಳಿಕೆಗಳು, ಆತಂಕ ಹುಟ್ಟಿಸುತ್ತವೆ.

**ರಹಮತ್ ತರೀಕೆರೆ**
'ಸೂಫಿ', ಎಂಪಿ ಪ್ರಕಾಶ ನಗರ, ಹೊಸಪೇಟೆ – ೫೮೩೨೦೧
Email : rtarikere@gmail.com

# ಚಿಂತಿಸಿ ಫಲವಿಲ್ಲ

ಮಿಂಚಿ ಹೋಗುತಿದೆ ಸಮಯ
ಎದ್ದೇಳು ಮಾನವ
ಚಿಂತಿಸಿ ಫಲವಿಲ್ಲ
ಬೆಳೆಸಿಕೋ ಅಭಿಯಾನವ.

ಶತಶತಮಾನಗಳು ಕಳೆದು
ಬರಿದಾಗಿ
ನೆಲದಾಳದ ಜಲವು
ಕೆಟ್ಟ ಕನಸುಗಳು

ಕಾದಿವೆ ಮುಂಬರುವ
ಭೀಕರತೆಯಲಿ ಕ್ರೂರವಾಗಿ
ಬಲಿಯಾಗಿ ಸಮಾಧಿಗೊಳ್ಳುವ
ಬಡಜೀವಗಳು.

ಭೂತಾಯ ದಾಹ
ಹಿಂಗಿಸದೆ ಕರುಳ ಬಗೆದು
ರಕ್ತ ಹೀರಿ ಕುಡಿವ ತವಕ.
ರಕ್ತ ಬೀಜಾಸುರವೀ
ಕೊಳವೆಬಾವಿಗಳಲದು
ಅರೆ ಬರೆ ಇರುವ ತನಕ.

ತಾಯೊಡಲಿಗೆ ಕೊರೆದು
ಕನ್ನ ಹಾಕಿದ ಮಹಾಶೂರ.
ಸತ್ತ ಅಂತರ್ಜಲ ಶಿಶುವಿಗೆ
ಮಾಡಿದ ಸಮಾಧಿ ಸುಂದರ.

ಔಷಧಿಯೆಂದು ಗಿಡಗಳಿಗೆ
ನಿಧಾನ ವಿಷ ನೀಡಿ ಸವರಿದ ರೈತನ.
ಗೊಬ್ಬರವೆಂದು ಅಬ್ಬರದ
ರಾಸಾಯನಿಕ ಕೊಟ್ಟು
ಸುಫಾರಿ ಸಾಂತ್ವನ !

ಚಿಂದಿ ಚಿಂದಿ ಹರಿದ ಬಟ್ಟೆ
ಕುರುಚಲುಗಳ ನಿವೇಶನ.
ಹಸಿರು ಸೀರೆ ಕಿತ್ತೊಗೆದು
ಅತ್ಯಾಚಾರದ ಸ್ಮಶಾನ!

ತಾಯ ಉಸಿರುಗಟ್ಟಿ
ಹಾಳಾಗುತ ಪರಿಸರ.
ವಿಷಾನಿಲ ಹೊಗೆಯಲಿ
ವಿನಾಶವು ಸರಸರ!

ನಮ್ಮ ಬೀಜ ಪರರ ಪಾಲು
ಜೈವಿಕದ ಮೋಸವು.
ಹಾಲಿನಲ್ಲೂ ಹಾಲಾಹಲವು
ರೋಗಗಳ ವಾಸವು.

ರಾಜಕೀಯ ಮೋಸದಾಟದಿ
ಬಲಿಪಶುವು ಬಡವನು.
ನಿತ್ಯ ಸುಲಿಗೆ ಶೂರರಲ್ಲಿ
ದೇವನಿವ ಅಮಾಯಕನು!

ಸಮಯ ಪೂರ ಜಾರದಿನ್ನೂ
ಕೊಂಚ ಉಳಿಸಲು
ಉಳಿದಿದೆ ಬಾಳುಗಳಿಗೆ ಗಳಿಗೆ.
ಕಳೆಯದೆ ಅದನು ನೀನು
ಬಳಸು ಮುಂಬರುವ ಗಳಿಗೆಗಳಿಗೆ.

**ಶಿವಪ್ರಸಾದ್ ಆರಾಧ್ಯ**
ಮಲ್ಲರಬಾಣವಾಡಿ, ನೆಲಮಂಗಲ




ಸಂದರ್ಶನಕಾರರು
**ಎಂ. ಸತ್ಯಾನಂದ**
**ಎಂ. ಸಿ. ಡೋಂಗ್ರೆ**

# ಕಾಂಗ್ರೆಸ್ - ಬಿಜೆಪಿ ಎರಡೂ ಪಕ್ಷಗಳು ಆರ್ಥಿಕ ಉದಾರವಾದಿ ನೀತಿಯ ಪರ – ಪ್ರಭಾತ್ ಪಟ್ನಾಯಕ್

ಕಾರ್ಲ್ ಮಾರ್ಕ್ಸ್‌ರವರ ಮೇರು ಕೃತಿ 'ಬಂಡವಾಳ' (Das Capital)ದ ಕನ್ನಡ ಅವತರಣಿಕೆಯ ಬಿಡುಗಡೆ ಸಮಾರಂಭವು ಬೆಂಗಳೂರಿನಲ್ಲಿ ದಿನಾಂಕ ೦೨.೦೮.೨೦೧೯ರಂದು ನಡೆಯಿತು. ಕನ್ನಡ ಅವತರಣಿಕೆಯನ್ನು ಬಿಡುಗಡೆ ಮಾಡಲು ರಾಷ್ಟ್ರದ ಪ್ರಖ್ಯಾತ ಎಡ ಚಿಂತಕರೂ, ಆರ್ಥಿಕ ತಜ್ಞರೂ ಆದ ಪ್ರೊ॥ ಪ್ರಭಾತ್ ಪಟ್ನಾಯಕ್ ಅವರು ಆಗಮಿಸಿದ್ದರು. ದೇಶದ ಆರ್ಥಿಕ ಸ್ಥಿತಿ–ಗತಿಯ ಕುರಿತು, ರಾಜಕೀಯದ ಕುರಿತು ಹಾಗೂ ಇನ್ನೂ ಅನೇಕ ವಿಚಾರಗಳ ಕುರಿತು ಅವರೊಂದಿಗೆ ಮುಕ್ತ ಸಂವಾದವನ್ನು ವೇದಿಕೆಯ ಪಕ್ಕದಲ್ಲೇ ನಡೆಸಲಾಯಿತು.

**ಹೊಸತು :** ಬ್ರಿಟನ್ನಿನ ಲೇಬರ್ ಮತ್ತು ಕನ್ಸರ್ವೇಟಿವ್ ಪಕ್ಷಗಳು, ಅಮೆರಿಕಾದ ಡೆಮೊಕ್ರಾಟ್ ಹಾಗೂ ರಿಪಬ್ಲಿಕನ್ ಪಕ್ಷಗಳು ಹಾಗೂ ಭಾರತದ ಕಾಂಗ್ರೆಸ್ ಮತ್ತು ಬಿಜೆಪಿಯಂತಹ ಮಧ್ಯಮ ಮಾರ್ಗದ (ಅಂದರೆ ಸೆಂಟ್ರಿಸ್ಟ್) ಮತ್ತು ಬಲಪಂಥೀಯ ಪಕ್ಷಗಳು ಎಲ್ಲೆಡೆ ನವ–ಉದಾರವಾದಿ ಆರ್ಥಿಕ ನೀತಿಗಳ ಕುರಿತು ಸಹಮತಕ್ಕೆ ಬಂದಿರುವುದನ್ನು ನೋಡಬಹುದು. ಆದರೂ ಅವುಗಳ ನಡುವೆ ಈಗ ಒಡಕು ಸ್ವರಗಳನ್ನೂ, ಭಿನ್ನ ಅಭಿಪ್ರಾಯಗಳನ್ನೂ ಕಾಣುತ್ತಿದ್ದೇವೆ. ಇವುಗಳ ಕುರಿತು ನಿಮ್ಮ ಅನಿಸಿಕೆಗಳು?

**ಪ್ರಭಾತ್ ಪಟ್ನಾಯಕ್ :** ಜಾಗತೀಕರಣದ ಪರಿಣಾಮವಾಗಿ ಎಡಚಳುವಳಿಯು ದುರ್ಬಲಗೊಂಡಿದ್ದರ ಹಿನ್ನೆಲೆಯಲ್ಲಿ ಸೆಂಟ್ರಿಸ್ಟ್ ಪಕ್ಷಗಳು ಹಾಗೂ ಬಲಪಂಥೀಯ ಪಕ್ಷಗಳು ನವ ಉದಾರವಾದೀ ನೀತಿಗಳ ಕುರಿತು ಸಹಮತಕ್ಕೆ ಬಂದಿರುವುದು ಒಂದು ವಿಶ್ವವ್ಯಾಪಿ ವಿದ್ಯಮಾನವಾಗಿದೆ. ಭಾರತದಲ್ಲೂ ಸಹ ಕಾಂಗ್ರೆಸ್ ಮತ್ತು ಬಿಜೆಪಿ ಪಕ್ಷಗಳು ನವ ಉದಾರವಾದಿ ಆರ್ಥಿಕ ನೀತಿಗಳ ಕುರಿತು ಏಕಾಭಿಪ್ರಾಯ ಹೊಂದಿವೆ. ಸಾರ್ವಜನಿಕ ಉದ್ದಿಮೆಗಳ ಖಾಸಗೀಕರಣವು ಸಂಘಟಿತ ಕಾರ್ಮಿಕ ವಲಯದಲ್ಲಿ ಕಾರ್ಮಿಕ ಚಳುವಳಿಯನ್ನು ಹಿನ್ನಡೆಗೆ ತಳ್ಳಿರುವುದು ಇದಕ್ಕೆ ಪ್ರಮುಖ ಕಾರಣವಾಗಿದೆ. ಭಾರತದಲ್ಲಿ ಎಡಚಳುವಳಿಯು ಬಹುತೇಕ ಕಾರ್ಮಿಕ ವರ್ಗದ ಮೇಲೆ ನಿಂತಿದ್ದು, ಸಂಘಟಿತ ಕಾರ್ಮಿಕ ವರ್ಗದ ಚಳುವಳಿಯಲ್ಲಿ ಆಗಿರುವ ಹಿನ್ನಡೆಯು ಎಡ ಚಳುವಳಿಯ ಹಿನ್ನಡೆಗೆ ಕಾರಣವಾಗಿದೆ.

ಆದರೆ, ನವ ಉದಾರವಾದೀ ಆರ್ಥಿಕ ನೀತಿಗಳ ಕುರಿತು ಸೆಂಟ್ರಿಸ್ಟ್ ಹಾಗೂ ಬಲಪಂಥೀಯ ಪಕ್ಷಗಳ ನಡುವೆ ಇದ್ದ ಸಹಮತ ಈಗ ಮುರಿದುಬಿದ್ದಿದೆ. ನವ ಉದಾರವಾದೀ ಆರ್ಥಿಕ ನೀತಿಯು ತನ್ನ ಕೊನೆಯನ್ನು ಅಥವಾ ಪರಾಕಾಷ್ಠೆಯನ್ನು ತಲುಪಿರುವುದೇ ಇದಕ್ಕೆ ಮುಖ್ಯ ಕಾರಣವಾಗಿರುತ್ತದೆ. ನವ ಉದಾರವಾದೀ ಆರ್ಥಿಕತೆಯು ಹಿನ್ನಡೆಗೆ ಒಳಗಾಗಿದ್ದು, ಅದು ಬದುಕುಳಿಯುವ ಸಾಧ್ಯತೆಯೇ ಇಲ್ಲದಂತಾಗಿದೆ. ಈ ಹಿನ್ನೆಲೆಯಲ್ಲಿ ತೀವ್ರವಾದ ಬಲಪಂಥೀಯತೆ ಹಾಗೂ ಫ್ಯಾಸಿಸ್ಟ್ ಶಕ್ತಿಗಳು ಮತ್ತು ಅವರ ಅಭಿಪ್ರಾಯಗಳು ಬಲಗೊಳ್ಳುತ್ತಿವೆ. ಕೆಲವೆಡೆ ಇದಕ್ಕೆ ಪ್ರತಿಕ್ರಿಯೆಯಾಗಿ ಎಡ ಚಿಂತನೆಗಳೂ ಸಹ ತಲೆಯೆತ್ತುತ್ತಿವೆ. (ಇದಕ್ಕೆ ಅಮೆರಿಕಾದಲ್ಲಿ ಬರ್ನಿ ಸ್ಯಾಂಡರ್ಸ್ ಉದಾಹರಣೆಯಾದರೆ, ಇಂಗ್ಲೆಂಡಿನಲ್ಲಿ ಜೆರೆಮಿ ಕಾರ್ಬಿನ್‌ನಂತಹ ಸೋಷಿಯಲ್ ಡೆಮೋಕ್ರಸಿ ಪಕ್ಷದವರು ಉದಾಹರಣೆಯಾಗುತ್ತಾರೆ).




**ಹೊಸತು** : ಭಾರತದ ಪ್ರಸಕ್ತ ಸನ್ನಿವೇಶದಲ್ಲಿ ಭಾರತದ ಎಡ ಪಕ್ಷಗಳಿಗೆ ಯಾವ ರೀತಿಯ ಅವಕಾಶಗಳಿವೆ?

**ಪ್ರಭಾತ್ ಪಟ್ನಾಯಕ್ :** ದೇಶದ ಎಡಪಕ್ಷಗಳು ಆಚರಣೆಯಲ್ಲಿ ಅಥವಾ ಅನುಷ್ಠಾನಗೊಳಿಸುವಲ್ಲಿ ತಪ್ಪಾಗಿರುವ ಮಾರ್ಗವನ್ನು ಅನುಸರಿಸುತ್ತಿವೆ. ದೇಶದಲ್ಲಿ ಬಲಪಂಥೀಯ ಪ್ರತಿಗಾಮಿ ಶಕ್ತಿಗಳು ಹಾಗೂ ಫ್ಯಾಸಿಸ್ಟ್ ಶಕ್ತಿಗಳು ಪ್ರಬಲವಾಗಿ ತಲೆಯೆತ್ತುತ್ತಿರುವ ಸಂದರ್ಭದಲ್ಲಿ ಎಡ ಪಕ್ಷಗಳು "ವ್ಯವಸ್ಥೆಯೊಳಗೇ ಸಣ್ಣ ಪ್ರಮಾಣದ ರಾಜಕೀಯ"ದಲ್ಲಿ ಮಗ್ನವಾಗಿವೆಯೇ ಹೊರತು ಕ್ರಾಂತಿಕಾರೀ ರಾಜಕೀಯದ ಕುರಿತು ಯೋಚಿಸುತ್ತಿಲ್ಲ. ಎಡ ಚಳುವಳಿಯು ಕ್ರಾಂತಿಕಾರೀ ರಾಜಕೀಯವನ್ನು ಕೈಗೆತ್ತಿಕೊಳ್ಳಬೇಕಾಗಿದೆ. ಈಗಿನ ವಾಸ್ತವಕ್ಕೆ ಕ್ರಾಂತಿಕಾರೀ ರಾಜಕೀಯವು ಅವಶ್ಯವಾಗಿದೆ. ನಾವು ಯಾವ ಕಾರ್ಯಾಚರಣೆಗಳನ್ನು ಕೈಗೆತ್ತಿಕೊಳ್ಳುವೆವೋ ಅವು ಕ್ರಾಂತಿಕಾರೀ ಭವಿಷ್ಯದ ಭಾಗವಾಗಿರಬೇಕು. ಕ್ರಾಂತಿಕಾರೀ ಕಾರ್ಯಕ್ರಮದ ಭಾಗವಾಗುವ ರೀತಿಯಲ್ಲಿ ತನ್ನ ಆರ್ಥಿಕ ಚಿಂತನೆಗಳನ್ನು ಎಡ ಚಳುವಳಿಯು ಸೃಷ್ಟಿಸಬೇಕೇ ಹೊರತು ಈಗಿನ ನವ ಉದಾರವಾದೀ ಚೌಕಟ್ಟಿನೊಳಗೆ ಹೊಂದಾಣಿಕೆಯಾಗುವ ಚಿಂತನೆ ಅಥವಾ ಕಾರ್ಯಕ್ರಮಗಳನ್ನು ಕೈಬಿಡಬೇಕು. ಬೂರ್ಷ್ವಾ ರಾಜಕೀಯದ ರೂಪ ಮತ್ತು ಪರಿಭಾಷೆಗಳಿಗೆ ಪರ್ಯಾಯವಾದ ಅಭ್ಯಾಸಗಳನ್ನು, ಎಂದರೆ ಕೈಗಾರಿಕೆಗಳಲ್ಲಿ ಸಹಕಾರಿ ಪದ್ಧತಿ, ಕೃಷಿ ಕ್ಷೇತ್ರದಲ್ಲಿ ರೈತ ಸಹಕಾರಿ ಭಾಗಿತ್ವ ಪದ್ಧತಿಗಳನ್ನು ತರಬೇಕಾಗಿದೆ. ಖಾಸಗಿ ಬಂಡವಾಳವು ಕೈಗಾರಿಕೀಕರಣದಲ್ಲಿ ಪಾಲ್ಗೊಳ್ಳುವುದರ ಕುರಿತು ಎಡ ಚಳುವಳಿಯು ಭರವಸೆಯನ್ನಿಡುವಂತಿಲ್ಲ. ಈ ಮಾತಿಗೆ ಎಡ ಸರ್ಕಾರವು ಟಾಟಾರವರನ್ನು ಪಶ್ಚಿಮ ಬಂಗಾಳಕ್ಕೆ ಆಹ್ವಾನಿಸಿದಾಗ ಘಟಿಸಿದ ವಿದ್ಯಮಾನಗಳೇ ಸಾಕ್ಷಿ. ಕೈಗಾರಿಕೀಕರಣದಲ್ಲಿ ಖಾಸಗೀ ಬಂಡವಾಳವನ್ನು ನಾನು ವಿರೋಧಿಸುತ್ತಿಲ್ಲ, ಆದರೆ ಎಡ ಸರ್ಕಾರವೊಂದು ರೈತರ ಹಿತಾಸಕ್ತಿಗಳನ್ನು ಬಲಿಕೊಟ್ಟು ಖಾಸಗೀ ಬಂಡವಾಳಕ್ಕೆ ರಿಯಾಯಿತಿ ನೀಡುವುದು ಸರಿಯಾದ ಕ್ರಮವಲ್ಲ. ಜಮೀನಿನ ಸ್ವಾಧೀಕರಣವು ಸಮಸ್ಯೆಯನ್ನು ತಂದೊಡ್ಡಿದ್ದರೆ ಆಗ ರೈತರ ಸಹಕಾರಿ ಭಾಗಿತ್ವವನ್ನು ರಚಿಸಿ ಅವುಗಳ ಮೂಲಕ ಖಾಸಗೀ ಬಂಡವಾಳಕ್ಕೆ ಪೈಪೋಟಿಯಾಗಿ ನಿಲ್ಲಿಸುವುದರ ಕುರಿತು ಯೋಚಿಸಬೇಕು.

**ಹೊಸತು :** ಕೈಗಾರಿಕೀಕರಣ ಹಾಗೂ ಸಹಕಾರಿ ಭಾಗಿತ್ವದ ಕುರಿತು ಹೇಳುವುದಾದರೆ ಗುಜರಾತ್ ಸರ್ಕಾರವು ಟಾಟಾ ಕಂಪೆನಿಯು ಹೊರತಂದ ಪ್ರತಿಯೊಂದು ನಾನೋ ಕಾರಿನ ಮೇಲೆ ಮೂರನೇ ಒಂದು ಭಾಗದಷ್ಟು ಸಬ್ಸಿಡಿಯನ್ನು ನೀಡಿದೆಯೆಂದು ವರದಿಯಾಗಿದ್ದು, ಈ ಹಿನ್ನೆಲೆಯಲ್ಲಿ, ಈ ಸಬ್ಸಿಡಿಯ ಬದಲಿಗೆ ಎಡ ಪಕ್ಷಗಳು ಮತ್ತೊಮ್ಮೆ "ಕೈಗಾರಿಕೆಗಳ ರಾಷ್ಟ್ರೀಕರಣ"ದ ಕುರಿತು ಒತ್ತಾಯ ಮಾಡಬೇಕೆಂದು ಅನಿಸುವುದಿಲ್ಲವೇ?

**ಪ್ರಭಾತ್ ಪಟ್ನಾಯಕ್ :** ಸಾರ್ವಜನಿಕ ವಲಯದಲ್ಲಿರುವ ಕೈಗಾರಿಕೆಗಳಿಗೂ ರೈತರ ಜಮೀನು ಬೇಕಾಗುತ್ತದೆ. ರೈತರಿಂದ ಭೂ-ಸ್ವಾಧೀನ ಮಾಡುವ ಸಮಯದಲ್ಲಿ ಅವರುಗಳಿಗೆ ಪರಿಹಾರ ಮೊತ್ತದ ಜೊತೆಯಲ್ಲೇ ಆ ಉದ್ದಿಮೆಗಳ ಷೇರುಗಳನ್ನೂ ರೈತರಿಗೆ ನೀಡಬೇಕೆಂದು ನಾನು ಸೂಚಿಸಿದ್ದೆ. ಉದ್ದಿಮೆಯೊಂದರಲ್ಲಿ ಒಂದು ಸಹಕಾರಿ ಭಾಗಿತ್ವವು ಸ್ಥಾಪನೆಯಾದಲ್ಲಿ ಆ ಉದ್ದಿಮೆಗೆ ಆ ಸಹಕಾರಿ ಭಾಗಿತ್ವವೇ ಒಡೆಯನಾಗಿರಬೇಕು. ಅಥವಾ ಟಾಟಾ ಹಾಗೂ ರೈತರ ಸಹಕಾರಿ ಭಾಗಿತ್ವದಲ್ಲಿ ಜಂಟಿ ಉದ್ದಿಮೆಯನ್ನು ನಡೆಸಲು ಆಲೋಚಿಸಬೇಕು. ಈ ನಿಟ್ಟಿನಲ್ಲಿ ಅನೇಕ ನಮೂನೆಯ ಸಾಧ್ಯತೆಗಳು, ಮಾರ್ಗಗಳು ಇದ್ದಾಗ್ಯೂ ಕೂಡ ನಾವು ಕೇವಲ ಬಹುರಾಷ್ಟ್ರೀಯ ಕಂಪನಿಗಳು ಮಾತ್ರ ಕೈಗಾರಿಕೆಗಳನ್ನು ನಡೆಸಲು ಸಾಧ್ಯ ಎನ್ನುವ ಚಿಂತನೆಯ ಮಟ್ಟದಲ್ಲೇ ನಿಂತಿದ್ದೇವೆ. ಹೀಗಾಗಿ ಈ ಬಹುರಾಷ್ಟ್ರೀಯ ಕಂಪೆನಿಗಳನ್ನು ತೃಪ್ತಿಪಡಿಸಲು ಅನೇಕ ರೀತಿಯ ಸೌಲಭ್ಯಗಳನ್ನು ಅವುಗಳಿಗೆ ಕಲ್ಪಿಸಲಾಗುತ್ತಿದ್ದು, ಇದನ್ನು ನಾನು ವಿರೋಧಿಸುತ್ತೇನೆ.

**ಹೊಸತು :** ಎಡ ಚಳುವಳಿಯು "ಸಣ್ಣ ಬದಲಾವಣೆಗಳನ್ನು ತರಬಲ್ಲ

## ಯು. ಎಸ್. ವೆಂಕಟರಾಮನ್ ಪುರಸ್ಕಾರ

ಕಾರ್ಮಿಕ ನಾಯಕರೂ ಚಿತ್ರಕಲಾವಿದರೂ ಆಗಿದ್ದ, ವೈವಿಧ್ಯಮಯ ವ್ಯಕ್ತಿತ್ವದ ದಿ। ಕಾಮ್ರೇಡ್ ಯು. ಎಸ್. ವೆಂಕಟರಾಮನ್ ಅವರ ಹೆಸರಿನಲ್ಲಿ, ಅವರ ಕುಟುಂಬದ ಸದಸ್ಯರು 'ಹೊಸತು' ಪತ್ರಿಕೆಯಲ್ಲಿ ಪ್ರಕಟವಾಗುವ ಕಾರ್ಮಿಕ ವರ್ಗದ ಕುರಿತು ಒಳ್ಳೆಯ ಲೇಖನ ಮತ್ತು ಉತ್ತಮ ಕಲಾಕೃತಿಗಳಿಗೆ ತಲಾ ರೂ. ೫,೦೦೦/-ಗಳ ಬಹುಮಾನವನ್ನು ಕೊಡಬಯಸಿದ್ದಾರೆ. ಈ ಸಂಬಂಧ ೨೦೧೮-೧೯ರ ಸಾಲಿನ ಬಹುಮಾನಗಳನ್ನು ಶ್ರೀ ರವಿ ಎಂ. ಸಿದ್ಲಿಪುರ ಅವರ ಲೇಖನ **ಸಫಾಯಿ ಕರ್ಮಚಾರಿಗಳಿಗೆ ಪಾದಪೂಜೆ ಸಾಕೆ** ? (ಪ್ರಕಟಣೆ : ಮೇ ೨೦೧೯), ಹಾಗೂ ಉತ್ತಮ ಕಲಾಕೃತಿಗಳಿಗೆ ಕೊಡುವ ಬಹುಮಾನವನ್ನು ಶ್ರೀ ಎಲ್. ಶಿವಲಿಂಗಪ್ಪ (ಪ್ರ : ಆಗಸ್ಟ್ ೨೦೧೮) ಅವರಿಗೆ ನೀಡಲಾಗಿದೆ.

-ಸಂಪಾದಕ

ರಾಜಕೀಯ"ದಿಂದ ಹೊರಬರಬೇಕೆಂದು ನೀವು ಈಗಾಗಲೇ ಹೇಳಿರುತ್ತೀರಿ. ಇದನ್ನು ಸ್ವಲ್ಪ ವಿವರಿಸಬೇಕು.

**ಪ್ರಭಾತ್ ಪಟ್ನಾಯಕ್ :** ನಮ್ಮ ದೇಶದ ಎಡ ಚಳುವಳಿಯಲ್ಲಿ ಮನೆಮಾಡಿಕೊಂಡಿರುವ ಬಹಳ ಪ್ರಭಾವಶಾಲಿ ಚಿಂತನೆಯೆಂದರೆ "ಕ್ರಾಂತಿಕಾರೀ ಸನ್ನಿವೇಶವು ಪಕ್ವವಾಗಿಲ್ಲ ಹೀಗಾಗಿ ನಾವು ಏನೂ ಮಾಡಲಾರೆವು". ಕೆಲವು ರಾಜ್ಯಗಳಲ್ಲಿ ಎಡ ಚಳುವಳಿಯ ಪ್ರಭುತ್ವದ ರೀತಿ–ನೀತಿಗಳ ಮೇಲೆ ಪ್ರಭಾವ ಬೀರಿ ಬದಲಾವಣೆಗಳನ್ನು ತರುವಷ್ಟು ಬಲಶಾಲಿಗಳಾಗಿದ್ದಾಗಲೂ ಜನರ ಜೀವನಾವಶ್ಯಕ ಅಗತ್ಯತೆಗಳ ಕುರಿತು, ಆದ್ಯತೆಗಳ ಕುರಿತು ಕೇಂದ್ರೀಕರಿಸಿ ಕಾರ್ಯಕ್ರಮಗಳನ್ನು ನಡೆಸುತ್ತಿಲ್ಲ. ಉದಾಹರಣೆಗೆ, ಜನರ ಆರೋಗ್ಯ ಹಾಗೂ ತತ್ಸಂಬಂಧೀ ಸೌಕರ್ಯಗಳನ್ನು ಪೂರೈಸುವತ್ತ ಕೇರಳದ ಎಡ ಸರ್ಕಾರವು ಉತ್ತಮ ಕ್ರಮಗಳನ್ನು ಕೈಗೊಂಡಿದೆ ಆದರೆ ಪಶ್ಚಿಮ ಬಂಗಾಳದಲ್ಲಿ ಇಂಥವುಗಳ ಸುಳಿವೇ ಇಲ್ಲ !! ಈ ರೀತಿಯ ವಿಚಾರಗಳ ಕುರಿತು ಎಡ ಚಳುವಳಿಯು ಯೋಚಿಸಬೇಕು, ತನ್ನ ಗಮನವನ್ನು ಕೇಂದ್ರೀಕರಿಸಬೇಕು, ಸತತವಾಗಿ ಬೆಂಬಲಿಸುತ್ತ ಹೋರಾಟಗಳನ್ನು ರೂಪಿಸಬೇಕು. ಸೂಕ್ತ ನೀತಿಗಳನ್ನು ರೂಪಿಸಿ ಅವುಗಳನ್ನು ಕಾರ್ಯಾನುಷ್ಠಾನಗೊಳಿಸುವತ್ತ ಗಮನ ನೀಡಬೇಕು. ಪ್ರಭುತ್ವದ ಮೇಲೆ ಈ ಒತ್ತಡಗಳು ಹೇಗಿರಬೇಕೆಂದರೆ ಯಾವುದೇ ಸರ್ಕಾರವು ಈ ಬೇಡಿಕೆಗಳನ್ನು ಪೂರೈಸುವಷ್ಟರ ಮಟ್ಟಿಗೆ ಪ್ರಬಲ ಒತ್ತಾಯ ಹೇರಬೇಕು. ಕ್ರಾಂತಿಕಾರೀ ಸನ್ನಿವೇಶಗಳು ತಾವಾಗಿಯೇ ನಮ್ಮ ಮಡಿಲಿಗೆ ಬರುವುದಿಲ್ಲ, ನಾವು ಅವುಗಳನ್ನು ಸೃಷ್ಟಿಸಬೇಕು.

**ಹೊಸತು :** ನಿಮ್ಮ ಭಾಷಣದಲ್ಲಿ ನೀವು "ಬಂಡವಾಳವೆಂಬುದು ಒಂದು ಸ್ವಯಂಚಾಲಿತ ವ್ಯವಸ್ಥೆ" ಎಂದು ಹೇಳಿರುತ್ತೀರಿ. ಇದನ್ನು ಸ್ವಲ್ಪ ವಿವರಿಸುತ್ತೀರಾ?

**ಪ್ರಭಾತ್ ಪಟ್ನಾಯಕ್ :** ಬಂಡವಾಳದ ತಾರ್ಕಿಕತೆಯನ್ನು, ಬಂಡವಾಳಶಾಹೀ ವ್ಯವಸ್ಥೆಯನ್ನು, ಮುನ್ನಡೆಸಲು ಜನ ಪ್ರತಿನಿಧಿಗಳು ಬೇಕು. ಈ ಜನಪ್ರತಿನಿಧಿಗಳು ಯಾರೆಂದರೆ ಅವನೊಬ್ಬ ಬಂಡವಾಳಶಾಹಿಯೂ ಆಗಿರಬಹುದು, ಒಬ್ಬ ಕಾರ್ಮಿಕನೂ ಆಗಿರಬಹುದು. ಬಂಡವಾಳಶಾಹಿ ವ್ಯವಸ್ಥೆಯು ತನ್ನೊಳಗಿರುವ ವ್ಯಕ್ತಿಯು ಆರ್ಥಿಕವಾಗಿ ನಿರ್ಧಾರಿತ ಪಾತ್ರವನ್ನು ಅವನು ನಡೆಸಲು ಒತ್ತಾಯಿಸುತ್ತದೆ. ಅವನು ಆ ಪಾತ್ರವನ್ನು ನಿರ್ವಹಿಸಲು ಅಸಮರ್ಥನಾದಲ್ಲಿ ವ್ಯವಸ್ಥೆಯು ಅವನನ್ನು ವ್ಯವಸ್ಥೆಯಿಂದ ಆಚೆಗೆ ತಳ್ಳುತ್ತದೆ. ಉದಾಹರಣೆಗೆ ಹೇಳುವುದಾದರೆ, "ಒಬ್ಬ ಬಂಡವಾಳಗಾರನು ತನ್ನ ಅಗತ್ಯತೆಗಳನ್ನು ಮೀರಿ ಬಂಡವಾಳವನ್ನು ಯಾಕೆ ಸಂಗ್ರಹಿಸುತ್ತಾನೆ?" ಬಂಡವಾಳಗಾರನೊಬ್ಬನು ಸಂಗ್ರಹಣೆ ಮಾಡುವುದನ್ನು ನಿಲ್ಲಿಸಿದಾಕ್ಷಣ ಬಂಡವಾಳಶಾಹಿ ವ್ಯವಸ್ಥೆಯಲ್ಲಿರುವ ಪೈಪೋಟಿ ಆತನನ್ನು ಆಚೆಗೆ ತಳ್ಳುತ್ತದೆ. ಈ ಪ್ರಕ್ರಿಯೆ ಆ ಬಂಡವಾಳಗಾರನ ಇಷ್ಟಾನಿಷ್ಟವನ್ನು ಮೀರಿರುವ ಪ್ರಕ್ರಿಯೆಯಾಗಿರುತ್ತದೆ. ಬಂಡವಾಳಶಾಹಿ ವ್ಯವಸ್ಥೆಯಲ್ಲಿರುವವರು ತಮ್ಮ ಸಾಮರ್ಥ್ಯದಿಂದ ಅಥವಾ ಸ್ವತಂತ್ರ ಮನೋನಿರ್ಧಾರದಿಂದ ಈ ವ್ಯವಸ್ಥೆಯನ್ನು ರೂಪಿಸಲಾರರು. ಬಂಡವಾಳಶಾಹಿ ವ್ಯವಸ್ಥೆಯಲ್ಲಿರುವ "ಸ್ವಯಂಚಾಲಿತ ಶಕ್ತಿಗಳೂ" ಅಲ್ಲಿರುವ ಮಾನವರ ಪಾತ್ರಗಳನ್ನು ನಿರ್ಧರಿಸುತ್ತವೆ. ಮಾರ್ಕ್ಸ್‌ನ ಮಾತುಗಳಲ್ಲಿ ಹೇಳುವುದಾದರೆ, ಅದು "ಬಂಡವಾಳಗಾರನೊಬ್ಬ ಮನುಷ್ಯರೂಪದಲ್ಲಿರುವ ಬಂಡವಾಳ." ಮಾರ್ಕ್ಸ್ ಹಾಗೂ ಇತರೆ ಸಾಂಪ್ರದಾಯಿಕ ಆರ್ಥಿಕ ತಜ್ಞರಿಗೂ ವ್ಯತ್ಯಾಸವಿರುವುದೇ ಇಲ್ಲಿ. ಆ್ಯಡಂ ಸ್ಮಿತ್‌ನ ಪ್ರಕಾರ "ವಸ್ತುಗಳನ್ನು ವಿನಿಮಯ ಮಾಡುವ ಸ್ವಭಾವ ಮಾನವರಲ್ಲಿ ಇರುವುದರಿಂದ ಅವರು ಪರಸ್ಪರ ವಸ್ತುಗಳನ್ನು ವಿನಿಮಯ ಮಾಡಿಕೊಳ್ಳುತ್ತಾರೆ." ಉದಾರವಾದೀ ಸಿದ್ಧಾಂತದ ಪ್ರಕಾರ "ಮಾನವನಲ್ಲಿ ವಸ್ತುಗಳನ್ನು ವಿನಿಮಯ ಮಾಡಿಕೊಳ್ಳುವ ಬಯಕೆಯಿರುವುದರಿಂದ ಅವರು ಒಂದೆಡೆ ಸೇರುತ್ತಾರೆ ಹಾಗೂ ತನ್ಮೂಲಕ ಸಮಾಜದ ಸಂಪತ್ತನ್ನು ಹೆಚ್ಚಿಸುತ್ತಾರೆ" ಉದಾರವಾದಿ ಸಿದ್ಧಾಂತದ ಪ್ರಕಾರ ಮಾನವರಲ್ಲಿ ಈ ಕುರಿತು "ಸ್ವತಂತ್ರ ನಿರ್ಧಾರದ ಶಕ್ತಿ" ಇರುವುದರಿಂದ ಇದು ಸಾಧ್ಯ. ಆದರೆ ಮಾರ್ಕ್ಸ್ ಇವರೆಲ್ಲರಿಗಿಂತ ವಿಭಿನ್ನವಾಗಿ ಅರ್ಥೈಸುತ್ತಾನೆ. ಮಾರ್ಕ್ಸ್ ಪ್ರಕಾರ, "ವಸ್ತುಗಳ ಉತ್ಪಾದನೆಯು ವಸ್ತುಗಳ ವಿನಿಮಯವನ್ನು ಒತ್ತಾಯಿಸುತ್ತದೆ!!" ಮಾರ್ಕ್ಸ್‌ವಾದಿ ಸಿದ್ಧಾಂತದ ಪ್ರಕಾರ ಬಂಡವಾಳಶಾಹಿ ವ್ಯವಸ್ಥೆಯು ಮುನ್ನಡೆಯಲು ಅದರೊಳಗೇ ಅಡಕವಾಗಿರುವ ನಿಯಮಗಳೇ ಕಾರಣ ಹಾಗೂ ಇದು ಒಂದು ಸ್ವಯಂಚಾಲಿತ ವ್ಯವಸ್ಥೆಯಾಗಿದ್ದು ಮಾನವ ಇಷ್ಟಾನಿಷ್ಟಗಳ ಮೇಲೆ ಅವಲಂಬಿತವಾಗಿಲ್ಲ.

ಉದಾರವಾದಿ ಸಿದ್ಧಾಂತಕ್ಕೆ ಜಾನ್ ಲಾಕ್ ಹೇಳಿರುವ "ಸಾಮಾಜಿಕ ಒಪ್ಪಂದ ಮೂಲವಾಗಿದೆ. ಇಂಗ್ಲೆಂಡಿನಲ್ಲಿ ಘಟಿಸಿರುವ "Enclosure Movement" ('Enclosure movement' ಎಂದರೆ ೧೬ನೇ ಶತಮಾನದಲ್ಲಿ ಇಂಗ್ಲೆಂಡಿನಲ್ಲಿ ವ್ಯಾಪಕವಾಗಿ ಜಮೀನುಗಳ ಒತ್ತುವರಿ ನಡೆಯುತ್ತದೆ ಹಾಗೂ ಇದರ ಪರಿಣಾಮವಾಗಿ ಶ್ರೀಮಂತ ಮನೆತನಗಳು ಅಸ್ತಿತ್ವಕ್ಕೆ ಬರುತ್ತವೆ.) ಉದಾರವಾದಿ ಆರ್ಥಿಕತೆಯ ಪ್ರತಿಪಾದಕರ ಪ್ರಕಾರ ಅದೊಂದು "ಸ್ವಯಂ ಪ್ರೇರಣೆಯಿಂದಾದ ಚಳುವಳಿ. ಆದರೆ ಮಾರ್ಕ್ಸ್‌ನ ಪ್ರಕಾರ ಇದು "ಬಂಡವಾಳದ ಪ್ರಪ್ರಥಮ ಸಂಗ್ರಹಣೆ"ಗೆ ಉದಾಹರಣೆಯಾಗಿದೆ. ಉದಾರವಾದೀ ಆರ್ಥಿಕತೆಯ ಪ್ರತಿಪಾದಕರ ಪ್ರಕಾರ ಆರ್ಥಿಕ ವ್ಯವಸ್ಥೆಯೆಂಬುದು ಒಂದು "ಸ್ವಯಂಪ್ರೇರಣೆಯಿಂದಾಗುವ ಕಾರ್ಯ." ಆದರೆ ಮಾರ್ಕ್ಸ್‌ನ ಪ್ರಕಾರ ಆರ್ಥಿಕ ವ್ಯವಸ್ಥೆಯು ಐತಿಹಾಸಿಕ ಒತ್ತಡಗಳಿಂದ ಅಸ್ತಿತ್ವಕ್ಕೆ ಬರುತ್ತದೆ ಹಾಗೂ ತನ್ನದೇ ಆದ ಅಂತರ್ಗತ ನಿಯಮಗಳ ಅನುಸಾರವಾಗಿ ಮುಂದುವರಿಯುತ್ತದೆ.

**ಹೊಸತು :** ಭಾರತದಲ್ಲಿ ಆರ್ಥಿಕ ಸ್ಥಿತಿಯು ಒತ್ತಡಕ್ಕೆ ಸಿಲುಕಿದೆ, ಕೈಗಾರಿಕೆಯಲ್ಲಿ ಕಣ್ಣಿಗೆ ಕಾಣುವ ಹಾಗೆ ಕುಸಿತ ಉಂಟಾಗಿದೆ. ಬಂಡವಾಳಶಾಹಿ ವ್ಯವಸ್ಥೆಯ ಒಳಗಡೆಯಲ್ಲೇ ಎಡ ಚಳುವಳಿಯು ಇದಕ್ಕೆ ಹೇಗೆ ಸ್ಪಂದಿಸಬೇಕು?

**ಪ್ರಭಾತ್ ಪಟ್ನಾಯಕ್ :** ಫ್ಯಾಸಿಸಂನ ಬೆಳವಣಿಗೆಗೆ ಇವೆಲ್ಲ ಹೇಳಿಮಾಡಿಸಿದ ಅಂಶಗಳಾಗಿವೆ. ಬಿಜೆಪಿ ಪಕ್ಷವೆಂಬುದು ಭಾರತದ "ಕಾರ್ಪೋರೇಟ್ ಆಳ್ವಿಕೆ" ಆಯ್ಕೆಯಾಗಿದೆ ಎಂಬುದನ್ನು ನಾವು ಮರೆಯಬಾರದು. ೨೦೧೯ರ ಲೋಕಸಭಾ ಚುನಾವಣೆಯಲ್ಲಿ ಬಿಜೆಪಿಯು ಸರಿಸುಮಾರು ೨೭೦೦೦ ಕೋಟಿಯಷ್ಟು ಹಣವನ್ನು ಖರ್ಚು ಮಾಡಿದೆ. ಅಂದರೆ ಪ್ರತೀ ಲೋಕಸಭಾ ಕ್ಷೇತ್ರಕ್ಕೆ ಸರಿಸುಮಾರು ೫೦ ಕೋಟಿ ರೂಪಾಯಿಗಳನ್ನು ವ್ಯಯಿಸಿದೆ. ದೇಶದಲ್ಲಿ ಬಡತನ ಹಾಗೂ ನಿರುದ್ಯೋಗವಿರುವುದರಿಂದ ಈ ರೀತಿಯಲ್ಲಿ ದುಡ್ಡನ್ನು ಖರ್ಚುಮಾಡಲಾಗಿದೆ. ದೇಶದ ಬಂಡವಾಳವು ತನ್ನ ಗುಂಪನ್ನು ಪುನರ್ವಿಂಗಡಿಸಿಕೊಂಡಿದೆ. ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ ಜೆ. ಆರ್. ಡಿ. ಟಾಟಾ ಕೋಮುವಾದ ವಿರುದ್ಧದ ಒಂದು ರ್‍ಯಾಲಿಯಲ್ಲಿ ಮುಂಬೈನಲ್ಲಿ ಭಾಗವಹಿಸಿದ್ದರೆ ಈಗಿನ ರತನ್ ಟಾಟಾರವರು ನಾಗಪುರಕ್ಕೆ ಹೋಗಿ ಆರ್.ಎಸ್.ಎಸ್.ನ ನಾಯಕರನ್ನು ಭೇಟಿಮಾಡಿರುತ್ತಾರೆ !! ಕಾರಣ ಸ್ಪಷ್ಟ, ಕಾರ್ಪೋರೇಟ್ ಬಂಡವಾಳ ಹಾಗೂ ಹಿಂದುತ್ವದ ನಡುವಿನ ಮೈತ್ರಿಯು ಇಬ್ಬರಿಗೂ ಹಿತವಾದದ್ದಾಗಿರುತ್ತದೆ. ಈಗ ದೇಶದಲ್ಲಿ ಜನಸಾಮಾನ್ಯರ ದಿನನಿತ್ಯದ ಸಮಸ್ಯೆಗಳ ಬದಲಿಗೆ, ಜೀವನೋಪಾಯದ ಪ್ರಶ್ನೆಗಳ ಬದಲಿಗೆ, ಅಂದರೆ ನಿರುದ್ಯೋಗ, ಕೃಷಿಯಲ್ಲಿ ಬಿಕ್ಕಟ್ಟುಗಳ ಬದಲಿಗೆ ಧರ್ಮ ಮತ್ತು ರಾಷ್ಟ್ರೀಯತೆಯ ವಿಷಯಗಳು ಪ್ರಾಮುಖ್ಯತೆಯನ್ನು ಪಡೆದಿವೆ. ಕಾರ್ಪೋರೇಟ್ ವಲಯವು ತನ್ನನ್ನು ಭದ್ರಪಡಿಸಿಕೊಳ್ಳಲು ಹಿಂದುತ್ವವನ್ನು ಬಯಸುತ್ತಿದೆ. ಬಂಡವಾಳಶಾಹಿಯಲ್ಲಿ ಬಿಕ್ಕಟ್ಟು ತಲೆದೋರಿದಾಗ ಫ್ಯಾಸಿಸಂ ತಲೆಯೆತ್ತುತ್ತದೆ. ಇದಕ್ಕೆ ಕಾರ್ಪೋರೇಟ್ ವಲಯವು ಸಹಾಯ ನೀಡುತ್ತದೆ.

ಈ ಬೆಳವಣಿಗೆಗಳು ಎಡ ಚಿಂತನೆಯ, ಎಡ ಶಕ್ತಿಗಳ ಬೆಳವಣಿಗೆಗೂ

---

ಶ್ರೀಮತಿ ಪಾರ್ವತಿ ಯು. ಎಸ್. ಅವರು ತಮ್ಮ ತಾಯಿ ದಿ| ಯು. ಎಸ್. ಸಾಕಮ್ಮನವರ ಜ್ಞಾಪಕಾರ್ಥ 'ಹೊಸತು'ವಿನಲ್ಲಿ ಪ್ರಕಟವಾಗುವ ಮಹಿಳೆಯರ ಕುರಿತ ಕತೆ / ಲೇಖನಗಳಿಗೆ ತಲಾ ರೂ. ೫,೦೦೦/– ಬಹುಮಾನ ನೀಡುತ್ತಿದ್ದಾರೆ. ಅದರಂತೆ ೨೦೧೮–೧೯ರ ಸಾಲಿನಲ್ಲಿ (೧) ಡಾ|| ಕಾವ್ಯಶ್ರೀ ಹೆಚ್. ಅವರ ಲೇಖನ **ಚಿಮಮಾಂಡಳ ಫೆಮಿನಿಸ್ಟ್ ಮ್ಯಾನಿಫೆಸ್ಟೋ : ಹದಿನೈದು ಸಲಹೆಗಳು** (ಪ್ರ : ಮಾರ್ಚ್ ೨೦೧೯), (೨) ಶ್ರೀಮತಿ ಹಮೀದಬಾನೂ ಅ. ಅಥಣಿ ಅವರ ಲೇಖನ **ವಿಜಯಪುರ ಜಿಲ್ಲೆಯ ಹಣ್ಣು ಮತ್ತು ತರಕಾರಿ ಮಾರಾಟ ಮಾಡುತ್ತಿರುವ ಮುಸ್ಲಿಂ ಮಹಿಳೆಯರ ಸ್ಥಿತಿಗತಿ** (ಪ್ರ : ಆಗಸ್ಟ್ ೨೦೧೮) – ಇವು ಈ ಬಹುಮಾನಕ್ಕೆ ಆಯ್ಕೆಯಾಗಿವೆ. ಈ ಲೇಖಕಿಯರಿಗೆ ಅಭಿನಂದನೆಗಳು.

–ಸಂಪಾದಕ

ಸಹಾಯಕಾರಿಯಾಗಿ ಪರಿಣಮಿಸುತ್ತವೆ. ನಾಸಿಕ್‌ನಿಂದ ಮುಂಬೈವರೆಗಿನ ರೈತರ ಕಾಲ್ನಡಿಗೆ ಜಾಥಾ ಇದಕ್ಕೆ ಉದಾಹರಣೆಯಾಗಿದೆ. ಜನರ ಈ ರೀತಿಯ ಹೋರಾಟಗಳು ಆಳುವ ವರ್ಗದಲ್ಲಿ ಭೀತಿಯನ್ನುಂಟುಮಾಡುತ್ತವೆ. ನನ್ನ ಪ್ರಕಾರ ಫ್ಯಾಸಿಸಂಅನ್ನು ಮಣಿಸಲು ಎಡಪಕ್ಷಗಳಿಗೆ ಈ ರೀತಿಯ ಹೋರಾಟಗಳ ಮಾರ್ಗವೊಂದೇ ಪರಿಹಾರ.

**ಹೊಸತು :** ಆರ್ಥಿಕ ಸ್ಥಿತಿಯ ನೈಜತೆಗೂ, ಈಗಿನ ರಾಜಕೀಯ ಚುನಾವಣಾ ಫಲಿತಾಂಶಕ್ಕೂ ಸಂಬಂಧವೇ ಇಲ್ಲದಂತೆ ತೋರುತ್ತದೆ. ನಿಮ್ಮ ಅಭಿಪ್ರಾಯವೇನು?

**ಪ್ರಭಾತ್ ಪಟ್ನಾಯಕ್ :** ದೇಶದಲ್ಲಿ ಬಿಗಡಾಯಿಸಿದ ಆರ್ಥಿಕ ಪರಿಸ್ಥಿತಿಯು ರೈತ ಸಮುದಾಯದಲ್ಲಿ ಅಸಮಾಧಾನವನ್ನು ಹುಟ್ಟುಹಾಕಿತ್ತು. ಇದರಿಂದಾಗಿ ಸರ್ಕಾರದ ವಿರುದ್ಧ ಪ್ರಬಲ ವಿರೋಧವೂ ಎದ್ದಿತ್ತು. ಆದರೆ "ಪುಲ್ವಾಮಾ ಘಟನೆ"ಯು ಇಡೀ ಚಿತ್ರಣವನ್ನು ಬದಲಾಯಿಸಿತು. "ದೇಶವು ಅಪಾಯದಲ್ಲಿದೆ" ಎಂಬ ಭಾವನೆಯು ಹಿಂದುತ್ವವಾದೀ ಪರಿಭಾಷೆಗೆ ದಾರಿ ಮಾಡಿತು. ಪುಲ್ವಾಮಾದಂತಹ ಘಟನೆ ನಡೆಯುವುದರ ಬಗ್ಗೆ ಸೂಚನೆಗಳು ಸರ್ಕಾರಕ್ಕೆ ಇತ್ತು. ಅದನ್ನು ತಡೆಯಬಹುದಾಗಿತ್ತೂ ಕೂಡ. ೨೦೦೮ರ ಮುಂಬೈ ದಾಳಿಯನ್ನೂ ಹಾಗೇ ತಡೆಯಬಹುದಾಗಿತ್ತು. ವಿಷಮ ಆರ್ಥಿಕತೆಯನ್ನು ರಾಷ್ಟ್ರವಾದೀ ಭಾವನೆಗಳು ನುಂಗಿಕೊಂಡಿದ್ದರ ಪರಿಣಾಮವಾಗಿ ಅದೇ ರೈತರು ಮೋದಿ ಸರ್ಕಾರಕ್ಕೆ ಮತ ಹಾಕಿದರು. ದೇಶವು ಅಪಾಯದಲ್ಲಿದೆ ಎಂಬ ಕಲ್ಪನೆಯು ಜನಮಾನಸದಲ್ಲಿ ಪ್ರಬಲವಾದ ಕಾರಣ ಬಲಪಂಥೀಯ ಪಕ್ಷಗಳು ಅದರ ಉಪಯೋಗ ಪಡೆಯುವಂತಾಯಿತು. ಈ ರೀತಿಯ ನಿರೂಪಣೆಗಳನ್ನು ಬದಲಿಸಬೇಕಾಗಿದೆ.

**ಹೊಸತು :** ಆದರೆ ಇಂತಹ ಉನ್ಮಾದಕರ ಸನ್ನಿವೇಶದಲ್ಲಿ ಈ ರೀತಿಯ ನಿರೂಪಣೆಗಳನ್ನು ಹೇಗೆ ತಾನೇ ಬದಲಾಯಿಸಬಹುದು?

**ಪ್ರಭಾತ್ ಪಟ್ನಾಯಕ್ :** ಆರ್ಥಿಕ ಪರಿಸ್ಥಿತಿಯು ಅದೃಷ್ಟವಶಾತ್ ಹಿಂದುತ್ವವನ್ನು ಕೇಳುವುದಿಲ್ಲ. ಬಂಡವಾಳಶಾಹಿ ವ್ಯವಸ್ಥೆಯ ಸ್ವಯಂಚಾಲಿತ ಶಕ್ತಿಗಳನ್ನು ಹಿಂದುತ್ವವು ತಡೆಹಿಡಿದು ನಿಲ್ಲಿಸುವಷ್ಟು ಶಕ್ತವಲ್ಲ. ಆರ್ಥಿಕತೆಯನ್ನು ನಿಯಂತ್ರಿಸುವುದರಲ್ಲಿ ಬಿಜೆಪಿಯು ಸಂಪೂರ್ಣವಾಗಿ ಸೋತಿದೆ. ಇಂದಲ್ಲ ನಾಳೆ ಆರ್ಥಿಕ ಪರಿಸ್ಥಿತಿಯ ನೈಜತೆಯು ಜನರಿಗೆ ಅರ್ಥವಾಗಲಿದೆ ಹಾಗೂ ಆಗ ನಿರೂಪಣೆಗಳು ಬದಲಾಗುತ್ತವೆ. ಆ ಸಮಯದಲ್ಲಿ ಎಡ ಶಕ್ತಿಗಳು ಜನರನ್ನು ನೈಜ ಸಮಸ್ಯೆಗಳ ಸುತ್ತ ಸಂಘಟಿಸಬೇಕು.

**ಹೊಸತು :** ಖಾಸಗೀ ಬಂಡವಾಳವು ತಮ್ಮೆಡೆಗೆ ಹರಿದು ಬರಬೇಕೆಂದು ರಾಜ್ಯಗಳ ನಡುವೆ ಪೈಪೋಟಿ ಒಂದೆಡೆಯಾದರೆ "ಜನಪರ ಕಲ್ಯಾಣ ಕಾರ್ಯಕ್ರಮ"ಗಳನ್ನು ಪಕ್ಷಗಳು ಪೈಪೋಟಿಯ ಮೇಲೆ ಅವರುಗಳ ಚುನಾವಣಾ ಪ್ರಣಾಳಿಕೆಗಳಲ್ಲಿ ಉಲ್ಲೇಖಿಸಿರುತ್ತಾರೆ. ಇದನ್ನು ಹೇಗೆ ಅರ್ಥೈಸುವುದು?

**ಪ್ರಭಾತ್ ಪಟ್ನಾಯಕ್ :** "ಜನಪರ ಕಲ್ಯಾಣ ಕಾರ್ಯಕ್ರಮಗಳು" ಆಯಾ ಪಕ್ಷಗಳ ಚುನಾವಣಾ ಪ್ರಣಾಳಿಕೆಗಳಿಗೆ ಸೀಮಿತವಾಗಿರುತ್ತವೆಯೇ ಹೊರತು ಅವು ಅನುಷ್ಠಾನಕ್ಕೆ ಬರುವುದು ಕಷ್ಟಸಾಧ್ಯ. ಉದಾಹರಣೆಗೆ ಕಾಂಗ್ರೆಸ್ ಪಕ್ಷವು "ನ್ಯಾಯ"ವೆಂಬ ಯೋಜನೆಯನ್ನು ಹೊರತಂದಿತು. ಆದರೆ ಇದು ಪ್ರಮುಖವಾದ ಕಾರ್ಯಕ್ರಮವೆಂದು ಬಿಂಬಿತವಾಗಲೇ ಇಲ್ಲ. ಇಂದಿರಾ ಗಾಂಧಿಯವರು 'ಗರೀಬೀ ಹಟಾವೋ' ಘೋಷಣೆಯೊಂದಿಗೆ ಜನರ ಬಳಿ ಹೋದರು. ಆದರೆ ೨೦೧೯ರಲ್ಲಿ ಕಾಂಗ್ರೆಸ್ ಪಕ್ಷವು ಅಂತಹುದನ್ನು ಏನೂ ಮಾಡಲಿಲ್ಲ. ಈ "ನ್ಯಾಯ" ಯೋಜನೆಗೆ ಸಂಬಂಧಿಸಿದ ಹಣಕಾಸಿನ ಲೆಕ್ಕಾಚಾರವನ್ನು ಕಾಂಗ್ರೆಸ್ ಸರಿಯಾಗಿ ಮಾಡದಿರುವುದೇ ಇದಕ್ಕೆ ಕಾರಣ. ಚುನಾವಣೆಗಳಲ್ಲಿ "ಜನಪರ ಕಲ್ಯಾಣ ಯೋಜನೆ"ಗಳನ್ನು ಚುನಾವಣಾ ಪ್ರಚಾರ ತಂತ್ರವಾಗಿ ಬಳಸಲಾಗುತ್ತಿವೆ. 'ಆಯುಷ್ಮಾನ್ ಭಾರತ' ಯೋಜನೆಗೆ ಸರಿಯಾದ ಪಾಲನ್ನು ಬಜೆಟ್ಟಿನಲ್ಲಿ ನಿಗದಿಪಡಿಸಿರುವುದಿಲ್ಲ. 'ಜನಪರ ಕಲ್ಯಾಣ ಯೋಜನೆ'ಗಳ ಕುರಿತು ಪಕ್ಷಗಳ ನಡುವಿರುವ ಪೈಪೋಟಿಯು ಕೇವಲ ತೋರಿಕೆಗೆ ಮಾತ್ರವಷ್ಟೆ.

ಆದರೆ ರಾಜ್ಯಗಳ ನಡುವಿನ ಪೈಪೋಟಿಯು ಬಹಳ ಅಪಾಯಕಾರಿ. G.S.T.ಯನ್ನು ಒಪ್ಪುವುದರ ಮೂಲಕ ಎಡಪಕ್ಷಗಳು ತಪ್ಪು ಮಾಡಿವೆ ಎಂದು ನನಗನಿಸುತ್ತದೆ. ಇದರಿಂದಾಗಿ ಎಲ್ಲ ಸಂಪನ್ಮೂಲಗಳನ್ನು ಕೇಂದ್ರೀಕರಿಸುವಲ್ಲಿ ಬಿಜೆಪಿಗೆ ಸಹಾಯ ಮಾಡಿದಂತಾಗಿದೆ. ಈಗ ರಾಜ್ಯ ಸರ್ಕಾರಗಳು ಪಶ್ಚಾತ್ತಾಪ ಪಡುತ್ತಿವೆ. ಈ ಹಿಂದೆ ಪಶ್ಚಿಮ ಬಂಗಾಲದ ವಿತ್ತ ಮಂತ್ರಿ ಅಶೋಕ್ ಮಿತ್ರ ಹಾಗೂ ಆಗಿನ ಮುಖ್ಯ ಮಂತ್ರಿ ಜ್ಯೋತಿ ಬಸು ಅವರ ನೇತೃತ್ವದಲ್ಲಿ ರಾಜ್ಯಗಳ ಸಂಯುಕ್ತ ರಂಗ ಅಸ್ತಿತ್ವದಲ್ಲಿದ್ದು ಆಗ ಎಡಪಕ್ಷಗಳು ಪ್ರಭಾವಯುತವಾಗಿ ಹೊರಹೊಮ್ಮಿದ್ದವು. ಈಗ ಎಲ್ಲ ರಾಜ್ಯ ಸರ್ಕಾರಗಳೂ ಸರದಿಯಲ್ಲಿ ನಿಂತು ಕೇಂದ್ರದಿಂದ ಸಹಾಯಧನವನ್ನು ಬೇಡುವಂತಾಗಿದೆ. ಕಳೆದ ವರ್ಷ ಕೇರಳದಲ್ಲಿ ಪ್ರವಾಹವುಂಟಾದಾಗ ಅಲ್ಲಿಯ ರಾಜ್ಯ ಸರ್ಕಾರವು ಸಂಪನ್ಮೂಲಕ್ಕಾಗಿ ಕೇಂದ್ರವನ್ನು ಬೇಡುವ ಸ್ಥಿತಿಗೆ ಬಂದಿದ್ದನ್ನು ನೋಡಬಹುದು.

**ಹೊಸತು :** ಭವಿಷ್ಯದಲ್ಲಿ ಎಡ ಚಳುವಳಿಗಾರರ ಮೇಲೆ ದಾಳಿಗಳು ನಡೆಯುವ ಸಾಧ್ಯತೆಯಿದೆಯೆಂದು ನೀವು ನಂಬುತ್ತೀರಾ?

**ಪ್ರಭಾತ್ ಪಟ್ನಾಯಕ್ :** ಹೌದು. ಅವು ಈಗಾಗಲೇ ಆರಂಭಗೊಂಡಿವೆ. ಚುನಾವಣಾ ಫಲಿತಾಂಶಗಳು ಫ್ಯಾಸಿಸ್ಟ್ ಶಕ್ತಿಗಳಲ್ಲಿ ಧೈರ್ಯ ನೀಡಿವೆ. ಬುದ್ಧಿಜೀವಿಗಳ ಮೇಲೆ, ಪ್ರಗತಿಪರ ಚಿಂತಕರ ಮೇಲೆ, ಪ್ರಗತಿಪರ ಸಂಘಟನೆಗಳ ಮೇಲೆ ದಾಳಿಗಳು ನಡೆಯಲಿವೆ. ದೇಶದಲ್ಲಿ ಫ್ಯಾಸಿಸಂಅನ್ನು ಬಲಗೊಳಿಸಲಾಗುತ್ತಿದೆ. ಚರಿತ್ರೆಯಲ್ಲಿ ಈ ಮೊದಲು ನೋಡಿರುವ ಫ್ಯಾಸಿಸಂಗಿಂತ ಇದು ಭಿನ್ನವಾಗಿದೆ. ಇಲ್ಲಿ Concentration Campಗಳು ಇರಲಿಕ್ಕಿಲ್ಲ. ಆದರೆ ನಿರಾಶ್ರಿತರ ಕ್ಯಾಂಪುಗಳು ಇರುವ ಸಾಧ್ಯತೆಗಳಿವೆ. ನಾಗರಿಕರ ರಾಷ್ಟ್ರೀಯ ದಾಖಲಾತಿ (National Register of Citizens) ಎಡ ಹಾಗೂ ಇತರೇ ಪಕ್ಷಗಳನ್ನು ಒಳಗೊಂಡ ಒಂದು ಪ್ರಬಲ ಫ್ಯಾಸಿಸ್ಟ್ ವಿರೋಧೀ ಮೈತ್ರಿಕೂಟವನ್ನು ಕಟ್ಟುವಲ್ಲಿ ಎಡಶಕ್ತಿಗಳು ಮುಂದಾಳತ್ವವನ್ನು ವಹಿಸ ಬೇಕು. ಕೇವಲ ಎಡ ಶಕ್ತಿಗಳು ಮಾತ್ರ ಈ ರೀತಿಯ ಮೈತ್ರಿಕೂಟವನ್ನು ರಚಿಸಲು ಸಮರ್ಥವಾಗಿರುತ್ತವೆ.

ಎಂ. ಸಿ. ಡೋಂಗ್ರೆ
'ಆಶೀರ್ವಾದ', ೩ನೇ ಅಡ್ಡರಸ್ತೆ, ೨ನೇ ಮುಖ್ಯರಸ್ತೆ
ಆದರ್ಶನಗರ, ಹಾಸನ - ೫೭೩ ೨೦೧



*ಶ್ರೀನಿವಾಸ ಗುಡಿ ಮೆಮೋರಿಯಲ್ ಟ್ರಸ್ಟ್, ಗುಲಬರ್ಗಾ ಹಾಗೂ 'ಹೊಸತು' ವಾಚಕ ಬಳಗದ ವತಿಯಿಂದ ೧೭-೯-೨೦೧೯ರಂದು ಕಲಬುರಗಿ ಅಂಜುಮನ್ ಹಾಲ್‌ನಲ್ಲಿ ಜರುಗಿದ "ಸಂವಿಧಾನ ಹಾಗೂ ಅಭಿವ್ಯಕ್ತಿ ಸ್ವಾತಂತ್ರ್ಯ" ವಿಷಯದ ವಿಚಾರ ಸಂಕಿರಣದಲ್ಲಿ ಪ್ರಗತಿಪರ ಚಿಂತಕರಾದ ಕಾಂ॥ ಪಿ. ವಿ. ಲೋಕೇಶ್, ಗುಲಬರ್ಗಾ ವಿಶ್ವವಿದ್ಯಾಲಯದ ಮಾಜಿ ಕುಲಪತಿ ಡಾ॥ ಎಸ್. ಪಿ. ಮೇಲಕೇರಿ, ಡಾ॥ ಅಬ್ದುಲ್ ರಜಾಕ್ ಉಸ್ತಾದ್, ಡಾ॥ ಪಿ. ಸಂಪತ ರಾವ್, ಕಾಂ ॥ ಗೋಪಾಲರಾವ್ ಗುಡಿ, ಡಾ॥ ವಿಜಯಕುಮಾರ್ ಮೊದಲಾದವರು ಪಾಲ್ಗೊಂಡಿದ್ದರು.*




# ಮಾದಳ್ಳಿಯ ಗೋ ಯಜ್ಞ

ಭದ್ರಪ್ಪ ಶಿ. ಹೆನ್ಲಿ

ಇಪ್ಪತ್ತನೆಯ ಶತಮಾನ ಹಿಂದಕ್ಕೆ ಸರಿದ ಸಂಕ್ರಮಣ ಕಾಲದಲ್ಲಿ ಗರಬಡಿದು ಮಾದಳ್ಳಿಗೆ ಲಕ್ವ ಹೊಡೆಯಿತು! ಅಂಕೇಗೌಡರ ಇಬ್ಬರು ಮಕ್ಕಳಾದ ಶಿವೇಗೌಡ ಮತ್ತು ಮಾಂತೇಗೌಡನ ವಂಶಾವಳಿಯ ರೆಂಬೆ-ಕೊಂಬೆಗಳು ಹರಡಿದ ಊರಿನ ಏಕ ಮಾತ್ರ ಶಿವಾಚಾರರ ಜಮೀನುದಾರಿಕೆಯ ಕುಟುಂಬ ಒಂದು ಕಡೆಯಾದರೆ, ಗೌಡರು, ಶೆಟ್ಟರು, ಆಚಾರರು, ಮಡಿವಾಳರು ಮುಂತಾದ ಇಪ್ಪತ್ತು ಶೂದ್ರ ಕುಟುಂಬಗಳು ಇನ್ನೊಂದು ಕಡೆಯಾಗಿ, ಹತ್ತಾರು ಕುಟುಂಬಗಳ ಊರ ಹೊರಗಿನ ಹೊಲಗೇರಿ ಮತ್ತೊಂದು ಕವಲಾಗಿ ಮುಪ್ಪಾಲುಗೊಂಡರೂ ಮಾದಳ್ಳಿಯ ಪುರಾತನ ಸಂವಿಧಾನದ ಕಬ್ಬಿಣದ ಚೌಕಟ್ಟಿನೊಳಗೆ, ಜಾತಿ-ಜೀತ, ಮಡಿ-ಮೈಲಿಗೆಯ ಸಾಂಪ್ರದಾಯಿಕ ಮೌಲ್ಯಗಳೊಂದಿಗೆ ಅಲ್ಲಿಯ ಬದುಕು ನಿರಾತಂಕವಾಗಿ ಸಾಗಿಕೊಂಡು ಬಂದಿತ್ತು, ಇಲ್ಲಿಯವರೆಗೆ.

ಹೌದು, ಮಾದಳ್ಳಿಯ ಬದುಕು ನಿರಾತಂಕವಾಗಿ ಸಾಗಿಕೊಂಡು ಬಂದಿತ್ತು ಇಲ್ಲಿಯವರೆಗೆ. ಆದರೆ ಇಪ್ಪತ್ತೊಂದನೆಯ ಶತಮಾನದ ಅಬ್ಬರದ ಆಘಾತಕ್ಕೆ ಪ್ರಪಂಚವೇ ಒಳಗಾದಂತೆ, ಮೈಮುದುಡಿ ಮಲಗಿದ್ದ

ಎರಡು ಹಳ್ಳಿಗಳ ದ್ವೇಷದ ಕಿತ್ತಾಟ ನಿರಂತರವಾಗಿದ್ದುದರಿಂದ, ಅದಕ್ಕೆ ಸ್ಪಷ್ಟ ಕಾರಣವೇ ಬೇಕಿರಲಿಲ್ಲ. ಅಗಮ್ಯವಾಗಿದ್ದ ಅವರ ದ್ವೇಷ ಸಾಮಾನ್ಯವಾಗಿ ವರ್ಷಕ್ಕೊಮ್ಮೆ ನಂದಳ್ಳಿಯಲ್ಲಿ ನಡೆಯುತ್ತಿದ್ದ ಷಷ್ಠಿಹಬ್ಬದ ನಾಡಕುಸ್ತಿಯಲ್ಲಿ ಸ್ಫೋಟಗೊಳ್ಳುತ್ತಿತ್ತು. ಗೆದ್ದ ಮತ್ತು ಸೋತ ತಂಡಗಳ ಕಡೆಯ ಪಡ್ಡೆ ಹುಡುಗರು ಹೊಡೆದಾಡಿಕೊಳ್ಳದೆ ಸುಸೂತ್ರವಾಗಿ ಮುಕ್ತಾಯವಾದ ಷಷ್ಠಿ ಹಬ್ಬದ ನೆನಪು ಆ ಊರಿನ ಯಾರಿಗೂ ಇಲ್ಲ. ತೆಂಗು, ಬಾಳೆಗೊನೆಯನ್ನು ಕದ್ದು ಸಿಕ್ಕಿಬಿದ್ದು ಬುರುಡೆಗೆ ಬಿಸಿನೀರು ಕಾಯಿಸಿಕೊಂಡವರು ತಮ್ಮ ವಿರೋಧಿಗಳ ಗದ್ದೆಗೇ ಬೆಂಕಿಹಾಕಿದ್ದು, ಮಾದಳ್ಳಿಯ ದಲಿತ ಹುಡುಗಿಯನ್ನು ಕುಂತಳ್ಳಿಯ ಶೂದ್ರ ಹುಡುಗ ಕೆಣಕಿದ್ದಕ್ಕೆ ಎರಡೂ ಹಳ್ಳಿಗಳ ತೋಟಗಳು ಸುಟ್ಟು ಹೋದದ್ದು, ಮದುವೆಯ ಕರೆನೆರೆ ಕಾರ್ಯಕ್ರಮದ ಊಟದಲ್ಲಿ ಮಾಂಸಕ್ಕಿಂತ ಮೂಳೆಗಳೆ ಜಾಸ್ತಿ ಇದ್ದುವೆಂದು ಕಿತ್ತಾಡಿಕೊಂಡಿದ್ದು, ಹೀಗೆ ಆ ಎರಡು ಹಳ್ಳಿಗಳ ಸ್ವಾಭಿಮಾನವನ್ನು ಕೆಣಕಲು ಹತ್ತಾರು ಕಾರಣಗಳು ಸ್ವಾಭಾವಿಕವಾಗಿ ಸಿಕ್ಕುತ್ತಿದ್ದವು.



ಮಾದಳ್ಳಿಗೂ ಚಂಡಮಾರುತ ಅಪ್ಪಳಿಸಿತು. ಸರಕಾರ ದಲಿತರಿಗೆ ಮನೆಗಳನ್ನು ಕಟ್ಟಿಸಿ ಜಮೀನು ಹಂಚಿದ ಕೂಡಲೆ ಹಳೆಯ ಹೊಲಗೇರಿ ನಾಶವಾಗಿ ಅದರ ಪಕ್ಕದಲ್ಲಿಯೇ ಕೃಷ್ಣಾಪುರವೆಂಬ ಹೊಸದೊಂದು ದಲಿತ ಕೇರಿ ಉದ್ಭವಿಸಿತು. ಕುಂಟ, ರಂಗ, ಹುಲ್ಲ, ಕೋಡಿಗ, ಕೊಕ್ಕಾರ, ಮಡ್ಡೆ ಮುಂತಾದ ಹಳೆಯ ಪಳೆಯುಳಿಕೆಗಳು ಮಾತ್ರ ತಮ್ಮ ಮೂಲಸ್ಥಾನದಲ್ಲಿಯೇ ಉಳಿದು, ಈ ಶತಮಾನದ ಹುಡುಗರೆಲ್ಲಾ ಕೃಷ್ಣಾಪುರವನ್ನು ಸೇರಿದರು. ಆ ಹುಡುಗರು ಸ್ಕೂಲು, ಕಾಲೇಜು, ಕೆಲಸ ಎಂದು ಊರು ಬಿಟ್ಟು ನಗರ ಸೇರಿದ್ದರಿಂದ ಮಾದಳ್ಳಿಯ ಕಳ್ಳುಬಳ್ಳಿಯ ಸಂಬಂಧ ಒಮ್ಮೆಲೇ ತುಂಡರಿಸಿ ಬಿತ್ತು. ಪುರಾತನ ಮಡಿ–ಮೈಲಿಗೆಯ ಕಬ್ಬಿಣದ ಚೌಕಟ್ಟು ತುಕ್ಕಿಡಿದು ಕಳಚಿಬೀಳುತ್ತಿದ್ದಂತೆ ಶೂದ್ರಾದಿ–ಶಿವಾಚಾರದ ಕುಟುಂಬಗಳಿಗೆ ಆಘಾತ ಉಂಟಾಯಿತು.

ತಲ ತಲಾಂತರದಿಂದ ಶಿವಾಚಾರರ ಮನೆಯ ಜೀತ ಮಾಡಿಕೊಂಡು ಬಂದಿದ್ದ ಹೊಲೆಯರೆಲ್ಲಾ ದಲಿತರಾಗಿ ಕೃಷ್ಣಾಪುರ ಸೇರಿದಾಗಿನಿಂದ ಕಾಫಿ ತೋಟದ ಕೆಲಸಕ್ಕೆ ಅಸ್ಸಾಮಿ ಕೆಲಸಗಾರರನ್ನು ನೇಮಿಸಿಕೊಳ್ಳಬೇಕಾಯಿತು. ಆದರೆ ಆ ಅಸ್ಸಾಮಿ ಕೆಲಸಗಾರರೇನೂ ಸತ್ತದನವನ್ನು ಎತ್ತುವುದಾಗಲೀ, ಹೆಣದ ಗುಂಡಿಯನ್ನು ತೋಡುವುದಾಗಲೀ ಕಸ–ಮುಸರೆ ಮುಂತಾದ ಪರಂಪರಾಗತ ಋಣಾನುಬಂಧದ ಪುಣ್ಯ ಕಾರ್ಯಗಳನ್ನು ಮಾಡುತ್ತಿರಲಿಲ್ಲ. ಆದರೆ ಇಲ್ಲಿಯವರೆಗೂ ಅದೇನು ಕುತ್ತಿಗೆಯವರೆಗೆ ಬಂದ ಸಮಸ್ಯೆಯಾಗಿರಲಿಲ್ಲ. ಯಾಕೆಂದರೆ ಸತ್ತದನಗಳಿಗೆ ಗತಿಕಾಣಿಸುವುದಕ್ಕೆ ನಗರದ ಅಂಚಿನ ಸಾಬರಕೇರಿ ಕಾಕಾಗಳು ನೆರವಾಗುತ್ತಿದ್ದರು. ತಮ್ಮ ತಮ್ಮ ಕುಂಡೆಗಳನ್ನು ತಾವೇ ತೊಳೆದುಕೊಳ್ಳುವುದು ಮೇಲೆಂದು ಶೂದ್ರಾದಿ ಕುಟುಂಬಗಳು ಅಭಾವ ವೈರಾಗ್ಯದ ಅನಿವಾರ್ಯ ತೀರ್ಮಾನಕ್ಕೆ ಬಂದಿದ್ದರಿಂದ ಮಾದಳ್ಳಿಯ ಬದುಕು ಹೇಗೋ ಕುಂಟಿಕೊಂಡು ಸಾಗುತ್ತಲಿತ್ತು.

ಹೊಲಗೇರಿಯ ಕೆಲವು ಪಳೆಯುಳಿಕೆಗಳು ತಮ್ಮ ಪೂರ್ವಜನ್ಮದ ಋಣಾನುಬಂಧದಿಂದ ಮುಕ್ತರಾಗದೆ, ಊರೊಳಗೆ ಬಂದು ತಮ್ಮ ವಂಶಪಾರಂಪರ್ಯದ ಕರ್ತವ್ಯಗಳನ್ನು ನಿರ್ವಹಿಸಿ ಹೊರ ಕಿಳ್ಳಿನಲ್ಲಿ ಕುಳಿತು, ಹಳಸಿದ ಅನ್ನ ತಿಂದು, ಕರಟದಲ್ಲಿ ಕಾಫಿ ಕುಡಿದು ಧನ್ಯರಾಗುತ್ತಿದ್ದರು! ಯಾವ ಸರಕಾರಿ ಕಾನೂನುಗಳಾಗಲೀ, ಸಂಘಟನೆಗಳ ಪ್ರತಿರೋಧವಾಗಲೀ ಈ ಋಣಾನು ಬಂಧವನ್ನು ಒಮ್ಮೆಗೇ ತುಂಡರಿಸಲು ಸಾಧ್ಯವಾಗದಿದ್ದುದರಿಂದ, ಮಾದಳ್ಳಿಯ ಬದುಕು ಕುಂಟುತ್ತಾ, ತೇಕುತ್ತಾ ಸಾಗುತ್ತಲೇ ಇತ್ತು, ತೀರಾ ಇತ್ತೀಚಿನವರೆಗೆ.




*ನವಕರ್ನಾಟಕ ಪ್ರಕಟಿಸಿರುವ ಯೋಗರತ್ನ ಡಾ॥ ಎಸ್. ಎನ್. ಓಂಕಾರ್ ಅವರ "ಮಂಡಿಕೀಲಿನ ಸ್ವಾಸ್ಥ್ಯ – ಯೋಗದ ಹಾದಿ" ಮತ್ತು "ಪುನಶ್ಚೇತನ – ಯೋಗದ ಹಾದಿ" ಪುಸ್ತಕಗಳನ್ನು ಬೆಂಗಳೂರಿನ ಶ್ರೀ ಶಂಕರ ಕ್ಯಾನ್ಸರ್ ಆಸ್ಪತ್ರೆ ಮತ್ತು ಸಂಶೋಧನಾ ಕೇಂದ್ರದ ಸಭಾಂಗಣದಲ್ಲಿ ದಿನಾಂಕ : ೨೩–೦೮–೨೦೧೯ರಂದು ಡಾ॥ ಬಿ. ಎಸ್. ಶ್ರೀನಾಥ್ ಅವರ ಅಧ್ಯಕ್ಷತೆಯಲ್ಲಿ ಡಾ॥ ಸಿ. ಎನ್. ಮಂಜುನಾಥ್ ಅವರು ಬಿಡುಗಡೆ ಮಾಡಿದರು. ವೇದಿಕೆಯಲ್ಲಿ ಶ್ರೀಮತಿ ವಾಣಿಶ್ರೀ ಓಂಕಾರ್, ಡಾ॥ ಬಿ. ಎಸ್. ಶ್ರೀನಾಥ್, ಡಾ॥ ಸಿ. ಎನ್. ಮಂಜುನಾಥ್, ಡಾ॥ ಎಸ್. ಎನ್. ಓಂಕಾರ್, ಎ. ರಮೇಶ ಉಡುಪ ಉಪಸ್ಥಿತರಿದ್ದರು.*

ಹೌದು, ತೀರ ಇತ್ತೀಚಿನವರೆಗೆ ಮಾದಳ್ಳಿ ಮುಗ್ಧವಾಗಿ ಮುದುಡಿ ಮಲಗಿತ್ತು. ಆದರೆ ಇತ್ತೀಚೆಗೆ ಹತ್ತಿರದ ಮಂಜಿರಾಬಾದು ಪೇಟೆಯಲ್ಲಿ ಆದ ಘಟಸ್ಫೋಟದಿಂದಾಗಿ ಮಹಾಕ್ಷೋಭೆಗೆ ಒಳಗಾಗದೇ ಉಳಿಯಲು ಸಾಧ್ಯವೇ ಆಗಲಿಲ್ಲ. ಗೋಸಂರಕ್ಷಣಾ ಕಾಯ್ದೆಯು ಜಾರಿಯಾದದ್ದೇ ತಡ, ಧರ್ಮ ಸಂಸ್ಥಾಪನಾ ವೀರಯೋಧರ ಪಡೆ ದೀಕ್ಷೆ ತೊಟ್ಟು ಅಖಾಡಕ್ಕೆ ಧುಮುಕಿಯೇ ಬಿಟ್ಟಿತು. ಈ ಪುಣ್ಯ ಭೂಮಿಯ ಕಣ–ಕಣಗಳನ್ನು ಪವಿತ್ರಗೊಳಿಸುವ ಪ್ರತಿಜ್ಞೆಯನ್ನು ಮಾಡಿದ ಪರಿವ್ರಾಜಕ ಪಡೆಯ ಧರ್ಮಯುದ್ಧದ ದಾಳಿಗೆ ಸಿಕ್ಕಿದ ಹತ್ತಾರು ಲಾರಿಗಳು ಬೆಂಕಿಗೆ ಆಹುತಿಯಾದವು. ಪಾಪಿಗಳ ಜೊತೆಗೆ ಪುಣ್ಯವಂತರ ಆತ್ಮಾಹುತಿಯೂ ಆಯಿತು. ಮಂಜಿರಾಬಾದಿನ ಕಸಾಯಿಖಾನೆಯೊಂದಿಗೆ, ಗೋಮಾಂಸದ ಅಂಗಡಿಗಳೂ ಸಂಪೂರ್ಣವಾಗಿ ಬಾಗಿಲು ಮುಚ್ಚಿದವು. ಧರ್ಮ ಸಂಗ್ರಾಮದ ಬೆಂಕಿ ಉರಿಯುತ್ತಿರುವಾಗಲೇ ಅದಕ್ಕೆ ಪ್ರತಿಸ್ಪರ್ಧಿಯಾಗಿ ದಲಿತಕೇರಿಗಳಲ್ಲೆಲ್ಲಾ ಅಲಿಖಿತ ಕಾನೂನು ಜಾರಿಯಾಯಿತು: ಇನ್ನು ಮುಂದೆ ದಲಿತರಾರೂ ಸತ್ತದನವನ್ನು ಎತ್ತಬಾರದು, ಹೆಣದ ಗುಂಡಿಯನ್ನು ತೋಡಬಾರದು!

ಈ ಅಲಿಖಿತ ಕಾನೂನೇ ಮಾದಳ್ಳಿಯ ಸೋಮಾರಿ ನಿದ್ದೆಯನ್ನು ಕೆಡಿಸಿದ್ದು. ಅದಾವ ಮಾರಿಯ ಶಾಪ ಬಡಿದಿತ್ತೋ? ಶಿವೇಗೌಡನ ಕಿರಿಸೊಸೆ ಅತ್ತೆಯೊಡನೆ ಮಾಡಿದ ಜಗಳದಿಂದ ಮೈಮರೆತು ಕಳಲೇ ರಸವನ್ನು (ಎಳೆ ಬಿದಿರು) ಕಲಗಚ್ಚಿನಲ್ಲಿ ಬೆರೆಸಿ ಕೊಟ್ಟದ್ದನ್ನು ಗೌರಿ ಹಸು ಕುಡಿದು, ಕಾಲನ್ನು ಒದರಾಡಿಕೊಂಡು ಸತ್ತು ಬಿದ್ದಿತು. 'ಹತ್ತು ಸೇರು ಹಾಲುಕರೆಯುತ್ತಿದ್ದ ಕಾಮಧೇನುವಂಥ ಹಸೂನ ಕೊಂದ್ಯಲ್ಲೇ ಮನೆಹಾಳಿ' ಎಂದು ಸೊಸೆಯ ಕೂದಲಿಡಿದು ಬಗ್ಗಿಸಿ ದನಕ್ಕೆ ಬಡಿದ ಹಾಗೆ ಬಡಿದವಳೇ 'ನನ್ನ ಮನೆ ಹಾಳು ಮಾಡಿದ್ಲಲ್ಲೋ ಈ ಮಾರಿ' ಎಂದು ಬಾಯಿ ಬಡಿದುಕೊಳ್ಳುತ್ತಾ, ಬಿಸಿಲುಮಾರಿಯಂತೆ ತನ್ನ ತಲೆಗೂದಲನ್ನು ತಾನೇ ಕಿತ್ತುಕೊಳ್ಳುತ್ತಾ ಮನೆಯ ಹೊರಗೆ ಓಡಿಬಂದಳು. ಸತ್ತ ಹಸುವನ್ನು ನೋಡಿ ಶಿವೇಗೌಡ ಎದೆಯೊಡೆದುಕೊಂಡ. ಮನೆಯ ಗಂಡು–ಹೆಣ್ಣುಗಳೆಲ್ಲಾ ಬಂದು ಸೇರಿದರು. 'ಗೋಹತ್ಯೆ ಶಾಪ ನನ್ನ ಮನೆತನಕ್ಕೆ ಬಡಿಯದೇ ತಪ್ಪೋದಿಲ್ಲಾ' ಎಂದು ಶಿವೇಗೌಡನ ಮುದಿ ಅವ್ವ ಗೋಳಾಡುತ್ತಾ ಕುಳಿತಳು. ಎಲ್ಲರ ಬೈಗುಳದೊಂದಿಗೆ, ಮಾವ ಮತ್ತು ಗಂಡನಿಂದ ಒದೆಯನ್ನು ತಿಂದು ಬೆದರಿ ಮೂಲೆಯಲ್ಲಿ ಬಿಕ್ಕುತ್ತಾ ಕುಳಿತಳು ಕಿರಿ ಸೊಸೆ ಮೀನಾಕ್ಷಿ.

ಗೋಹತ್ಯಾ ಪಾಪಕ್ಕೆ ಏನಾದರೂ ಶಾಂತಿ ಮಾಡಿಸಲೇಬೇಕೆಂದು ಹಿರೇ ಮಗನನ್ನು ಅಯ್ನೋರ ಮನೇಗೂ ಕಿರೇ ಮಗನನ್ನು ಹೊಲಗೇರಿಗೂ ಕಳುಹಿಸಿ, ತಲೆಯ ಮೇಲೆ ಕೈಹೊತ್ತು ಕುಳಿತ ಶಿವೇಗೌಡ. ಪಕ್ಕದ ಮನೆಯ ಮಾಂತೇಗೌಡನ ಮನೆಯವರಿಗೆ ಇದರಿಂದ ಅವ್ಯಕ್ತ ಸಂತೋಷ ಉಂಟಾಯಿತು. "ನಮ್ಮನ್ನು ಕಂಡು ಸಹಿಸಲಾರದ ದೆವ್ವಗಳು ಯಾವುವೋ ಮಾಟ ಮಾಡ್ಸಿದಾವೆ, ಅವ್ರ ಮನೆ ಹಾಳಾಗ...' ಎಂದು ಶಾಪಹಾಕುತ್ತಾ ಹೆಗ್ಗಡ್ತಿ ಎಲ್ಲೂ ನಿಲ್ಲದೆ ತಟಪಟಾ ಎಂದು ನಡೆದಾಡುತ್ತಿದ್ದಳು. ಇಡೀ ಮನೆಗೆ ಗರಬಡಿದಿತ್ತು, ಅದು ಸೂತಕದ ಮಡುವಿನೊಳಗೆ ಮುಳುಗಿಹೋಗಿತ್ತು. ಯಾರೊಬ್ಬರೂ ಹನಿನೀರನ್ನು ಮುಟ್ಟದೇ ಅಯ್ನೋರ ದಾರಿ ಕಾಯುತ್ತಾ ಕುಳಿತರು.

ಅಯ್ನೋರು ಬಂದು ಸತ್ತದನಕ್ಕೆ ಪೂಜೆ ಮಾಡಿದರು. ಸುಬ್ರಹ್ಮಣ್ಯ ಸ್ವಾಮಿಗೆ ಒಂದು ಸಾವಿರದ ಒಂದು ರೂಪಾಯಿಯ ಹರಕೆ ಕಟ್ಟಿದರು. ತಮ್ಮ ಕಾಣಿಕೆ ಪಡೆದು ಇನ್ನು ಎಲ್ಲರೂ ಏನಾದರೂ ತಿಂದು ಕುಡಿಯಬಹುದೆಂದು ಹೇಳಿ ಹೊರಟರು. ಆದರೆ ಆ ಆಘಾತದಿಂದ ಯಾರೂ ಹೊರಬಂದಿರಲಿಲ್ಲ. ಗೋಹತ್ಯಾ ಪಾಪಕ್ಕೆ ಹೆದರಿ ದಿಕ್ಕುತೋಚದೆ ಕುಳಿತಿದ್ದರು.

ಕಿರೇ ಮಗ ಓಂಕಾರಸ್ವಾಮಿ ಹೊಲಗೇರಿಗೆ ಬಂದು 'ಹಸು ಸತ್ತು ಬಿದ್ದಿದೆ, ಎತ್ತಿ ಒಪ್ಪಮಾಡ್ಕೊಳ್ರೋ' ಎಂದು ಕೂಗಿ ಹೇಳಿದ. ಅಲ್ಲೆ ಕುಳಿತಿದ್ದ ಹಳೇ ಪಳೆಯುಳಿಕೆಗಳಿಗೆ ತಮ್ಮ ಸ್ವರ್ಗದ ಬಾಗಿಲು ತೆರೆದಂತೆ ಅನ್ನಿಸಿತು. ಮರೆತೇಹೋಗಿದ್ದ ದನದ ಬಾಡಿನ ಗಮಲಿನ ದಿವ್ಯಾನುಭವ

ಮೂಗಿಗೆ ಅಡರಲಾಗಿ ಅಟ್ಟವನ್ನೆಲ್ಲಾ ತಡಕಿ, ಎಂದೋ ಬಿಸಾಡಿದ್ದ ಕತ್ತಿ–ಕುಡಗೋಲನ್ನಿಡಿದು ತಾರುಣ್ಯದ ಹುರುಪಿನಲ್ಲಿ ಹೊರಟೇಬಿಟ್ಟರು. ಬಿದಿರಿನ ಬಡಿಗೆ, ಹಗ್ಗ, ಕಡಗತ್ತಿಗಳನ್ನಿಡಿದು ಸತ್ತದನದ ಮುಕ್ತಿಯಜ್ಞಕ್ಕೆ ಶಿವಾಚಾರರ ಕೇರಿಯ ಕಡೆಗೆ ಮುಖಮಾಡಿದ ಮುದಿಪಡೆಯ ವಿಷಯ ಕೃಷ್ಣಾಪುರದ ದಲಿತ ಹುಡುಗರ ಕಿವಿಯನ್ನು ಮುಟ್ಟಿತು! ಹಾರುವರ ಯಜ್ಞಯಾಗಗಳನ್ನು ತಡೆಯುತ್ತಿದ್ದ ಕಿರಾತಕರಂತೆ ಆ ಯುವ ಪಡೆ ಅವತರಿಸಿಯೇ ಬಿಟ್ಟಿತು! ದನದ ಮಾಂಸದ ಸಂಡಿಗೆ ರುಚಿಯ ಕನಸಿನಲ್ಲಿ ತೇಲುತ್ತಾ ಸಾಗಿದ್ದ ತಮ್ಮ ಕುಲತಿಲಕರನ್ನು ಅಡ್ಡಗಟ್ಟಿ, ಹತಾರಗಳನ್ನು ಕಸಿದುಕೊಂಡು, ಕಾಲು ಮುರಿಯುತ್ತೇವೆಂದು ಬೆದರಿಸಿ ಎಳೆದುಕೊಂಡು ಹೋದರು. ತಾವು ತಮ್ಮ ಹಿರೀಕರ ತಲಾಂತರದಿಂದಲೂ, ಕುಲದ ಹಕ್ಕಿನಂತೆ ಅನೂಚಾನವಾಗಿ ಮಾಡಿಕೊಂಡು ಬಂದಿದ್ದ 'ಸತ್ತದನದ ಒಪ್ಪಮಾಡುವ ಕಾರ್ಯ'ವನ್ನು ಕಣ್ಣೆದುರು ತಂದುಕೊಂಡು, ಕೈಲಾಗದೆ ಹಿಂದಿರುಗಬೇಕಾದ ತಮ್ಮ ದೀನ ಅವಸ್ಥೆಗೆ ಶಾಪಹಾಕಿಕೊಂಡರು. ಬರಗಾರ ಉಪ್ಪು ಹುಳಿ ಬೆರಸಿ ಸಂಡಿಗೆ ಮಾಡಿ ಬೆಂಕಿ ಕೊಳ್ಳಿಯ ಮೇಲೆ ಸುಡುತ್ತಾ ಹೊರಡುವ ಆ ಘಾಟು ವಾಸನೆ ತಮ್ಮ ಬ್ರಹ್ಮರಂಧ್ರವನ್ನು ತಲುಪುವ ಅಲೌಕಿಕ ಅನುಭವ ಈ ಹಾಳು ಹೈಕಳಿಂದ ತಪ್ಪಿತಲ್ಲಾ ಎಂದು ಪರಿತಪಿಸುತ್ತಾ ಕೈಲಾಗದೆ ಸುಮ್ಮನೆ ಹಿಂದಿರುಗಿದರು ಹೊಲಗೇರಿಯ ಆ ಪಳೆಯುಳಿಕೆಗಳು. ವಂಶ ಪಾರಂಪರ್ಯವಾಗಿ ನಡೆದುಕೊಂಡು ಬರುತ್ತಿದ್ದ ಇಂತಹ ಅಲೌಕಿಕ ಅವಕಾಶಗಳೆಲ್ಲಾ ತಪ್ಪಿಹೋಗುವುದಕ್ಕೆ, ಇತ್ತೀಚೆಗಿನ ಹೈಕಳುಗಳು ತಮ್ಮಂತೆ ದನಕಾಯುತ್ತಾ, ಸೆಗಣಿ ಎತ್ತಿ ಜೀತಮಾಡುವ ಕುಲ ಕಸುಬನ್ನೇ ಮರೆತು, ನಗರ ಸೇರಿ ನಾಲ್ಕಕ್ಷರ ಕಲಿತದ್ದೆ ಕಾರಣವೆಂದು, 'ಓದು ಬರಾವು ತಮ್ಮ ಕುಲಕ್ಕೆ ವಕ್ಕರಿಸಿದ ಶಾಪ' ಎಂದು ಸಾಮೂಹಿಕ ತೀರ್ಮಾನಕ್ಕೆ ಬಂದರು.

'ಸತ್ತದನ ಎತ್ತೋದಿಲ್ವಂತೆ, ಆ ಕೃಷ್ಣಾಪುರದ ಹಡಬೆ ಹೈಕ್ಳು, ಹಳಬ್ರನ್ನ ದಾರಿಮಧ್ಯದಲ್ಲಿಯೇ ತಡೆದು ವಾಪಸ್ಸು ಎಳ್ಕೊಂಡ್ ಹ್ವಾದ್ರು...' ಓಂಕಾರಸ್ವಾಮಿಯ ಮಾತು ಶಿವೇಗೌಡನ ಬೆಂದ ಮನೆಗೆ ಬರಸಿಡಿಲಿನಂತೆ ಬಡಿಯಿತು.

'ಸತ್ತ ದನಾ ತಿಂದು ಬದುಕುತ್ತಿದ್ದ ಸೂ... ಮಕ್ಳಿಗೆ ಹೊಟ್ಟೆತುಂಬಾ ಅನ್ನ ಸಿಕ್ಕಿದ್ರೆ ಇನ್ನೇನಾಯ್ತದೆ... ಪಿತ್ತ ನೆತ್ತಿಗೇರಿದೆ ಕಳ್ಳ ಮುಂಡೇವ್ಕೆ... ಹೋಗೋ ಆ ಕುಂತಳ್ಳಿ ಹೊಲೇರ್ಗೆ ಹೇಳು, ಬಂದು ಬಾಚ್ಕೊಂಡೋಯ್ತಾರೆ..' ಮೈಯಿಗೆ ಬೆಂಕಿ ಬಿದ್ದವನ ಹಾಗೆ ಅರಚಿದ ಶಿವೇಗೌಡ.

ಕುಂತಳ್ಳಿಗೆ ಹೋದ ಓಂಕಾರಸ್ವಾಮಿ ಸತ್ತ ಕಪ್ಪೆಯ ಮುಖ ಮಾಡಿಕೊಂಡು ಹಿಂತಿರುಗಿದ. ಗಾಣದ ಹಳ್ಳಿ, ಬಾಣದ ಹಳ್ಳಿ, ಕೊರ್ಲಗದ್ದೆ, ಬಾಣಾವರ, ಮಕ್ಕಿತಪ್ಲು ... ಸುತ್ತಮುತ್ತಲಿನ ಯಾವ ಹಳ್ಳಿಯ ದಲಿತರೂ ಬರಲಿಲ್ಲ. 'ಸತ್ತದನ ಎತ್ತಬಾರದು, ಹೆಣದ ಗುಂಡಿ ತೆಗೆಯಬಾರದು' ಎನ್ನುವುದು ದಲಿತರ ಸಾಮೂಹಿಕ ನಿರ್ಣಯವಾಗಿತ್ತು.

ಸಂಜೆಯಾಗುತ್ತಾ ಬಂತು. ಸತ್ತ ದನದ ಹೊಟ್ಟೆಯುಬ್ಬಲು ಪ್ರಾರಂಭಿಸಿತು. ಶೂದ್ರರ ಕೇರಿಯಿಂದಲಾದರೂ ಯಾರೊಬ್ಬರೂ ಬರಲಿಲ್ಲ. ಮಾಂತೇಗೌಡನ ಸಂಸಾರ ಸಂತೋಷಪಡುತ್ತಾ ಗೋಡೆಗೆ ಕಿವಿ ಅಂಟಿಸಿ ಕೇಳಿಸಿಕೊಳ್ಳುತ್ತಿತ್ತು. ರಾತ್ರಿ ಇಡೀ ಅಲ್ಲೆ ಇದ್ದರೆ ವಾಸನೆ ಬರುವುದಂತೂ ಖಂಡಿತ ಎಂದು ದಿಕ್ಕು ತೋಚದೆ ಅಪ್ಪ ಮಕ್ಕಳು ಹುಚ್ಚು ನಾಯಿಯಂತಾದರು. ಸತ್ತದನವನ್ನು ಮುಟ್ಟಿ ಜಾತಿಕಳೆದುಕೊಳ್ಳುವ ಮಹಾ ಪಾಪಕ್ಕೆ ಕೈಹಾಕದ ಶಿವಾಚಾರ ಸಂಸಾರದ ಸದಸ್ಯರೆಲ್ಲಾ ಮುದಿ ಹೆಗ್ಗಡತಿಯ ಬುದ್ಧಿಮಾತನ್ನು ಗುಟ್ಟಾಗಿ ಕೇಳಿದರು. ಕಿರಿಸೊಸೆ ನಡುಮನೆಯ ಮೂಲೆಯಿಂದ ಹೊರಬರಲೇ ಇಲ್ಲ. ಹಿರೇ ಮಗ ಮುರುಗೇಶನನ್ನು ಮಂಜಿರಾಬಾದು ಪಟ್ಟಣದ ಸೆರಗಿನಲ್ಲಿದ್ದ ಸಾಬರಗೇರಿಗೆ ಕಳುಹಿಸಲಾಯಿತು, ಯಾರಿಗೂ ತಿಳಿಯದಂತೆ ನಡುರಾತ್ರಿಯಲ್ಲಿ ಬುಡೇನ್ ಸಾಬಿಗೆ ತಿಳಿಸಿದರೆ, ಅವನ ಮಕ್ಕಳು ಬೆಳಕು ಹರಿಯುವುದರೊಳಗೆ ಸತ್ತ ಹಸುವಿಗೆ ಒಂದು ಗತಿಕಾಣಿಸುತ್ತಾರೆಂಬ ನಿರೀಕ್ಷೆಯಲ್ಲಿ ಹಸಿವೆಯಿಂದ ಕಾದು ಕುಳಿತರು.

ದನದ ಮಾಂಸದ ವಿಷಯದಲ್ಲಿ ಮಂಜಿರಾಬಾದ್ ನಗರವೇ ಹೊತ್ತಿ ಉರಿದ ಬೆಂಕಿ ಇನ್ನೂ ಆರಿಯೇ ಇಲ್ಲವೆಂದು, ಸುತರಾಂ ಆ ಕೆಲಸ ತಮ್ಮಿಂದ ಸಾಧ್ಯವೇ ಇಲ್ಲವೆಂದು ಬುಡೇನ್ ಸಾಬಿ ಕಲ್ಲಿನಂತೆ ಕುಳಿತ. ಒಂದಕ್ಕೆರಡರಷ್ಟು ಹಣಕೊಡುವುದಾಗಿ ಪುಸಲಾಯಿಸಿ ಅವರನ್ನು ಒಪ್ಪಿಸುವುದಕ್ಕೆ ಮುರುಗೇಶನಿಗೆ ತನ್ನ ಅವ್ವನ ಹೊಟ್ಟೆಯಲ್ಲಿ ಮತ್ತೊಮ್ಮೆ ಹುಟ್ಟಿಬಂದಂತಾಯಿತು. ಕೈತುಂಬಾ ಹಣ ಬಿದ್ದಕೂಡಲೇ ಬುಡೇನ್ ಸಾಬಿಯ ಮಕ್ಕಳು ಮಧ್ಯರಾತ್ರಿಯಲ್ಲಿ ಮಾದಳ್ಳಿಗೆ ಹೊರಟರು. ಯಾರಿಗೂ ಹೆಜ್ಜೆ ಸಪ್ಪಳವೂ ಕೇಳಿಸದಂತೆ ಜಾಗ್ರತೆಯಿಂದ ಸತ್ತ ಹಸುವನ್ನು ಗಾಡಿಗೇರಿಸಿದರು. ಕಾಡುದಾರಿಯಲ್ಲಿ ತಮ್ಮ ಜೀವವನ್ನು ಎಡಗೈಯಲ್ಲಿ ಹಿಡಿದುಕೊಂಡು ಸಾಗುತ್ತಿದ್ದರು. ಗೋಡೆಗೆ ಕಿವಿ ಅಂಟಿಸಿ ಕುಳಿತಿದ್ದ ಮಾಂತೇಗೌಡನ ಮಕ್ಕಳಿಗೆ ಶಿವೇಗೌಡನ ಮನೆಯ ಗುಟ್ಟು ರಟ್ಟಾಗಿ, ಹಿರಿಯವನು ಪೇಟೆಗೆ ಹೋಗಿ ಪೊಲೀಸಿನವರಿಗೆ ವಿಷಯ ಮುಟ್ಟಿಸಿ, ಏನೂ ತಿಳಿಯದವನಂತೆ ಮನೆಗೆ ಮರಳಿ ಉಂಡು ಮಲಗಿದನು.

ಸಾಬರ ಗಾಡಿ ಮಾದಳ್ಳಿಯ ಗಡಿಯನ್ನು ದಾಟಿ ಮೂರು ಮಾರುದ್ದಕ್ಕೂ ಹೋಗಿರಲಿಲ್ಲ. ಅದೆಲ್ಲಿಂದಲೋ ಪೊಲೀಸ್ ಜೀಪು ಹಠಾತ್ತನೆ ಎದುರಿಗೆ ಪ್ರತ್ಯಕ್ಷವಾಯಿತು! ಬುಡೇನ್ ಸಾಬಿಯ ಮಕ್ಕಳು ಪ್ರಾಣಭಯದಿಂದ ತತ್ತರಿಸಿಹೋದರು. ತಾವು ಸತ್ತದನವನ್ನು ಗಡಿದಾಟಿಸುತ್ತಿರುವುದು ಮಾತ್ರವೆಂದು ಅಲ್ಲಾಹುವಿನ ಮೇಲೆ ಆಣೆ ಹಾಕಿದರು. ಮುರುಗೇಶನಿಂದ ಪಡೆದ ಹಣಕ್ಕೆ ಮತ್ತಷ್ಟು ಹಣಸೇರಿಸಿ ಕೊಟ್ಟು ಪೊಲೀಸಿನವರ ಕಾಲುಹಿಡಿದರು. ಸತ್ತದನದ ವಾಸನೆಯನ್ನು ತಡೆದುಕೊಳ್ಳಲಾರದ ಪೊಲೀಸಿನವರು ದನವನ್ನು ಅಲ್ಲೆ ಇಳಿಸಿ, ಮೂಗು ಮುಚ್ಚಿಕೊಂಡು ಹೊರಟುಹೋದರು. 'ಪರವರ್ತಿದಾರ್' ಎಂದು ಬಾಯಿಗೆ ಬಂದ ಪ್ರಾಣವನ್ನು ಮುಷ್ಟಿಯಲ್ಲಿಡಿದುಕೊಂಡು ಹಿಂದೆ ತಿರುಗಿನೋಡದೆ, ಬೆಳಗ್ಗಿನ ನಮಾಜಿನ ಹೊತ್ತಿಗೆ ಮನೆಯನ್ನು ಸೇರಿದರು, ಕಾಕಾಗಳು.

ಬೆಳಗಿನ ಸುಳಿಗಾಳಿಯೊಂದಿಗೆ ಸತ್ತದನದ ವಾಸನೆ ಸುತ್ತಮುತ್ತ ಹರಡಲು ಪ್ರಾರಂಭಿಸಿತು. ಕಾಡಿನಿಂದ ನರಿಗಳು ಓಡಿಬರುತ್ತಿದ್ದುದನ್ನು ನೋಡಿದ, ಗದ್ದೆಗೆ ನೀರು ಬಿಡಲು ಹೊರಟಿದ್ದ ಕಾಳೇಗೌಡ, ವಾಸನೆಯ ಎಳೆಯನ್ನೇ ಹಿಡಿದು ಸತ್ತದನದ ಹತ್ತಿರಕ್ಕೆ ಬಂದ. ಅವನ ನರಿಬುದ್ಧಿಗೆ ಎಣ್ಣೆಕಂಡಲ್ಲೇ ಹಡೆಯುವ ಉಪಾಯ ಹೊಳೆದೇ ಬಿಟ್ಟಿತು. ಲಗುಬಗೆಯಿಂದ ಮನೆಗೆ ಹಿಂತಿರುಗಿದವನೇ ಸಿಡಿಮದ್ದಿನ ಉಂಡೆಯನ್ನಿಡಿದುಕೊಂಡು ಯಾರಿಗೂ ತಿಳಿಯದಂತೆ ಗದ್ದೆಯ ಕಡೆಗೆ ದೌಡಾಯಿಸಿದ. ಕೊಳೆತ ದನದ ಗುಂಡಿಗೆಯ ಹತ್ತಿರ ಸಿಡಿಮದ್ದಿನ ಉಂಡೆಯನ್ನು ತುರುಕಿ, ಆ ವಾಸನೆ ತನ್ನ ಮೂಗಿಗೆ ತಾಗಲೇ ಇಲ್ಲವೆಂದು ಭಾವಿಸಿಕೊಂಡು ತನ್ನ ಹೊಲದ ಮೂಲೆಯಲ್ಲಿ ಕಾಯುತ್ತಾ ಕುಳಿತುಕೊಂಡ.

ವಾಸನೆ ಮಾದಳ್ಳಿ ಕಡೆಯಿಂದ ಕುಂತಳ್ಳಿ ಕಡೆಗೆ ಹರಡಲು ಪ್ರಾರಂಭಿಸಿತು. ಕಾಡಿನ ನರಿಗಳ ಜೊತೆಗೆ ಹಂದಿಗಳು ಕೊಳೆತ ಮಾಂಸಕ್ಕೆ ಮುತ್ತಿಗೆ ಹಾಕಿದವು. ದಢಾರ್ ಎಂದು ಸಿಡಿದ ಕೈಮದ್ದಿಗೆ ಕಾಡು ಹಂದಿಯೊಂದರ ಮುಸುಡಿ ಜಜ್ಜಿಹೋಗಿ, ಅದು ಉರುಳಾಡುತ್ತಾ ಕುಂತಳ್ಳಿಯ ಬಸಾಚಾರಿಯ ಗದ್ದೆಯಲ್ಲಿ ಸತ್ತು ಬಿದ್ದಿತು. ಕಾದು ಕುಳಿತಿದ್ದ ಕಾಳೇಗೌಡ, ಭರ್ಜರಿ ಬೇಟೆಯೇ ಸಿಕ್ಕಿತೆಂದು ಪರಮಾನಂದದಿಂದ ಓಡಿಬಂದವನೇ ಗೋಣಿಚೀಲಕ್ಕೆ ಸತ್ತ ಹಂದಿಯನ್ನು ತುಂಬಲು ಕೈ ಹಾಕಿದ. ತನ್ನ ಗದ್ದೆಗೆ ಓಡಿಬಂದು ಸತ್ತು ಬಿದ್ದ ಹಂದಿಯನ್ನೇ ನೋಡುತ್ತಾ ಕುಳಿತಿದ್ದ ಬಸಾಚಾರಿ ತೋಳನಂತೆ ಎಗರಿ ಕಾಳೇಗೌಡನ ಕೈಯನ್ನು ಹಿಡಿದ.

'ಸೂ... ಮಗನೆ ಆ ಕೊಳೆತ ದನದ ಮಾಂಸದೊಳಗೆ ನಿನ್ನಪ್ಪ ಸಿಡಿಮದ್ದನ್ನು ತುರುಕಿದ್ನೇನಲೇ...?'

'ಬೋ... ಮಗ್ನೆ ಆ ಹಂದಿ ಸತ್ ಬಿದ್ದುದ್ದು ನಿನ್ ಅಪ್ನ ಗದ್ದೇಲೇನಲೇ...?'

ಬಾಯಿಗೆ ಬಾಯಿ, ಕೈಗೆ ಕೈ ಹತ್ತಿ, ಗೋಣಿಚೀಲವನ್ನು ಕಿತ್ತಾಡುತ್ತಾ ಒಬ್ಬರ ಮೇಲೆ ಒಬ್ಬರು ಬಿದ್ದು ಉರುಳಾಡುತ್ತಾ ಹೊಡೆದಾಡಲು ಪ್ರಾರಂಭಿಸಿದರು. ಇವರಿಬ್ಬರ ಬೈಗುಳ ಹೊಡೆದಾಟಕ್ಕೆ ಕಿಂಚಿತ್ತೂ ಬೆದರದ ನರಿಗಳು ಈ ವಿಚಿತ್ರವನ್ನೇ ನೋಡುತ್ತಾ ತಮ್ಮ ಮಹಾಭೋಜನವನ್ನು ಮುಂದುವರೆಸಿದ್ದವು.

ಇವರಿಬ್ಬರ ಬೈಗುಳ, ಮಲ್ಲಯುದ್ಧವನ್ನು ನೋಡಿದ ಸುತ್ತಮುತ್ತಲಿನ ಗದ್ದೆಯಲ್ಲಿದ್ದವರು ಓಡಿಬಂದರು. ವಿಷಯ ಎರಡೂ ಊರುಗಳಿಗೆ ತಲುಪಿದ್ದೇ ತಡ, ಬೇಟೆಗೆ ನಾಯಿಗಳು ಮುಗಿಬೀಳುವಂತೆ ರಣೋತ್ಸಾಹದಿಂದ ಪಡ್ಡೆ ಹುಡುಗರು ಕೇಕೆ ಹಾಕುತ್ತಾ ಓಡಿಬಂದರು. ಇಬ್ಬರ ಜಗಳಕ್ಕೆ ಕಾರಣವಾಗಿದ್ದ ಹಂದಿ ಮರೆತು ಹೋಗಿ ತಮ್ಮ ಊರಿನ ಪ್ರತಿಷ್ಠೆಯೇ ಮುಖ್ಯವಾಗಿ ಸತ್ತದನವನ್ನು ಈ ಊರಿನವರು ಆ ಊರಿನ ಹೊಲಕ್ಕೂ, ಆ ಊರಿನವರು ಈ ಊರಿನ ಹೊಲಕ್ಕೂ ದೊಣ್ಣೆಗಳಿಂದ ನೂಕುತ್ತಾ ಕೈ ಕೈ ಮಿಲಾಯಿಸಿ ಅಲ್ಲಿ ರಣರಂಗವೇ ಸೃಷ್ಟಿಯಾಯಿತು.

ಈ ಎರಡು ಹಳ್ಳಿಗಳ ದ್ವೇಷದ ಕಿತ್ತಾಟ ನಿರಂತರವಾಗಿದ್ದುದರಿಂದ, ಅದಕ್ಕೆ ಸ್ಪಷ್ಟ ಕಾರಣವೇ ಬೇಕಿರಲಿಲ್ಲ. ಅಗಮ್ಯವಾಗಿದ್ದ ಅವರ ದ್ವೇಷ ಸಾಮಾನ್ಯವಾಗಿ ವರ್ಷಕ್ಕೊಮ್ಮೆ ನಂದಳ್ಳಿಯಲ್ಲಿ ನಡೆಯುತ್ತಿದ್ದ ಷಷ್ಠಿಹಬ್ಬದ ನಾಡಕುಸ್ತಿಯಲ್ಲಿ ಸ್ಫೋಟಗೊಳ್ಳುತ್ತಿತ್ತು. ಗೆದ್ದ ಮತ್ತು ಸೋತ ತಂಡಗಳ ಕಡೆಯ ಪಡ್ಡೆ ಹುಡುಗರು

ಹೊಡೆದಾಡಿಕೊಳ್ಳದೆ ಸುಸೂತ್ರವಾಗಿ ಮುಕ್ತಾಯವಾದ ಷಷ್ಠಿ ಹಬ್ಬದ ನೆನಪು ಆ ಊರಿನ ಯಾರಿಗೂ ಇಲ್ಲ. ತೆಂಗು, ಬಾಳೆಗೊನೆಯನ್ನು ಕದ್ದು ಸಿಕ್ಕಿಬಿದ್ದು ಬುರುಡೆಗೆ ಬಿಸಿನೀರು ಕಾಯಿಸಿ ಕೊಂಡವರು ತಮ್ಮ ವಿರೋಧಿಗಳ ಗದ್ದೆಗೇ ಬೆಂಕಿಹಾಕಿದ್ದು, ಮಾದಳ್ಳಿಯ ದಲಿತ ಹುಡುಗಿಯನ್ನು ಕುಂತಳ್ಳಿಯ ಶೂದ್ರ ಹುಡುಗ ಕೆಣಕಿದ್ದಕ್ಕೆ ಎರಡೂ ಹಳ್ಳಿಗಳ ತೋಟಗಳು ಸುಟ್ಟು ಹೋದದ್ದು, ಮದುವೆಯ ಕರೆನೆರೆ ಕಾರ್ಯಕ್ರಮದ ಊಟದಲ್ಲಿ ಮಾಂಸಕ್ಕಿಂತ ಮೂಳೆಗಳೆ ಜಾಸ್ತಿ ಇದ್ದುವೆಂದು ಕಿತ್ತಾಡಿಕೊಂಡಿದ್ದು, ಹೀಗೆ ಆ ಎರಡು ಹಳ್ಳಿಗಳ ಸ್ವಾಭಿಮಾನವನ್ನು ಕೆಣಕಲು ಹತ್ತಾರು ಕಾರಣಗಳು ಸ್ವಾಭಾವಿಕವಾಗಿ ಸಿಕ್ಕುತ್ತಿದ್ದವು. ಆ ಹಳ್ಳಿಗಳ ಸುಗ್ಗಿ ಸಂಭ್ರಮಗಳಂತೆಯೇ ಈ ಜಗಳ ಕಾದಾಟಗಳೂ ಸಹ ಅತಿ ಸ್ವಾಭಾವಿಕ ಸಂಪ್ರದಾಯಗಳೇ ಆಗಿ, ದ್ವೇಷ-ಮತ್ಸರದ ಹುಣ್ಣುಗಳು ಹಣ್ಣಾಗಿ, ಕೀವು ತುಂಬಿ ಹೊಡೆದು ರಣವಾಗಿ, ಒಣಗಿ ಕಲೆಯಾಗಿ ಉಳಿಯುತ್ತಿದ್ದವು. ಈ ಪ್ರಕ್ರಿಯೆ ಆಗಾಗ್ಗೆ ಮರುಕಳಿಸಿ ಮಾರಿಹಬ್ಬದ ಮೋಜಿನಂತೆಯೇ ಎಲ್ಲರಿಗೂ ಆಪ್ಯಾಯಮಾನದ ಅನುಭವವಾಗಿತ್ತು. ಯಾವುದಾದರೂ ಚಿಕ್ಕಪುಟ್ಟ ಗಲಾಟೆಯಾದರೂ ಇಲ್ಲದಿದ್ದರೆ ಬದುಕೇ ಬರಡಾದಂತೆ ಆಗುತ್ತಿತ್ತು. ಆದುದರಿಂದಲೇ ಯಾವುದಾದರೂ ಕಾರಣವನ್ನು ಹುಡುಕುತ್ತಲೇ ಇರುತ್ತಿದ್ದರು. ತಮ್ಮದೇ ತಪ್ಪೆಂದು ನೂರಕ್ಕೆ ನೂರರಷ್ಟು ಗೊತ್ತಿದ್ದರೂ ಯಾವ ಕಾರಣಕ್ಕೂ ತಮ್ಮದು ತಪ್ಪೆಂದು ಒಪ್ಪಿಕೊಳ್ಳದೆ, ತಮ್ಮ ಹಳ್ಳಿಯ ಹೆಸರಿಗೆ ಮಸಿಬಳಿಯುವ ಕೆಲಸವನ್ನು ಯಾವ ಕಾರಣಕ್ಕೂ ಒಪ್ಪಿಕೊಳ್ಳದ ಒಗ್ಗಟ್ಟಿನಿಂದಾಗಿ, ಒಣಗಿದ ಗಾಯ ಮತ್ತೆ ಮತ್ತೆ ಹಸಿಯಾಗಿ ಕೀವು ತುಂಬಿಕೊಳ್ಳುತಿತ್ತು. ದಿನ ನಿತ್ಯದ ಕರ್ಮಗಳಂತೆಯೇ ಚಿಕ್ಕ ಪುಟ್ಟ ಜಗಳಗಳು ನಡೆಯುತ್ತಿದ್ದರೂ ಆ ಎರಡೂ ಹಳ್ಳಿಗಳ ನಡುವೆ ಕೊಡುಕೊಳ್ಳುವ ಸಂಬಂಧಗಳೇನೂ ನಿಂತಿರಲಿಲ್ಲ.

ಸತ್ತದನವು ಜಗಳಕ್ಕೆ ನೆಪಮಾತ್ರವಾಗಿದ್ದು, ಹಳೆಯ ಮತ್ಸರಗಳೇ ಮುಖ್ಯವಾಗಿ ಪ್ರತೀಕಾರದಿಂದ ಒಬ್ಬರ ಮೇಲೊಬ್ಬರು ಹೊಡೆದಾಟಕ್ಕೆ ತೊಡಗಿದ್ದರಿಂದ, ಕೊಳೆತ ದನದ ವಾಸನೆ ಯಾರ ಮೂಗಿಗೂ ತಾಗಲೇ ಇಲ್ಲ. ಕುಸ್ತಿ ಅಖಾಡದಲ್ಲಿ ಸೋತು ಮುಖಭಂಗವಾಗಿದ್ದು, ಕ್ರಿಕೆಟ್ ಮ್ಯಾಚಿನಲ್ಲಿ ಮೋಸ ಮಾಡಿದ್ದು, ದೀಪಾವಳಿ ಚೀಟಿಫಂಡಿನ ಹಣ ಕದ್ದುಕೊಂಡು ಹೋದದ್ದು, ಮಗಳಿಗೆ ಚಿತ್ರಹಿಂಸೆ ಕೊಟ್ಟು ತವರಿಗೆ ಕಳುಹಿಸಿದ್ದು, ರಾತ್ರಾನುರಾತ್ರಿ ಕೆರೆಯ ಕೋಡಿ ಒಡೆದು ನೀರನ್ನು ತಮ್ಮ ಗದ್ದೆಗೆ ತಿರುವಿಕೊಂಡಿದ್ದು, ಚುನಾವಣೆಯಲ್ಲಿ ಪರಸ್ಪರ ವಿರೋಧಿ ಬಣಗಳಿದ್ದುದು, ಸೋತ ಪ್ರೇಮ ಪ್ರಕರಣ, ಚಾಡಿ, ಅಸೂಯೆ, ಮತ್ಸರ, ಎಲ್ಲವೂ ಕಲಸುಮೇಲೋಗರವಾಗಿ ಈ ಮುಹೂರ್ತಕ್ಕೆ ಕಾದುಕುಳಿತಂತೆ ಕಾದಾಡತೊಡಗಿದರು. ಇವರ ಎಳೆದಾಟಕ್ಕೆ ದನದ ಅಸ್ಥಿಪಂಜರವೆಲ್ಲಾ ಕಳಚಿ, ಕೊಳೆತ ಮಾಂಸವು ಚೆಲ್ಲಾಪಿಲ್ಲಿಯಾಗಿ ಹರಡಿ, ಸಹಿಸಲಾರದ ವಾಸನೆ ಎರಡೂ ಹಳ್ಳಿಗಳ ಮನೆಗಳಿಗೆ ಹರಡಿ, ಕೈಲಾಗದೆ ಕುಳಿತಿದ್ದ ಮುದಿಜೀವಿಗಳ ಮೂಗಿಗೆ ತಾಗಿತು. ತಮ್ಮ ಕಣ್ಣು ಮುಂದೆಯೇ ಬದಲಾದ ಕಾಲದ ಗತಿಯ ಬಗ್ಗೆ ದಿಗ್ಭ್ರಾಂತರಾಗಿ ಕುಳಿತರು. ದನದ ಕಳೇಬರವನ್ನು ಕಿತ್ತಾಡುತ್ತಿದ್ದ ಮಾನವರ ಹೀನ ಅವಸ್ಥೆಯನ್ನು ಬೆರಗಿನಿಂದ ನೋಡುತ್ತಾ ತೋಳಗಳು ಕಾಡಿನಂಚಿನಲ್ಲಿ ಜೊಲ್ಲು ಸುರಿಸುತ್ತಾ ನಿಂತುಕೊಂಡವು.

ದಾಯಾದಿ ಮತ್ಸರವನ್ನು ಸಾಧಿಸುವ ಸುವರ್ಣಾವಕಾಶವನ್ನು ಹಾಳುಮಾಡಿ ಕೊಳ್ಳದ ಮಾಂತೇಗೌಡನ ಮಕ್ಕಳು ಸುದ್ದಿಮುಟ್ಟಿಸಿದ ಕೂಡಲೇ ಪೊಲೀಸಿನವರು ಬಂದರು. ಎರಡೂ ಕಡೆಯ ನಾಲ್ಕೈದು ಮಂದಿಯ ತಲೆಯೊಡೆದು, ಹತ್ತಾರು ಜನಕ್ಕೆ ಮೈಕೈ ಗಾಯವಾಗಿತ್ತು. ಎರಡೂ ಕಡೆಯವರನ್ನು ದಸ್ತಗಿರಿ ಮಾಡಲಾಯಿತು. ಸತ್ತದನವನ್ನು ಅಲ್ಲಿ ಹಾಕಿ ಈ ಗಲಾಟೆಗೆ ಕಾರಣರಾದ ಶಿವೇಗೌಡನ ಮಕ್ಕಳನ್ನೂ ದಸ್ತಗಿರಿ ಮಾಡಲಾಯಿತು!

ಹಸು ಸತ್ತ ದಿನದಿಂದಲೇ ಮಂಕಾಗಿ ಮೂಲೆ ಸೇರಿದ ಶಿವೇಗೌಡನ ಕಿರಿಸೊಸೆ, ತಾನೆ ಕೈಯಾರೆ ಮಾಡಿದ ಗೋಹತ್ಯೆಯ ಪಾಪ ತನಗೆ ಹುಟ್ಟುವ ಮಕ್ಕಳನ್ನು ಕಾಡದೇ ಬಿಡುವುದಿಲ್ಲವೆಂದು ಆಘಾತಕ್ಕೊಳಗಾಗಿ ನೇಣು ಬಿಗಿದುಕೊಂಡು ಸತ್ತಳು. ಸೊಸೆಯ ಸಾವಿಗೆ ಅತ್ತೆ ಮಾವಂದಿರೇ ಕಾರಣವೆಂದು ಹಬ್ಬಿದ ಸುದ್ದಿಯಿಂದಾಗಿ ಅವರಿಬ್ಬರೂ ಜೈಲು ಪಾಲಾದರು.

ಕಾಲ ಉರುಳಿತು. ಆದರೆ ಗೋಹತ್ಯೆ ದೋಷ ಆ ಎರಡೂ ಹಳ್ಳಿಗಳಿಗೆ ಶಾಪವಾಗಿ ಬಡಿದಂತೆ, ಅವೆರಡೂ ಮತ್ತೆ ಒಂದಾಗಲಿಲ್ಲ, ಆ ಎರಡು ಹಳ್ಳಿಗಳ ನಡುವೆ ಮದುವೆಯ ಸಂಬಂಧಗಳೇ ನಿಂತುಹೋದವು. ಸತ್ತ ದನದ ಅಸ್ಥಿಪಂಜರ ಮಣ್ಣಾಗಿ ಎಷ್ಟೋ ಕಾಲವಾದರೂ ಆ ಜಾಗದಲ್ಲಿ ರಣ ಕಾಯ್ದುಕುಳಿತಿದೆ ಎಂದು ಯಾರೂ ಅಲ್ಲಿ ಸುಳಿಯುವುದಿಲ್ಲ. ಕಿರಿಸೊಸೆ ನೇಣು ಹಾಕಿಕೊಂಡ ಜಾಗದಲ್ಲಿ ಅಮಾವಾಸ್ಯೆ - ಹುಣ್ಣಿಮೆ ದಿನಗಳಂದು ಅವಳ ಆತ್ಮ ಪಿಶಾಚಿಯಾಗಿ ಬಂದು ಸತ್ತದನದ ಹೆಸರಿಡಿದು ಕರೆಯುತ್ತದೆ ಎಂದೂ, ಅದು ಎಳೆ ಮಕ್ಕಳ ಕಿವಿಗೆ ಬೀಳ ಬಾರದೆಂದು ಮಾದಳ್ಳಿಯ ಶಿವಾಚಾರದ ಕುಟುಂಬದವರು ಹೆದರಿ ಮಕ್ಕಳನ್ನು ಬೇಗ ಮಲಗಿಸುತ್ತಾರೆ. ಇದೆಲ್ಲಕ್ಕೂ ತನ್ನ ದಾಯಾದಿಗಳು ಮಾಡಿಸಿದ ಮಾಟವೇ ಕಾರಣವೆಂದು ನಂಬಿ ಹೆದರಿಕೆಯಿಂದ ಹಾಸಿಗೆ ಹಿಡಿದ ಶಿವೇಗೌಡ ರಕ್ತದ ಒತ್ತಡ ಮತ್ತು ಸಕ್ಕರೆ ಖಾಯಿಲೆಯಿಂದ ಸತ್ತುಹೋದನು. ಆ ಎರಡೂ ಕುಟುಂಬಗಳು ಒಬ್ಬರ ಮೇಲೊಬ್ಬರು ಮಾಟ ಮಾಡಿಸುತ್ತಾ, ಮಾಟಕೀಳಿಸುತ್ತಾ ಭಯಗ್ರಸ್ತರಾಗಿ ಬದುಕುತ್ತಿದ್ದಾರೆ. ಕೃಷ್ಣಾಪುರದ ಹೊಸಪೀಳಿಗೆ ಸತ್ತದನವನ್ನು ಎತ್ತುವ, ಹೆಣದ ಗುಂಡಿ ತೋಡುವ ಮತ್ತು ಜೀತಮಾಡುವ ಪರಂಪರಾಗತ ಶಾಪದಿಂದ ಬಿಡುಗಡೆಯನ್ನು ಹೊಂದಿ, ಮಾದಳ್ಳಿಯ ಪುರಾತನ ಪರಂಪರೆಯ ಕಬ್ಬಿಣದ ಚೌಕಟ್ಟನ್ನು ದಾಟಿ ಹೊರಬಂದಿದೆ.

**ಭದ್ರಪ್ಪ. ಶಿ. ಹೆನ್ಲಿ**
೧೯೯೯ "ಶುಭ" ೨ನೆ ತಿರುವು "ಬಿ"ಬಡಾವಣೆ
ರಾಮಕೃಷ್ಣನಗರ, ಮೈಸೂರು- ೫೭೦೦೨೨
Email : bshenly@gmail.com

## ಶುದ್ಧಹಾಲು ಉತ್ಪಾದನೆ ಮಾಹಿತಿ




## "ಎಲ್ಲಿಗೆ ಹೊರಡುವೆ"

ನಿನ್ನ ಊರಲ್ಲಿ ನಿನ್ನ ಬೀದಿಯಲ್ಲಿ ನೀನೇ ಅಪರಿಚಿತ
ಯಾರು ನಿನ್ನ ಗುರುತಿಸುವರಿಲ್ಲ ಹೊರಡು ಇಲ್ಲಿಂದ

ಎಲ್ಲರೊಳಗಿದ್ದು ಏಕಾಂಗಿಯಾಗಿರುವೆ ನೀನು
ಯಾರು ನಿನ್ನ ಕೇಳುವರಿಲ್ಲ ಹೊರಡು ಇಲ್ಲಿಂದ

ನೀ ನಡೆದ ಹಾದಿಗುಂಟ ಕಲ್ಲುಮುಳ್ಳಿನ ಹಾಸಿಗೆ
ನಿನ್ನ ನೇಹಮಾಲೆ ಕೇಳುವರಿಲ್ಲ ಹೊರಡು ಇಲ್ಲಿಂದ

ಈ ಮಣ್ಣಿನ ಕಣಕಣದಲಿ ನಿನ್ನ ಬೆವರಿನ ಸುವಾಸನೆ
ಹನಿನೀರೂ ನಿನಗೆ ಸಿಗುವದಿಲ್ಲ ಹೊರಡು ಇಲ್ಲಿಂದ

ಇಲ್ಲಿ ಬರೀ ಕೃತಕ ನಗುವಿನ ಮುಖವಾಡಧಾರಿಗಳು
ನಿಜನೋವಿಗೆ ಸ್ಪಂದಿಸುವರಿಲ್ಲ ಹೊರಡು ಇಲ್ಲಿಂದ

ಅದೆಷ್ಟು ಜನರಿಗಂತ ಆತ್ಮಕ್ಕಾದ ಗಾಯ ತೋರುವೆ
ಕಟುಕರ ಸಂತೆಯಿದು, ಸುಮ್ಮನೆ ಹೊರಡು ಇಲ್ಲಿಂದ

ಮನದ ಮಾತಕೇಳಿ ಎಲ್ಲಿಗೆ ಹೊರಡುವೆ
ದುಃಖಿ ದಮನಿತರ ಮುಖವಾಣಿಯಾಗು ಇಲ್ಲಿಂದ

**ಅಶ್ಫಾಕ್ ಪೀರಜಾದೆ**
ಎಸ್. ಆರ್. ನಗರ, ಧಾರವಾಡ

# ಗಿರೀಶ ಕಾರ್ನಾಡರ ನೆನೆಯುತ್ತಾ...

೧೯೬೦ರ ಆರಂಭದಲ್ಲಿರಬೇಕು, ನಾನು ಮೊದಲು ಗಿರೀಶ ಕಾರ್ನಾಡನನ್ನು ಧಾರವಾಡದಲ್ಲಿ ಭೇಟಿಯಾದದ್ದು. ಆಗ ನನಗೆ ಇಪ್ಪತ್ತಮೂರು ವರ್ಷ ವಯಸ್ಸು. ಧಾರವಾಡದ ಕರ್ನಾಟಕ ಕಾಲೇಜಿನಲ್ಲಿ ೧೯೫೯ರ ಜೂನ್ ತಿಂಗಳ ಮಧ್ಯಭಾಗದಲ್ಲಿ ಇಂಗ್ಲಿಷ್ ಲೆಕ್ಚರರ್ ಆಗಿ ಸೇರಿದ್ದೆ. ನನಗಿಂತ ಎರಡು ವರ್ಷಗಳಷ್ಟು ಚಿಕ್ಕವನಾಗಿದ್ದ ಗಿರೀಶ್ ಅದೇ ಕಾಲೇಜಿನಲ್ಲಿ ಅದರ ಹಿಂದಿನ ವರ್ಷ ಇಂಗ್ಲಿಷ್ ಮತ್ತು ಸಂಖ್ಯಾಶಾಸ್ತ್ರದಲ್ಲಿ ಪದವಿ ಪಡೆದು ಮೊದಲ ದರ್ಜೆಯಲ್ಲಿ ಪಾಸಾಗಿ ಮುಂದಿನ ಸ್ನಾತಕೋತ್ತರ ಶಿಕ್ಷಣಕ್ಕೆಂದು ಮುಂಬೈ ವಿಶ್ವವಿದ್ಯಾಲಯಕ್ಕೆ ಸೇರಿದ್ದರು. ಮತ್ತು ರೋಡ್ಸ್ ಸ್ಕಾಲರ್‌ಶಿಪ್‌ಗೆ ಅರ್ಜಿ ಹಾಕಿ ಅದರ ಫಲಿತಾಂಶಕ್ಕಾಗಿ ಕಾಯುತ್ತಿದ್ದರು.

ನನಗೆ ಧಾರವಾಡ ಸಂಪೂರ್ಣ ಹೊಸ ಪರಿಸರವಾಗಿತ್ತು. ಅಲ್ಲಿಯವರೆಗೂ ನಾನು ಹಳೆಯ ಮೈಸೂರಿನ ಅರಸರ ರಾಜ್ಯದಲ್ಲಿ ಬದುಕು ಕಳೆದಿದ್ದೆ. ಮೊದಲ ಹದಿನೇಳು ವರ್ಷ ಕೋಲಾರದಲ್ಲಿ ಶಾಲೆಗೆ ಹೋಗಿ ಮೆಟ್ರಿಕ್ ಮುಗಿಸಿ, ಎರಡು ವರ್ಷ ಕಾಲೇಜು ಓದೂ ಮುಗಿಸಿದ್ದೆ. ನಂತರ ಆರು ವರ್ಷಗಳ ಕಾಲ ಬೆಂಗಳೂರಿನಲ್ಲಿ. ಅದರಲ್ಲಿ ಸೆಂಟ್ರಲ್ ಕಾಲೇಜಿನಲ್ಲಿ ನಾಲ್ಕು ವರ್ಷಗಳ ಕಾಲ ಬಿ.ಎ. ಆನರ್ಸ್ ಮತ್ತು ಎಂ. ಎ. ಮಾಡಿದ ಜೀವನ ಸ್ಮರಣಾರ್ಹ. ಹಾಗೆಯೇ ಮತ್ತೆರಡು ವರ್ಷಗಳು ಕಾಲೇಜೊಂದರಲ್ಲಿ ಉಪನ್ಯಾಸಕನಾಗಿ ಕೆಲಸ ಮಾಡಿದ್ದು ನಿಜವಾಗಿ ಮರೆಯಬೇಕಾದಂತಹುದು. ನನಗೆ ಈಗಲೂ ಆ ಕಾಲೇಜು ಒಂದು ಡಿಕ್ಟೇಷನ್ ಕಾರ್ಖಾನೆಯಂತಲೇ ನೆನಪಾಗುತ್ತದೆ. ಆದ್ದರಿಂದ ಬೆಂಗಳೂರಿನ ಕಾಲೇಜಿನಲ್ಲಿ ನಾನು ಅದೆಷ್ಟು ಬೇಜಾರಿಸಿಕೊಂಡಿದ್ದೆ ಎಂದು ಬೇರೆ ಹೇಳಬೇಕಿಲ್ಲ. ಆದ್ದರಿಂದ ಒಮ್ಮೆ ಹೇಗಾದರೂ ಹೊರಗೆ ಬರಬೇಕೆಂದು ಬಯಸುತ್ತಿದ್ದೆ.

ಅದಕ್ಕೆ ಸರಿಯಾಗಿ, ಧಾರವಾಡದ ಕರ್ನಾಟಕ ಕಾಲೇಜಿನಲ್ಲಿ ಇಂಗ್ಲಿಷ್ ಲೆಕ್ಚರರ್ ಸ್ಥಾನಕ್ಕೆ ಜಾಹೀರಾತನ್ನು ಕರೆಯಲಾಗಿದ್ದು ಅದಕ್ಕೆ ಅರ್ಜಿ ಹಾಕಿದೆ. ಸಂದರ್ಶನವೂ ನಡೆದು ಆ ಹುದ್ದೆಗೆ ಆಯ್ಕೆಯಾದೆ. ಏನೂ ಮುಂದಾಲೋಚನೆ ಮಾಡದೆ ಕೂಡಲೇ ಬೆಂಗಳೂರಿನ ಕಾಲೇಜಿನಲ್ಲಿ ನನ್ನ ಎರಡು ವರ್ಷಗಳ ಲೆಕ್ಚರರ್ ಕೆಲಸಕ್ಕೆ ರಾಜೀನಾಮೆಯಿತ್ತೆ. ಅಲ್ಲಿಂದ ಧಾರವಾಡಕ್ಕೆ ಹೋದ ನನಗೆ ಅಲ್ಲಿ ಸ್ನೇಹಿತರು, ಪರಿಚಿತರು ಯಾರೂ ಇರಲಿಲ್ಲ. ಆದರೂ ಧಾರವಾಡ ವೆಂದರೆ ಕರ್ನಾಟಕದ ಸಾಹಿತ್ಯಿಕ ಮತ್ತು ಸಾಂಸ್ಕೃತಿಕ ರಾಜಧಾನಿಯೆಂಬ ಖ್ಯಾತಿ ಪಡೆದಿದೆಯೆಂದು ಕೇಳಿ ತಿಳಿದಿದ್ದೆ. ಅದು ನಾನೂ ಓದಿಕೊಂಡಿದ್ದ ಕೆಲವು ಸಾಹಿತಿಗಳಲ್ಲದೆ, ಹಲವಾರು ಸಾಹಿತಿಗಳ ನೆಲೆವೀಡಾಗಿತ್ತು. ಕೊಂಚ ಪರಿಚಯಿಸಿಕೊಂಡಿದ್ದ ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತದ ತವರೂರಾಗಿತ್ತು. ಹೀಗಾಗಿ ಕರ್ನಾಟಕ ಕಾಲೇಜು ಬೆಂಗಳೂರಿನ ನನ್ನ ಡಿಕ್ಟೇಷನ್ ಕಾರ್ಖಾನೆಯ ನಿಷ್ಕ್ರಿಯ 'ಬೋಧಕ' ಜೀವನವನ್ನು ಸಂಪೂರ್ಣವಾಗಿ ಮರೆಸಿ ಆನಂದಪರವಶನನ್ನಾಗಿ ಮಾಡಿತು. ಹಿಂದೊಮ್ಮೆ ಹಳೆಯ ಮದ್ರಾಸು ಮತ್ತು ದಕ್ಷಿಣ ಭಾರತದ ಮರಾಠ ರೈಲ್ವೆಯ ಹೆಡ್ ಕ್ವಾರ್ಟರ್ಸ್ ಆಗಿದ್ದ ಆ ಕಾಲೇಜಿನ ಭವ್ಯವಾದ ಮುಖ್ಯ ಕಟ್ಟಡ, ಮುಂದೆ ಹರಡಿಕೊಂಡಿರುವ ವಿಶಾಲವಾದ ಕ್ರೀಡಾಂಗಣ ದಲ್ಲಿ ಎದ್ದು ನಿಂತ ಇತರ ಕಟ್ಟಡಗಳು, ಸಮೃದ್ಧವಾದ ಹಸಿರು, ಅಲೆ ಅಲೆಯಾಗಿ ಹರಡಿರುವ ಭೂಪ್ರದೇಶ. ಅದೆಲ್ಲಕ್ಕಿಂತ ಮಿಗಿಲಾಗಿದ್ದು ಅಲ್ಲಿನ ಜನ, ಅವರಾಡುವ ಮಾತು ನನ್ನನ್ನು ಸಂಪೂರ್ಣವಾಗಿ ಮೋಹಗೊಳಿಸಿತು.

ನನ್ನ ನೆನಪು ಸರಿಯಿದ್ದರೆ, (ಈ 'ರೆ' ಎನ್ನುವ ವಿಷಯ ನೆನಪುಗಳ ಸಂದರ್ಭದಲ್ಲಿ ಯಾವಾಗಲೂ ಇದ್ದೇ ಇರುತ್ತದೆ!) ನಾನು ಗಿರೀಶನ ಮೊದಲು ಭೇಟಿಯಾದ್ದು ೧೯೬೦ರ ಆರಂಭದಲ್ಲಿ. ಇಂಗ್ಲಿಷ್ ವಿಭಾಗದಲ್ಲಿದ್ದ ನನ್ನ ಸಹೋದ್ಯೋಗಿ ಅರೋರಾ ಫಿಗೆರೆಡೋ ಗಿರೀಶನನ್ನು ನನಗೆ ಪರಿಚಯಿಸಿದರು. ಅವರಿಬ್ಬರೂ ಒಂದೇ ಶಾಲೆಯಲ್ಲಿ (ಬಾಸೆಲ್ ಮಿಷನ್) ಒಟ್ಟಿಗೆ ಓದಿದವರು. ಅವರಿಬ್ಬರಿಗೂ ಸಮಾನ ಆಸಕ್ತಿಗಳಿದ್ದವು. ಕೊಂಕಣಿ ಭಾಷೆಗೆ ಸಂಬಂಧಪಟ್ಟಂತೆ ಸಾಂಸ್ಕೃತಿಕವಾದ ವಿಷಯಗಳನ್ನು ಹಂಚಿಕೊಳ್ಳುತ್ತಿದ್ದರು. ಮುಂಬೈಗೂ ಧಾರವಾಡಕ್ಕೂ ಓಡಾಡುತ್ತಿದ್ದ ಗಿರೀಶ ಪರಿಚಯವಾದ ಕೆಲವೇ ದಿನಗಳಲ್ಲಿ ನನಗೆ ಆಪ್ತರಾದರು. ಒಮ್ಮೆ ನನ್ನನ್ನು ಅವರ ಮನೆಗೆ ಕರೆದುಕೊಂಡು ಹೋಗಿ ಮನೆಯವರಿಗೆ ಪರಿಚಯಿಸಿದರು. ಮನೆಯಲ್ಲಿ ಊಟ ಮಾಡಿ ಒಂದು

ಎಂ. ಎಸ್. ಪ್ರಭಾಕರ

**ವಿ. ಎಸ್. ನೈಪಾಲ್ ನ *ಇಂಡಿಯ, ಎ ವೂಂಡೆಡ್ ಸಿವಿಲಿಜೇಷನ್* ಪುಸ್ತಕವನ್ನು ಕುರಿತು ಮಾತನಾಡುವಾಗ ಅವರ ಮಾತು ಅಪವ್ಯಾಖ್ಯಾನಗೊಂಡು ಕ್ಲೀಷೆಯಾಗುವುದಕ್ಕೆ ಮುಂಚೆ ಗಿರೀಶ್ ಸತ್ಯವನ್ನೇ ನುಡಿದಿದ್ದರು. ನೈಪಾಲ್‌ರ ಬಗ್ಗೆ ಮಾತನಾಡುವುದಕ್ಕೆ ಮುಂಚೆಯೂ ಭಾರತದಲ್ಲ ಹಿಂದೂ ಮುಸ್ಲಿಂ ಸಂಬಂಧಗಳು ಕಲುಷಿತವಾದಾಗಲೆಲ್ಲ, ಎಲ್ಲಕ್ಕಿಂತ ಹೆಚ್ಚಾಗಿ ಇಂದು ನಾವು ಬದುಕುತ್ತಿರುವ ಸ್ಥಿತಿಯಲ್ಲಿರುವವರೆಗೆ, ನಡೆಯುತ್ತಿದ್ದ ಪ್ರತಿಭಟನೆಗಳಲ್ಲ ಅವರು ಕ್ರಿಯಾಶೀಲರಾಗಿದ್ದರು. ಹುಬ್ಬಳ್ಳಿಯ ಈದ್ಗಾ ಮೈದಾನದ ಪ್ರಕರಣದ ಸಂದರ್ಭದಲ್ಲ, ಬಾಬಾ ಬುಡನ್‌ಗಿರಿಯ ಗಲಾಟೆಯ ಸಂದರ್ಭದಲ್ಲ ಅವರ ಸಾಲು ಪ್ರತಿಭಟನೆಗಳು ಅಂತರರಾಷ್ಟ್ರೀಯ ಸುದ್ದಿಯಾಗಿಲ್ಲದಿರಬಹುದು. ಏಕೆಂದರೆ ಅವರು ನೊಬೆಲ್ ಪ್ರಶಸ್ತಿ ವಿಜೇತರಲ್ಲವಲ್ಲ!**



ಇಡೀ ಮಧ್ಯಾಹ್ನವನ್ನು ಮಾತು, ಹರಟೆಯಲ್ಲಿ ಕಳೆದಿದ್ದು ಈಗಲೂ ನೆನಪಿನಲ್ಲಿದೆ. ಮುಖ್ಯವಾಗಿ ನಾವು ಓದಿ, ಖುಷಿಪಟ್ಟ ಪುಸ್ತಕಗಳನ್ನು ಕುರಿತಂತೆ ನಮ್ಮ ಮಾತು ಹರಡಿತ್ತು. ಆಗಲೇ ನನಗೆ ಸ್ಪಷ್ಟವಾದ ವಿಷಯವೆಂದರೆ, ಅವರು ನನಗಿಂತ ಎರಡು ವರ್ಷ ಚಿಕ್ಕವರಾದರೂ ಅವರ ಓದಿನ ಹರಹು ವಿಶಾಲವಾಗಿತ್ತು. ಅವರು ನನಗೆ ರಾಬರ್ಟ್ ಪೆನ್ ವಾರೆನ್ ಬರೆದಿರುವ *ಆಲ್ ದಿ ಕಿಂಗ್ಸ್ ಮೆನ್* ಪುಸ್ತಕವನ್ನು ಕೊಟ್ಟರು. ಅದನ್ನು ಓದಿದ ಮೇಲೆ ನಾನು ಮಂತ್ರಮುಗ್ಧನಾದೆ. ಅಷ್ಟೇ ಅಲ್ಲದೆ ಅವರು ಬಿಡಿಸಿರುವ ಇಂಗ್ಲಿಷ್ ಸಾಹಿತಿಗಳ ರೇಖಾಚಿತ್ರಗಳನ್ನು, ಅದರೊಂದಿಗೆ ಅವರಿಂದ ಪಡೆದುಕೊಂಡ ಹಸ್ತಾಕ್ಷರವನ್ನೂ ತೋರಿಸಿದರು. ಅಂತಹ ಕ್ರಿಯೆಗಳ ಹಿಂದಿರುವ ನಾಜೂಕುತನ ಮತ್ತು ಮುಂದೊಡಗು ಮತ್ತು ಅವರು ನೀಡಿದ ಪುಸ್ತಕದ ಉಡುಗೊರೆ ನೀಡಿದ್ದು ನನಗೆ ಅತ್ಯಂತ ಖುಷಿ ಕೊಟ್ಟಿತು. ಇದೆಲ್ಲಕ್ಕಿಂತ ಹೆಚ್ಚಾಗಿ ನನಗೆ ಆ ಯೌವ್ವನದ ದಿನಗಳ ಸ್ನೇಹ ಮತ್ತು ಅವನ ಪ್ರತಿಭೆಯನ್ನು ಅನುಭವಿಸುವಂತಾದದ್ದು ಎಲ್ಲಕ್ಕಿಂತ ಮಿಗಿಲಾದ್ದು.

ದೀರ್ಘ ಅಂತರಗಳಿದ್ದರೂ ಕೂಡ ಅರವತ್ತು ವರ್ಷಗಳ ನಮ್ಮ ಸಾಂಗತ್ಯ ಮತ್ತು ಸ್ನೇಹ ಆರಂಭವಾದದ್ದು ಹೀಗೆ. ಈ ನಮ್ಮ ಭೇಟಿಯ ಕೆಲವೇ ತಿಂಗಳುಗಳ ನಂತರ ಗಿರೀಶನಿಗೆ ರೋಡ್ಸ್ ಸ್ಕಾಲರ್‌ಶಿಪ್ ಸಿಕ್ಕಿ, ಇಂಗ್ಲೆಂಡಿಗೆ ತೆರಳಿದ. ಅದಾದ ನಂತರ ಗಿರೀಶನನ್ನು ನನಗೆ ಪರಿಚಯಿಸಿದ್ದ ಅರೋರಾ ಕೂಡ ಮದುವೆಯಾಗಿ ಧಾರವಾಡ ಬಿಟ್ಟು ಪಾಟ್ನಾಗೆ ತೆರಳಿ ಮಾರಿಯಾ ಅರೋರಾ ಕೂಟೋ ಆದಳು. ಅಲ್ಲಿ ಅವಳ ಗಂಡ ಇಂಡಿಯನ್ ಅಡ್ಮಿನಿಸ್ಟ್ರೇಟಿವ್ ಸರ್ವೀಸ್‌ನಲ್ಲಿ ಅಧಿಕಾರಿಯಾಗಿ ಕಾರ್ಯ ನಿರ್ವಹಿಸುತ್ತಿದ್ದರು. ನಾನೂ ಕೂಡ ೧೯೬೧ರಲ್ಲಿ ಕರ್ನಾಟಕ ಕಾಲೇಜಿಗೆ ವಿದಾಯ ಹೇಳಿ ಗುವಾಹತಿ ವಿಶ್ವವಿದ್ಯಾಲಯಕ್ಕೆ ತೆರಳಿದೆ. ಏನಾದರೂ ಈ ಜೀವದ ಗೆಳೆಯರನ್ನು ದೊರಕಿಸಿಕೊಟ್ಟ ಧಾರವಾಡದ ನಂಟು ನನ್ನ ಜೀವನದ ಬಹುಮುಖ್ಯ ಭಾಗವಾಗಿದೆ. ಗುವಾಹತಿಯಲ್ಲಿ ಪಾಠ ಮಾಡುತ್ತಿದ್ದಾಗ ನಾನೂ ಒಂದು ರಕಮಿನ ಕನ್ನಡದ ಲೇಖಕ ಎಂದೆನಿಸಿಕೊಂಡೆ. ತೆಳ್ಳಗಿನ ನನ್ನ ಮೂರು ಪುಸ್ತಕಗಳನ್ನು ಧಾರವಾಡದ ಮನೋಹರ ಗ್ರಂಥಮಾಲೆ ಪ್ರಕಟಿಸಿತು. ನನ್ನ ಮೊದಲನೆಯ ಪುಸ್ತಕ, ಒಂದು ತೊಲ ಪುನುಗು ಮತ್ತು ಇತರ ಕತೆಗಳು ಪ್ರಕಟವಾದದ್ದು ೧೯೬೯ರಲ್ಲಿ. ಆ ವೇಳೆಗಾಗಲೇ ಭಾರತೀಯ ನಾಟಕ ಕ್ಷೇತ್ರದಲ್ಲಿ ಹೊಸ ಶಕೆಯನ್ನು ಹುಟ್ಟುಹಾಕಿದ ಗಿರೀಶರ ಯಯಾತಿ ಮತ್ತು ತುಘಲಕ್ ನಾಟಕಗಳು ಪ್ರಕಟವಾಗಿದ್ದು ಅವರ ಹೊಸ ವೃತ್ತಿಯಲ್ಲಿ ಪ್ರಾಮುಖ್ಯತೆಯನ್ನು ಪಡೆದಿದ್ದರು. ನಾನಂತೂ ಕನ್ನಡದಲ್ಲಿ ಮತ್ತೇನೂ ಬರೆಯಲಿಲ್ಲ. ಸುಮಾರು ಐವತ್ತು ವರುಷಗಳು ಕರ್ನಾಟಕದ ಹೊರಗೇ ಕಳೆದೆ. ಆದರೂ ಮನೋಹರ ಗ್ರಂಥಮಾಲೆ, ಅದರ ಸ್ಥಾಪಕ ಪ್ರಕಾಶಕ ಜಿ. ಬಿ. ಜೋಷಿ, ಮತ್ತು ಅದರ ಸಾಹಿತ್ಯ ಸಲಹೆಗಾರ ವಿಮರ್ಶಕ ಕೀರ್ತಿನಾಥ ಕುರ್ತಕೋಟಿ, ಅರೋರಾ ಮತ್ತು ಗಿರೀಶ – ಇವರೆಲ್ಲರನ್ನು ಕೂಡಿದ ಧಾರವಾಡದ

> **ನೇರ**
>
> ಭ್ರಮರವೆಂದೂ
> ತಪ್ಪಿಯೂ ಮುತ್ತ
> ನೀಡುವುದಿಲ್ಲ ಮುಳ್ಳಿಗೆ
> ಕೊಟ್ಟರೆ – ನೇರ
> ಹೂವಿಗೆ !
>
> **ವ. ಉಮೇಶ್ ಕಾರಂತ**
> ಮಂಗಳೂರು – ೫೭೫ ೦೦೧

ಜಗತ್ತಿನ ಅಂಟು ಮತ್ತು ನಂಟು ದುರ್ಬಲ ವಾಗಲಿಲ್ಲ. ಇವರುಗಳಲ್ಲಿ ಈಗ ಉಳಿದಿರುವವರು ಮತ್ತು ಕಾಯುತ್ತಿರುವವರು ನಾನು ಮತ್ತು ಅರೋರಾ.

ಅನೇಕ ವರ್ಷಗಳ ಕಾಲ ಗಿರೀಶ ಮತ್ತು ನಾನು ಯಾವುದೇ ರೀತಿ ಸಂಪರ್ಕದಲ್ಲಿರಲಿಲ್ಲವಾದರೂ, ನಮ್ಮ ಸ್ನೇಹವಂತೂ ಗಟ್ಟಿಯಾಗಿಯೇ ಇತ್ತು. ಜನವರಿ ೧೯೬೧ರಿಂದ ಡಿಸೆಂಬರ್ ೧೯೭೫ರವರೆಗೆ ನಾನು ಗುವಾಹತಿ ವಿಶ್ವವಿದ್ಯಾಲಯದಲ್ಲಿದ್ದಾಗ ನನಗೆ ಗಿರೀಶನ ಜೊತೆ ಸಂಪರ್ಕವಿರಲಿಲ್ಲ. ನಂತರ ಸುಮಾರು ಎಂಟು ವರ್ಷಗಳ ಕಾಲ (೧೯೭೫–೮೩) ನಾನು ಮುಂಬೈನಲ್ಲಿ (ಅಂದಿನ ಬಾಂಬೆ) ವಾಸವಾಗಿದ್ದು ಇಕನಾಮಿಕ್ ಅಂಡ್ ಪೊಲಿಟಿಕಲ್ ವೀಕ್ಲಿಯ ಸಂಪಾದಕ ಮಂಡಲಿಯಲ್ಲಿ ಕೆಲಸ ಮಾಡುತ್ತಲಿದ್ದೆ. ಆಗ ನಮ್ಮ ಹಳೆಯ ಸ್ನೇಹ ಮತ್ತೆ ಚಿಗುರಿತು. ಒಮ್ಮೆ ಅಲ್ಲಿ ಆಸ್ಪತ್ರೆಯಲ್ಲಿದ್ದಾಗ ನನ್ನನ್ನು ನೋಡಲು ಗಿರೀಶ್ ಬಂದಾಗ (ಆಗ್ಗೆ ಅವರು ಸಿನಿಮಾದಲ್ಲಿ ಅಭಿನಯಿಸುತ್ತಿದ್ದರಿಂದ) ಆಸ್ಪತ್ರೆಯಲ್ಲಿ ನನ್ನ ದೊಡ್ಡಸ್ತಿಕೆ ಜಾಸ್ತಿಯಾಯಿತು ಒಮ್ಮೆ ಬಾಂದ್ರಾ ಫ್ಲಾಟ್‌ನಲ್ಲಿ ಅವನ ಹೆಂಡತಿ, ಮಕ್ಕಳನ್ನೂ ಭೇಟಿಯಾಗಿದ್ದೆ. ನಂತರದ ಘಟನೆಗಳು ಮರೆತು ಹೋಗಿವೆ. ಮತ್ತೆ ೧೯೮೩ರಿಂದ ಮಾರ್ಚ್ ೨೦೧೦ರವರೆಗೆ ನಾನು ಗುವಾಹತಿ ಮತ್ತು ವಿದೇಶದಲ್ಲಿದ್ದಾಗ ನಮ್ಮಿಬ್ಬರ ಮಧ್ಯೆ ಯಾವುದೇ ಸಂಪರ್ಕವಿರಲಿಲ್ಲ. ಆದರೆ ನನ್ನ ೭೬ನೇ ವಯಸ್ಸಿನಲ್ಲಿ ಕೋಲಾರಕ್ಕೆ ನನ್ನ ತಂದೆ ಕಟ್ಟಿದ ಮನೆಯಲ್ಲಿ ನನ್ನ ಕೊನೆಗಾಲವನ್ನು ಕಳೆಯಲು ಹಿಂತಿರುಗಿ ಬಂದ ಮೇಲೆ ನಮ್ಮ ಸಂಪರ್ಕಗಳು ಮತ್ತೆ ಹಿಂದಿನ ಸ್ಥಿತಿಗೆ ಬಂದವು. ಈ ಮನೆಯಲ್ಲಿದ್ದಾಗ ಎರಡು ಬಾರಿ ಬಂದಿದ್ದರು. ಕಾರಣ ಅಸ್ಸಾಂನ ರಾಜಕೀಯ ಮತ್ತು ಸಾಂಸ್ಕೃತಿಕ ಸ್ಥಿತಿಗತಿಗಳ ಬಗ್ಗೆ ಭಾಷಣವೊಂದನ್ನು ಮಾಡಬೇಕಿದ್ದು ಇದನ್ನು ಕುರಿತು ಚರ್ಚಿಸಲು. ಆದರೆ ಈ ವಿಷಯಕ್ಕಿಂತ ಹೆಚ್ಚಾಗಿ ನಾವು ಧಾರವಾಡದ ನಮ್ಮ ಹಳೆಯ ಗೆಳೆಯರ ಬಗ್ಗೆ, ಕನ್ನಡ ಬರವಣಿಗೆಯ ಸ್ಥಿತಿಗತಿಗಳ ಬಗ್ಗೆ ಮಾತನಾಡಿದೆವು. ನಾನು ಹಾಸಿಗೆ ಹಿಡಿದು, ಅನಾರೋಗ್ಯ ಸ್ಥಿತಿಯಲ್ಲಿದ್ದುದರಿಂದ ಅವನ ಕೊನೆಯ ದಿನಗಳಲ್ಲಿ ನಾನು ಅವನನ್ನು ಭೇಟಿ ಮಾಡಲಾಗಲಿಲ್ಲ. ಆದರೆ ಅರೋರಾಳ ಮೂಲಕ ಅವನ ಆರೋಗ್ಯದ ವರದಿಯನ್ನು ಕೇಳುತ್ತಿದ್ದೆ. ಮೃತ್ಯುವಿನ ಎರಡು ವಾರಗಳಿಗೆ ಮುಂಚೆ ನಾನು ಅವನೊಂದಿಗೆ ಮಾತನಾಡಿದೆ. ಆ ಕೆಲವು ನಿಮಿಷಗಳ ಮಾತಿನಲ್ಲೇ ಅವನ ಕೊನೆಗಾಲ ಸನಿಹದಲ್ಲಿದೆ ಅಂತ ಸ್ಪಷ್ಟವಾಗಿತ್ತು. ಆಗಲೂ ಅವನನ್ನು ನೋಡಲು ಸಾಧ್ಯವಾಗಲೇ ಇಲ್ಲ.

ವಿ. ಎಸ್. ನೈಪಾಲ್ ನ *ಇಂಡಿಯ, ಎ ವೂಂಡೆಡ್ ಸಿವಿಲಿಜೇಷನ್* ಪುಸ್ತಕವನ್ನು ಕುರಿತು ಮಾತನಾಡುವಾಗ ಅವರ ಮಾತು ಅಪವ್ಯಾಖ್ಯಾನಗೊಂಡು ಕ್ಲೀಷೆಯಾಗು ವುದಕ್ಕೆ ಮುಂಚೆ ಗಿರೀಶ್ ಸತ್ಯವನ್ನೇ ನುಡಿದಿದ್ದರು. ನೈಪಾಲ್‌ರ ಬಗ್ಗೆ ಮಾತನಾಡುವುದಕ್ಕೆ ಮುಂಚೆಯೂ ಭಾರತದಲ್ಲಿ ಹಿಂದೂ ಮುಸ್ಲಿಂ ಸಂಬಂಧಗಳು ಕಲುಷಿತವಾದಾಗಲೆಲ್ಲ, ಎಲ್ಲಕ್ಕಿಂತ ಹೆಚ್ಚಾಗಿ ಇಂದು ನಾವು ಬದುಕುತ್ತಿರುವ ಸ್ಥಿತಿಯಲ್ಲಿರುವವರೆಗೆ ನಡೆಯುತ್ತಿದ್ದ ಪ್ರತಿಭಟನೆಗಳಲ್ಲಿ ಅವರು ಕ್ರಿಯಾಶೀಲ ರಾಗಿದ್ದರು. ಹುಬ್ಬಳ್ಳಿಯ ಈದ್ಗಾ ಮೈದಾನದ ಪ್ರಕರಣದ ಸಂದರ್ಭದಲ್ಲಿ, ಬಾಬಾ ಬುಡನ್‌ಗಿರಿಯ ಗಲಾಟೆಯ ಸಂದರ್ಭದಲ್ಲಿ ಅವರ ಸಾಲು ಪ್ರತಿಭಟನೆಗಳು ಅಂತರರಾಷ್ಟ್ರೀಯ ಸುದ್ದಿಯಾಗಿಲ್ಲದಿರ ಬಹುದು. ಏಕೆಂದರೆ ಅವರು ನೊಬೆಲ್ ಪ್ರಶಸ್ತಿ ವಿಜೇತರಲ್ಲವಲ್ಲ!

ಈಗ ಅವರು ಹೊರಟಾಗಿದೆ. ಅವರನ್ನು ಕುರಿತ ನನ್ನ ಗಟ್ಟಿ ನೆನಪೆಂದರೆ ಯಾರ ವಿಷಯದಲ್ಲೂ ತಲೆಹಾಕದಿರುವ ಅವರ ಗಂಭೀರ ವ್ಯಕ್ತಿತ್ವ. ಆದರೆ ಉದ್ರಿಕ್ತ ಹಿಂದುತ್ವದ ಕಾಲಾಳುಗಳು ಮಾರಣಾಂತಿಕ ಹಲ್ಲೆ ನಡೆಸಿದಾಗ ಅವುಗಳ ವಿರುದ್ಧದ ಪ್ರತಿಭಟನೆಗಳಲ್ಲಿ ಅವರ ಮೌನ ಇರವು ಸದಾ ಇರುತ್ತಿತ್ತು. ಅವರ ಸ್ನೇಹಿತರು ಹಾಗೂ ಪರಿಚಿತರ ಲಕ್ಷಣವೂ ಇದೇ ಎನ್ನಬಹುದು. ಗೌರಿ ಲಂಕೇಶ್ ತನ್ನ ಮನೆಯ ಬಾಗಿಲಲ್ಲೇ ಹತ್ಯೆಗೊಳಗಾಗಿದ್ದುದನ್ನು ಇಲ್ಲಿ ನೆನೆಯಬಹುದು. ಗಿರೀಶರ ಮೂಗಿನ ಹೊಳ್ಳೆಗಳಿಗೆ ತೂರಿಸಲಾಗಿದ್ದ ನಳಿಕೆಯು, ಚಲಿಸುವ ಆಮ್ಲಜನಕ ವರ್ತುಲನಾಳಿಗೆ (ಸಿಲಿಂಡರ್) ಜೋಡಿಸಲಾಗಿರುತ್ತಿತ್ತು; ಹೋದಲ್ಲೆಲ್ಲಾ ಆ ವಿಲಕ್ಷಣ ಯಂತ್ರ ಅವರೊಡನೆ ಸಾಗುತ್ತಿತ್ತು. ಅವರ ಆ ಛಾಯಾಚಿತ್ರ ನಮ್ಮ ಕಾಲದ ನಿಯತ ಪ್ರತಿಮೆಯಾಗಿಹೋಯಿತು. ನನ್ನ ಮನೆಯಲ್ಲಿ ಬೇಕೆಂದೇ ಟೆಲಿವಿಷನ್ ಪೆಟ್ಟಿ ಇರಿಸಿಕೊಂಡಿಲ್ಲ. ಆದ್ದರಿಂದ ಗಿರೀಶರ ಆ ಪ್ರತಿಮಾಚಿತ್ರವನ್ನು ನೋಡಿರುವುದು ನಾನು ಓದುವ ಎರಡು ಪತ್ರಿಕೆಗಳಲ್ಲಿ ಮಾತ್ರ; ಆದಾಗ್ಯೂ ಪತ್ರಿಕೆಗಳಲ್ಲಿ ಕಂಡ ಆ ಚಿತ್ರವೇ ವಿದ್ರಾವಕ ವಾಗಿರುತ್ತಿತ್ತು. ನಾನು ವಾಸಿಸುತ್ತಿರುವುದು ಏಕಾಂತದಲ್ಲಿ, ಒಂದು ಹಳೆಯ ಮುರುಕುಮನೆಯಲ್ಲಿ. ಹಾಸಿಗೆ ಹಿಡಿದಿರುವುದೇ ಹೆಚ್ಚು. ನನ್ನ ಅಂತ್ಯಕಾಲವೂ ಸನ್ನಿಹಿತವಾಗುತ್ತಿದೆ. ದುರ್ಬಲ ಶರೀರದ – ಆದರೆ ಚೈತನ್ಯದಲ್ಲಿ ಅತಿಪ್ರಬಲವಾಗಿದ್ದ, ಗಿರೀಶರ ಆ ಪ್ರತಿಮೆಯು ನನ್ನ ಈ ಸ್ಥಿತಿಯಲ್ಲಿ ಸ್ಥಿರವಾದ ಆಸರೆಯಾಗಿದೆ.

(ಸೌಜನ್ಯ : Economic and Political Weekly, August 3, 2019)

**ಎಂ. ಎಸ್. ಪ್ರಭಾಕರ**
'ಆನಂದ ನಿಲಯ', ಶಾರದ ಟಾಕಿಸ್ ರೋಡ್
ಕಠಾರಿ ಪಾಳ್ಯ, ಕೋಲಾರ – ೫೬೩ ೧೦೧



# ಜನಸಂಖ್ಯೆಯ ಬೆಳವಣಿಗೆ ಮತ್ತು ಅಲ್ಪಸಂಖ್ಯಾತರ ಜನಸಂಖ್ಯೆ

**ಪ್ರಸ್ತಾವನೆ**

ನಮ್ಮ ಪ್ರಧಾನ ಮಂತ್ರಿ ಅವರು ೨೦೧೯ರ ಆಗಸ್ಟ್ ೧೫ರ ಸ್ವಾತಂತ್ರ್ಯ ದಿನಾಚರಣೆಯಂದು ಕೆಂಪು ಕೋಟೆ ಮೇಲಿಂದ ದೇಶವನ್ನುದ್ದೇಶಿಸಿ ಭಾಷಣ ಮಾಡುತ್ತಾ ನಮ್ಮ ದೇಶವನ್ನು ಕಾಡುತ್ತಿರುವ ಅನೇಕ ಸಮಸ್ಯೆಗಳ ಬಗ್ಗೆ ಗಮನ ಸೆಳೆದಿದ್ದಾರೆ. ಉದಾಹರಣೆಗೆ ಪ್ಲಾಸ್ಟಿಕ್ ಬಳಕೆ, ಪ್ರವಾಸೋದ್ಯಮ, ನೀರಿನ ಕ್ಷಾಮ ಮುಂತಾದವು. ಎಲ್ಲಕ್ಕಿಂತ ಮುಖ್ಯವಾಗಿ ಅವರು ಒತ್ತಿ ಹೇಳಿದ್ದು ಜನಸಂಖ್ಯೆಯ ಬೆಳವಣಿಗೆಯ ನಿಯಂತ್ರಣ. ಅವರು ಅತ್ಯಂತ ಸ್ಪಷ್ಟವಾಗಿ ಸಣ್ಣ ಕುಟುಂಬವನ್ನು ಸಾಧಿಸಿಕೊಂಡವರು ನಿಜವಾಗಿ 'ದೇಶಭಕ್ತರು' ಎಂದು ತಮ್ಮ ವಿಚಾರವನ್ನು ಮಂಡಿಸಿದ್ದಾರೆ. ಇತ್ತೀಚಿಗೆ ಪ್ರತಿಯೊಂದಕ್ಕೂ 'ದೇಶಭಕ್ತಿ-ದೇಶಪ್ರೇಮ'ವನ್ನು ಹಚ್ಚುವ ಒಂದು ಹೊಸ ಕ್ರಮ ಚಲಾವಣೆಗೆ ಬರುತ್ತಿದೆ. ನಿಜ, ಸಂಪನ್ಮೂಲಗಳ ಸಂರಕ್ಷಣೆ ದೃಷ್ಟಿಯಿಂದ(ಸುಸ್ಥಿರಗತಿ ಅಭಿವೃದ್ಧಿ) ಮತ್ತು ನಮ್ಮ ಆರ್ಥಿಕತೆಯ ಅಭಿವೃದ್ಧಿಯ ಸಂಭಾವ್ಯ ಸಾಮರ್ಥ್ಯದ ದೃಷ್ಟಿಯಿಂದ ಜನಸಂಖ್ಯೆಯ ಬೆಳವಣಿಗೆ ನಿಯಂತ್ರಣಕ್ಕೆ ನಿರ್ಣಾಯಕ ಪಾತ್ರವಿದೆ. ಜನಸಂಖ್ಯೆಯ ಬೆಳವಣಿಗೆಯು ಬಹುಮುಖಿಯಾದ ಸಂಗತಿಯಾಗಿದೆ. ಭಾರತದಂತಹ ಬಹುವಚನ ಒಕ್ಕೂಟ ವ್ಯವಸ್ಥೆಯಲ್ಲಿ ಅದರ ನಡೆಯನ್ನು ಎಚ್ಚರಿಕೆಯಿಂದ ವಿಶ್ಲೇಷಿಸಬೇಕಾಗುತ್ತದೆ. ಇದನ್ನು ಭಾವನಾತ್ಮಕ ಸಂಗತಿಯನ್ನಾಗಿ ಮಾಡುವುದರಿಂದ ಅಥವಾ ಅಖಂಡವಾಗಿ ಪರಿಭಾವಿಸಿಕೊಳ್ಳುವುದರಿಂದ ಹೆಚ್ಚು ಪ್ರಯೋಜನವಾಗುವುದಿಲ್ಲ. ಜನಸಂಖ್ಯೆಯ ಏರಿಕೆ ಎನ್ನುವುದು ಕೇವಲ ಮಕ್ಕಳ ಜನನಕ್ಕೆ ಅಥವಾ ದೊಡ್ಡ ಕುಟುಂಬಕ್ಕೆ ಸಂಬಂಧಿಸಿದ ಸಂಗತಿಯಲ್ಲ.

ಜನರು ಏಕೆ ಹೆಚ್ಚು ಮಕ್ಕಳನ್ನು ಪಡೆಯಲು ಇಚ್ಛಿಸುತ್ತಾರೆ? ಬಡತನದಿಂದ ಕೂಡಿದ ಕುಟುಂಬಗಳಲ್ಲಿಯೇ ಮಕ್ಕಳ ಸಂಖ್ಯೆ ಅಧಿಕವಾಗಿರುತ್ತದೆ, ಏಕೆ? ಒಂದು ರಾಜ್ಯ / ಪ್ರದೇಶದಲ್ಲಿ ಅಲ್ಪಸಂಖ್ಯಾತರು ಅಧಿಕವಾಗಿದ್ದರೆ ಅಲ್ಲಿನ ಜನಸಂಖ್ಯೆಯ ಬೆಳವಣಿಗೆ ಅಧಿಕವಾಗಿರುತ್ತದೆಯೇ? ಜನಸಂಖ್ಯೆಯ ಗಾತ್ರಕ್ಕೂ ಮತ್ತು ಜನಸಂಖ್ಯೆಯ ಗುಣಕ್ಕೂ ನಡುವೆ ಸಂಬಂಧವಿಲ್ಲವೇ? ಜನಸಂಖ್ಯೆಯ ಗುಣಮಟ್ಟವನ್ನು ಬಲಿಕೊಟ್ಟು ಜನರು ದೊಡ್ಡಗಾತ್ರದ ಕುಟುಂಬವನ್ನು ಬಯಸುತ್ತಾರೆಯೇ? ಒಂದು ರಾಜ್ಯ / ಪ್ರದೇಶದ ಲಿಂಗ ಅನುಪಾತ ಮತ್ತು ಮಹಿಳೆಯರ ಸಾಕ್ಷರತೆ ಸಂಗತಿಗಳು ಜನಸಂಖ್ಯೆಯ ಬೆಳವಣಿಗೆಯ ಮೇಲೆ ಯಾವ ರೀತಿಯ ಪರಿಣಾಮ ಬೀರುತ್ತದೆ? ಈಗಾಗಲೆ ಜನಸಂಖ್ಯೆಯ ಬೆಳವಣಿಗೆಯನ್ನು ತೀವ್ರ ಗತಿಯಲ್ಲಿ ತಡೆಗಟ್ಟಿರುವ ರಾಜ್ಯ ಪ್ರದೇಶಗಳಲ್ಲಿ ಅದನ್ನು ಬಲವಂತ-ಕಿರುಕುಳಾತ್ಮಕ ಕ್ರಮಗಳಿಂದ ತಡೆಗಟ್ಟಿದ್ದಾವೆಯೋ ಅಥವಾ ಶಿಕ್ಷಣ, ಆರೋಗ್ಯ ಸೌಲಭ್ಯ, ಆಹಾರ ಭದ್ರತೆ, ಲಿಂಗ ಸಮಾನತೆ, ಮಕ್ಕಳ ಪೋಷಣೆ ಮುಂತಾದ ಸಂಗತಿಗಳನ್ನು ಉತ್ತಮಪಡಿಸುವ ಮೂಲಕ ತಡೆಗಟ್ಟಿದ್ದಾವೆಯೋ? ಜನಸಂಖ್ಯೆಯ ನಡೆಯು ಯಾವ ರೀತಿಯಲ್ಲಿ ಜಟಿಲವಾಗಿದೆ ಎಂಬುದಕ್ಕೆ ಇಲ್ಲಿರುವ ಪ್ರಶ್ನೆಗಳು ಸಾಕ್ಷಿ. ಈ ಸಂಗತಿಯನ್ನು ತುಂಬ ಎಚ್ಚರಿಕೆಯಿಂದ ಮತ್ತು ಜವಾಬ್ದಾರಿಯಿಂದ ಪರಿಶೀಲಿಸಬೇಕಾಗಿದೆ.

ಪ್ರಸ್ತುತ ಪ್ರಬಂಧದಲ್ಲಿ ನಮ್ಮ ಸಮಾಜದಲ್ಲಿನ ಜನಸಂಖ್ಯೆಯ ಗತಿಶೀಲತೆಯನ್ನು ವಿವಿಧ ನೆಲೆಗಳಿಂದ ಪರಿಶೀಲಿಸಲು ಪ್ರಯತ್ನಿಸಲಾಗಿದೆ. ಅದು ಕೇವಲ ಸಂಖ್ಯೆಗೆ ಸಂಬಂಧಿಸಿದ ಸಂಗತಿಯಲ್ಲ ಅಥವಾ ಜನಸಂಖ್ಯೆಯ ಬೆಳವಣಿಗೆಯ ನಿಯಂತ್ರಣವು ಭಾವನಾತ್ಮಕ ಸಂಗತಿಯೂ ಅಲ್ಲ. ಭಾರತದಲ್ಲಿ ಜನಸಂಖ್ಯೆಯ ತೀವ್ರಗತಿ ಬೆಳವಣಿಗೆಗೆ ಮುಸ್ಲಿಮರ ಜನಸಂಖ್ಯೆಯ ಬೆಳವಣಿಗೆ ಕಾರಣ ಎಂಬ ಪೂರ್ವಗ್ರಹಪೀಡಿತ ಪ್ರಮೇಯ ಸಂಪೂರ್ಣ ಸತ್ಯವಲ್ಲ ಎಂಬುದನ್ನು ಇಲ್ಲಿ ಪುರಾವೆಗಳ ಸಹಿತ ಸಾಧಿಸಲು ಪ್ರಯತ್ನಿಸಲಾಗಿದೆ. ಈ ಪ್ರಮೇಯದ ಆಧಾರದಲ್ಲಿ ಇಲ್ಲಿನ ಚರ್ಚೆಯನ್ನು ರೂಪಿಸಲಾಗಿದೆ.

**ಜನಸಂಖ್ಯೆಯ ಬೆಳವಣಿಗೆ ಮತ್ತು ಮುಸ್ಲಿಮರ ಜನಸಂಖ್ಯೆ**

ಇವೆರಡರ ನಡುವಿನ ಸಂಬಂಧದ ಬಹುಮುಖಿ ಸ್ವರೂಪವನ್ನು ಮತ್ತು ವಿವಿಧ ಮುಖಗಳನ್ನು ಕೋಷ್ಟಕ ೧ ರಲ್ಲಿ ಮಂಡಿಸಲಾಗಿದೆ.

**ಡಾ|| ಟಿ. ಆರ್. ಚಂದ್ರಶೇಖರ**

**ಕೋಷ್ಟಕ ೧**

| ಜನಸಂಖ್ಯೆಯ ಬೆಳವಣಿಗೆ ಮತ್ತು ಮುಸ್ಲಿಮರ ಜನಸಂಖ್ಯೆ : ಆಯ್ದ ರಾಜ್ಯಗಳ ಸ್ಥಿತಿಗತಿ ೨೦೧೧ | | | | | |
|---|---|---|---|---|---|
| ದಕ್ಷಿಣ ಭಾರತದ ರಾಜ್ಯಗಳು | ಜನಸಂಖ್ಯೆಯ ಬೆಳವಣಿಗೆ ದರ ೨೦೦೧–೨೦೧೧ (ಶೇ) | ಮುಸ್ಲಿಮರ ಜನಸಂಖ್ಯೆ ಪ್ರಮಾಣ ೨೦೧೧(ಶೇ) | ಉತ್ತರ ಭಾರತದ ರಾಜ್ಯಗಳು | ಜನಸಂಖ್ಯೆಯ ಬೆಳವಣಿಗೆ ದರ ೨೦೦೧–೨೦೧೧ (ಶೇ) | ಮುಸ್ಲಿಮರ ಜನಸಂಖ್ಯೆ ಪ್ರಮಾಣ ೨೦೧೧ (ಶೇ) |
| ಆಂಧ್ರಪ್ರದೇಶ | ೧೧.೧೦ | ೯.೫೬ | ಉತ್ತರ ಪ್ರದೇಶ | ೨೬.೧ | ೧೯.೨೬ |
| ಕರ್ನಾಟಕ | ೧೫.೭೦ | ೧೨.೯೨ | ಬಿಹಾರ | ೨೫.೧ | ೧೬.೮೭ |
| ಕೇರಳ | ೪.೯೦ | ೨೬.೫೬ | ಮಧ್ಯ ಪ್ರದೇಶ | ೨೦.೩ | ೬.೫೭ |
| ತಮಿಳುನಾಡು | ೧೫.೫೦ | ೫.೮೬ | ರಾಜಸ್ಥಾನ | ೨೧.೪ | ೯.೦೭ |
| ಪುದುಚೆರಿ | ೨೭.೭ | ೬.೦೫ | ಗುಜರಾತ್ | ೧೯.೨ | ೯.೬೭ |
| *ಮೂಲ : ಸೆನ್ಸಸ್ ಆಫ್ ಇಂಡಿಯಾ ೨೦೧೧.* | | | | | |

ಕೋಷ್ಟಕ ೧ರಲ್ಲಿ ದಕ್ಷಿಣ ಭಾರತದ ಐದು ಮತ್ತು ಉತ್ತರ ಭಾರತದ ಐದು ರಾಜ್ಯಗಳ ಜನಸಂಖ್ಯೆಯ ಮತ್ತು ಅದರ ಬೆಳವಣಿಗೆ ಗತಿ ಮತ್ತು ಮುಸ್ಲಿಮರ ಜನಸಂಖ್ಯೆಯ ಪ್ರಮಾಣಗಳ ವಿವರಗಳನ್ನು ನೀಡಲಾಗಿದೆ. ಜನಸಂಖ್ಯೆಯ ಬೆಳವಣಿಗೆಯ ಅಪಾಯದ ಬಗ್ಗೆ ಇಂದು ನಡೆಯುತ್ತಿರುವ ಚರ್ಚೆಗಳಲ್ಲಿ ಅಲ್ಪಸಂಖ್ಯಾತರ ಜನಸಂಖ್ಯೆಯನ್ನು ಪ್ರಮುಖ ಕಾರಣವನ್ನಾಗಿ ಮಾಡಲಾಗುತ್ತಿದೆ. ಈ ಪ್ರಣಾಳಿಕೆಯಲ್ಲಿನ ತಥ್ಯವೇನು ಎಂಬುದನ್ನು ಚರ್ಚಿಸಲು ಮೇಲಿನ ವಿವರಗಳನ್ನು ಕೋಷ್ಟಕದಲ್ಲಿ ನೀಡಲಾಗಿದೆ. ಮುಸ್ಲಿಮರ ಜನಸಂಖ್ಯೆಯ ಬೆಳವಣಿಗೆಯ ಗತಿ ಉಳಿದ ಧರ್ಮಗಳ ಜನಸಂಖ್ಯೆಯ ಬೆಳವಣಿಗೆ ಗತಿಗಿಂತ ಅಧಿಕವಾಗಿದೆ ಎಂಬುದು ನಿಜ. ಆದರೆ ಇಲ್ಲಿರುವ ಸಂಗತಿಯು ಧಾರ್ಮಿಕವಾದುದಲ್ಲ. ಇದು ಆರ್ಥಿಕ ಮತ್ತು ಸಾಮಾಜಿಕ ಸಮಸ್ಯೆ ಎಂಬುದನ್ನು ನಾವು ಗಮನಿಸಬೇಕಾಗಿದೆ (ಪುದುಚೆರಿಯ ಜನಸಂಖ್ಯೆಯ ಬೆಳವಣಿಗೆಯು ಅಧಿಕವಾಗಿರಲು ಕಾರಣ ವಲಸೆ).

ನಮ್ಮ ಜನಸಂಖ್ಯೆಯ ತೀವ್ರಗತಿ ಬೆಳವಣಿಗೆಗೆ ಅಲ್ಪಸಂಖ್ಯಾತರಾದ ಮುಸ್ಲಿಮರು ಕಾರಣ ಎಂಬ ಪ್ರಚ್ಛನ್ನ ನಂಬಿಕೆಯ ಮೇಲೆ ನಮ್ಮ ದೇಶದಲ್ಲಿ ಇಂದು ಜನಸಂಖ್ಯೆಯ ಬೆಳವಣಿಗೆ ಕುರಿತ ಚರ್ಚೆ ನಡೆಯುತ್ತಿದೆ. ಇದರಲ್ಲಿ ಬಲವಾದ ತಥ್ಯವಿಲ್ಲ ಎಂಬುದನ್ನು ಮೇಲಿನ ಕೋಷ್ಟಕದಲ್ಲಿನ ಸಂಗತಿಗಳು ತೋರಿಸುತ್ತದೆ. ಉದಾಹರಣೆಗೆ ಉತ್ತರ ಪ್ರದೇಶ ಮತ್ತು ಬಿಹಾರ ರಾಜ್ಯಗಳಲ್ಲಿನ ಒಟ್ಟು ಜನಸಂಖ್ಯೆಯಲ್ಲಿ ಮುಸ್ಲಿಮರ ಪ್ರಮಾಣ ಕ್ರಮವಾಗಿ ಶೇ.೧೯.೨೬ ಮತ್ತು ಶೇ.೧೬.೮೭. ಆದರೆ ಕೇರಳ ರಾಜ್ಯದಲ್ಲಿ ಮುಸ್ಲಿಮರ ಪ್ರಮಾಣ ಇವೆರಡರಲ್ಲಿನ ಮುಸ್ಲಿಮರ ಪ್ರಮಾಣಕ್ಕಿಂತ ಅಧಿಕ ಶೇ.೨೬.೫೬. ಆದರೆ ಉತ್ತರ ಪ್ರದೇಶ ಮತ್ತು ಬಿಹಾರ ರಾಜ್ಯಗಳಲ್ಲಿನ ಜನಸಂಖ್ಯೆಯ ಬೆಳವಣಿಗೆ ಪ್ರಮಾಣ ೨೦೦೧–೨೦೧೧ರ ದಶಕದಲ್ಲಿ ಕ್ರಮವಾಗಿ ಶೇ.೨೦.೧ ಮತ್ತು ಶೇ.೨೫.೧ರಷ್ಟಿದೆ. ಆದರೆ ಅಲ್ಪಸಂಖ್ಯಾತರಾದ ಮುಸ್ಲಿಮರ ಪ್ರಮಾಣ ಇವೆರಡೂ ರಾಜ್ಯಗಳಲ್ಲಿ ಇರುವುದಕ್ಕಿಂತ ಅಧಿಕವಿದ್ದರೂ ಕೇರಳದಲ್ಲಿ ಜನ ಸಂಖ್ಯೆಯ ಬೆಳವಣಿಗೆ ಪ್ರಮಾಣ ಶೇ. ೪.೯೦ರಷ್ಟಿದೆ. ಅಂದರೆ ಉತ್ತರ ಪ್ರದೇಶ ಮತ್ತು ಬಿಹಾರ ರಾಜ್ಯಗಳಲ್ಲಿ ಜನಸಂಖ್ಯೆಯ ಏರಿಕೆಗೆ ಮೂಲದಲ್ಲಿ ಮುಸ್ಲಿಮರ ಸಂಖ್ಯೆಯ ಪ್ರಮಾಣಕ್ಕಿಂತ ಇತರೆ ಸಾಮಾಜಿಕ ಮತ್ತು ಆರ್ಥಿಕ ಕಾರಣಗಳು ಇರುವುದು ಇದರಿಂದ ವಿದಿತವಾಗುತ್ತದೆ.

ಇದೇ ರೀತಿಯಲ್ಲಿ ಉತ್ತರ ಭಾರತದ ಮಧ್ಯಪ್ರದೇಶ, ರಾಜಸ್ಥಾನ ಮತ್ತು ಗುಜರಾತ್ ರಾಜ್ಯಗಳಲ್ಲಿನ ಒಟ್ಟು ಜನಸಂಖ್ಯೆಯಲ್ಲಿ ಮುಸ್ಲಿಮರ ಪ್ರಮಾಣ ಶೇ. ೧೦ಕ್ಕಿಂತ ಕಡಿಮೆ. ಆದರೆ ಈ ರಾಜ್ಯಗಳಲ್ಲಿ ಜನಸಂಖ್ಯೆಯ ಬೆಳವಣಿಗೆ ೨೦೦೧–೨೦೧೧ರ ದಶಕದಲ್ಲಿ ಶೇ.೨೦ಕ್ಕಿಂತ ಅಧಿಕವಾಗಿದೆ. ಇದಕ್ಕೆ ವಿರುದ್ಧವಾಗಿ ಕರ್ನಾಟಕದಲ್ಲಿ ಮುಸ್ಲಿಮರ ಜನಸಂಖ್ಯೆಯ ಪ್ರಮಾಣ ಶೇ. ೧೨.೯೨ ರಷ್ಟಿದೆ. ಆದರೆ ಇದರ ಜನಸಂಖ್ಯೆಯ ಬೆಳವಣಿಗೆ ಪ್ರಮಾಣ ಶೇ. ೧೫.೭೦. ಹಾಗಾದರೆ ಉತ್ತರ ಭಾರತದ ಮೂರು ರಾಜ್ಯಗಳಲ್ಲಿನ ಜನಸಂಖ್ಯೆಯಲ್ಲಿ ಮುಸ್ಲಿಮರ ಪ್ರಮಾಣ ಕೆಳಮಟ್ಟದಲ್ಲಿದ್ದರೂ ಅವುಗಳ ಜನಸಂಖ್ಯೆಯ ಬೆಳವಣಿಗೆ ಪ್ರಮಾಣ ಅಧಿಕವಿರಲು ಕಾರಣಗಳೇನು? ಕರ್ನಾಟಕದ ಜನಸಂಖ್ಯೆಯಲ್ಲಿ ಮುಸ್ಲಿಮರ ಪ್ರಮಾಣ ಶೇ. ೧೦ ಕ್ಕಿಂತ ಅಧಿಕವಿದ್ದರೂ ಅದರ ಜನಸಂಖ್ಯೆಯ ಬೆಳವಣಿಗೆ ಪ್ರಮಾಣ ಮಧ್ಯಪ್ರದೇಶ, ರಾಜಸ್ಥಾನ ಮತ್ತು ಗುಜರಾತ್ ರಾಜ್ಯಗಳಲ್ಲಿ ಇರುವುದಕ್ಕಿಂತ ಕೆಳಮಟ್ಟದಲ್ಲಿರಲು ಕಾರಣವೇನು?

ಇದಕ್ಕೆ ಬಹುಮುಖ್ಯ ಕಾರಣ ಮಹಿಳೆಯರ ಸಾಕ್ಷರತಾ ಪ್ರಮಾಣ. ಇದರ ಬಗ್ಗೆ ಚರ್ಚೆ ಮಾಡುವುದಕ್ಕೆ ಮೊದಲು ಲಿಂಗ ಅಸಮಾನತೆಯ ಪರಮೋಚ್ಚ ಸ್ಥಾನದಲ್ಲಿರುವ ಹರಿಯಾಣ ರಾಜ್ಯದಲ್ಲಿನ ಜನಸಂಖ್ಯೆಯ ಗತಿಶೀಲತೆಯನ್ನು ಪರಿಶೀಲಿಸುವುದರಿಂದ ನಮ್ಮ ಚರ್ಚೆಗೆ ಮತ್ತಷ್ಟು ಬಲಬರುವ ಸಾಧ್ಯತೆಯಿದೆ.

**ಲಿಂಗ ಅಸಮಾನತೆಯ ಪರಮೋಚ್ಚ ರಾಜ್ಯ ಹರಿಯಾಣ**

ಈ ರಾಜ್ಯದ ಜನಸಂಖ್ಯೆಗೆ ಸಂಬಂಧಿಸಿದ ಕೆಲವು ಸೂಚಿಗಳು ಹೀಗಿವೆ:

- ಈ ರಾಜ್ಯದ ಜನಸಂಖ್ಯೆಯ ಬೆಳವಣಿಗೆ ಪ್ರಮಾಣ ೨೦೦೧–೨೦೧೧ : ಶೇ.೧೯.೮೯.
- ರಾಜ್ಯದ ಒಟ್ಟು ಜನಸಂಖ್ಯೆಯಲ್ಲಿ ಮುಸ್ಲಿಮರ ಪ್ರಮಾಣ, ೨೦೧೧. ಶೇ. ೭.೦೩.
- ಮಹಿಳೆಯರ ಸಾಕ್ಷರತಾ ಪ್ರಮಾಣ, ೨೦೧೧, ಶೇ. ೬೫.೯೫.
- ಸಾಕ್ಷರತೆಯಲ್ಲಿ ಲಿಂಗ ಅಸಮಾನತೆ, ೨೦೧೧, ಶೇ.೧೮.೧೦ ಅಂಶಗಳು
- ಲಿಂಗ ಅನುಪಾತ : ೨೦೦೧, ೮೫೭ ಮತ್ತು ೨೦೧೧, ೮೭೯.

ಈ ಪ್ರಬಂಧದಲ್ಲಿ ಪ್ರತಿಪಾದಿಸಿರುವ ಪ್ರಮೇಯದ ಪ್ರಕಾರ ಹರಿಯಾಣದಲ್ಲಿಯೂ ಕೂಡ ಜನಸಂಖ್ಯೆಯ ವಿಪರೀತ ಬೆಳವಣಿಗೆಗೆ ಮುಸ್ಲಿಮರ ಪ್ರಮಾಣ ಅಧಿಕವಾಗಿರುವುದು ಕಾರಣವಲ್ಲ ಎಂಬುದು ಕಂಡುಬರುತ್ತದೆ. ಏಕೆಂದರೆ ಇದಕ್ಕಿಂತ ಮುಸ್ಲಿಮರ ಪ್ರಮಾಣ ಅಧಿಕವಿರುವ ಕರ್ನಾಟಕ(ಶೇ.೧೨.೯೨), ಆಂಧ್ರಪ್ರದೇಶ(ಶೇ.೯.೫೬) ಮತ್ತು ಕೇರಳ (ಶೇ.೨೬.೫೬) ರಾಜ್ಯಗಳಲ್ಲಿ ಜನಸಂಖ್ಯೆಯ ಬೆಳವಣಿಗೆ ಪ್ರಮಾಣ ೨೦೦೧–೨೦೧೧ರ ದಶಕದಲ್ಲಿ ಅತ್ಯಂತ ಕೆಳಮಟ್ಟ ದಲ್ಲಿರುವುದನ್ನು ನೋಡಬಹುದು. ಹರಿಯಾಣದ ಪ್ರಮುಖ ಸಮಸ್ಯೆ ಅತ್ಯಂತ ಕೆಳಮಟ್ಟದ ಮಹಿಳೆಯರ ಸಾಕ್ಷರತೆ. ಈ ರಾಜ್ಯದ ಮಹಿಳೆಯರ ಸಾಕ್ಷರತಾ ಪ್ರಮಾಣ ೨೦೧೧ರಲ್ಲಿ ಶೇ. ೬೫.೯೩ ಹಾಗೂ ಸಾಕ್ಷರತೆಯಲ್ಲಿನ ಲಿಂಗ ಅಸಮಾನತೆ ಶೇ. ೧೮.೧೨ ಅಂಶಗಳು. ಇಲ್ಲಿದೆ ಸಮಸ್ಯೆಯ ಮೂಲ. ಇದನ್ನು ಸರಿಪಡಿಸುವುದಕ್ಕೆ ಪ್ರಯತ್ನಿಸದೆ ಜನಸಂಖ್ಯೆಯ ತೀವ್ರಗತಿ ಬೆಳವಣಿಗೆಯನ್ನು ಅಲ್ಪಸಂಖ್ಯಾತರಾದ ಮುಸ್ಲಿಮರಿಗೆ ಆರೋಪಿಸುವುದು ನ್ಯಾಯವಲ್ಲ.

**ಲಿಂಗ ಅನುಪಾತ ಮತ್ತು ಮಹಿಳೆಯರ ಸಾಕ್ಷರತಾ ಪ್ರಮಾಣ**

ಜನಸಂಖ್ಯೆಯ ಬೆಳವಣಿಗೆ ಮತ್ತು ಮಹಿಳೆಯರ ಸಾಕ್ಷರತೆಗಳ ನಡುವೆ ವಿಲೋಮ ಸಂಬಂಧ ವಿರುವುದನ್ನು ಅನೇಕ ಅಧ್ಯಯನಗಳು ಖಚಿತ ಪಡಿಸಿವೆ. ಯಾವ ಯಾವ ರಾಜ್ಯಗಳಲ್ಲಿ ಮಹಿಳೆಯರ ಸಾಕ್ಷರತಾ ಪ್ರಮಾಣ ಉನ್ನತಮಟ್ಟದಲ್ಲಿದೆಯೋ ಅಲ್ಲಿ ಜನಸಂಖ್ಯೆಯ ಬೆಳವಣಿಗೆ ಕೆಳಮಟ್ಟದಲ್ಲಿದೆ. ಉದಾಹರಣೆಗೆ ದಕ್ಷಿಣ ಭಾರತದ ಕೇರಳ, ತಮಿಳುನಾಡು ಮತ್ತು ಪುದುಚೆರಿ ರಾಜ್ಯಗಳಲ್ಲಿ ಮಹಿಳೆಯರ ಸಾಕ್ಷರತಾ ಪ್ರಮಾಣ ಶೇ. ೭೦ಕ್ಕಿಂತ ಅಧಿಕವಿದ್ದರೆ ಉತ್ತರ ಪ್ರದೇಶ, ಬಿಹಾರ, ಮಧ್ಯ ಪ್ರದೇಶ ಮತ್ತು ರಾಜಸ್ಥಾನ ರಾಜ್ಯಗಳಲ್ಲಿ ಮಹಿಳೆಯರ ಸಾಕ್ಷರತೆಯು ಶೇ. ೬೦ಕ್ಕಿಂತ ಕೆಳಮಟ್ಟದಲ್ಲಿದೆ. ಮಹಿಳೆಯರ ಸಾಕ್ಷರತೆಯು ಉತ್ತಮಗೊಂಡರೆ ಅವರ ಮದುವೆಯ ವಯಸ್ಸು ಅಧಿಕವಾಗುತ್ತದೆ. ಇದರಿಂದಾಗಿ ಅಪ್ರಾಪ್ತ ವಯಸ್ಸಿಗೆ ಗರ್ಭವತಿಯಾಗುವ ಅಪಾಯ ಇರುವುದಿಲ್ಲ. ಯಾವ ರಾಜ್ಯಗಳಲ್ಲಿ ಲಿಂಗ ಅಸಮಾನತೆಯು ಅಧಿಕಮಟ್ಟದಲ್ಲಿರುತ್ತದೋ ಅವುಗಳಲ್ಲಿ ಜನಸಂಖ್ಯೆಯ ಬೆಳವಣಿಗೆಯು ಅಧಿಕಮಟ್ಟದಲ್ಲಿರುತ್ತದೆ. ಲಿಂಗ ಅಸಮಾನತೆಯು ಲಿಂಗ ಅನುಪಾತದ ಕುಸಿತಕ್ಕೂ ಕಾರಣವಾಗುತ್ತದೆ. ಗಂಡು ಮಕ್ಕಳ ಅತಿ ವ್ಯಾಮೋಹದಿಂದಾಗಿ ಅನೇಕ ರಾಜ್ಯಗಳಲ್ಲಿ ಲಿಂಗ ಅನುಪಾತ ಕುಸಿಯುತ್ತಿದೆ. ಇದು ಲಿಂಗ ಅಸಮಾನತೆಗೆ, ಅದರ ಮೂಲಕ

ಜನಸಂಖ್ಯೆಯ ತೀವ್ರ ಬೆಳವಣಿಗೆಗೆ ಕಾರಣವಾಗುತ್ತದೆ.

**ಒಟ್ಟು ಸಂತಾನೋತ್ಪತ್ತಿ ಪ್ರಮಾಣ**

ಜನಸಂಖ್ಯೆಯ ಬೆಳವಣಿಗೆಯನ್ನು ಅತ್ಯಂತ ಖಚಿತವಾಗಿ ಸೂಚಿಸುವ ಮಾಪನವೆಂದರೆ ಒಟ್ಟು ಸಂತಾನೋತ್ಪತ್ತಿ ಪ್ರಮಾಣ (ಟೋಟಲ್ ಫರ್ಟಿಲಿಟಿ ರೇಟ್). ಜನಸಂಖ್ಯೆಯ ವಾರ್ಷಿಕ/ದಶಕವಾರು ಬೆಳವಣಿಗೆ ಅಥವಾ ಜನನ ಪ್ರಮಾಣಕ್ಕಿಂತ ಹೆಚ್ಚು ವಿಶ್ವಾಸಾರ್ಹವಾದ ಸೂಚಿ ಒಟ್ಟು ಸಂತಾನೋತ್ಪತ್ತಿ ಪ್ರಮಾಣ. ಮಹಿಳೆಯೊಬ್ಬಳು ತನ್ನ ಸಂತಾನೋತ್ಪತ್ತಿ ವಯೋಮಾನವಾದ ೧೫ರಿಂದ ೪೫ ವರ್ಷಗಳ ಅವಧಿಯಲ್ಲಿ ಜನ್ಮ ನೀಡುವ ಒಟ್ಟು ಮಕ್ಕಳ ಸಂಖ್ಯೆಯೇ ಒಟ್ಟು ಸಂತಾನೋತ್ಪತ್ತಿ ಪ್ರಮಾಣ. ಒಟ್ಟು ಸಂತಾನೋತ್ಪತ್ತಿ ಪ್ರಮಾಣ ೧.೮ ಅಥವಾ ೧.೮ಕ್ಕಿಂತ ಕಡಿಮೆಯಾದರೆ ಅದು ಜನಸಂಖ್ಯೆಯ ಸ್ಥಿರಗತಿ ಬೆಳವಣಿಗೆಯನ್ನು ಸೂಚಿಸುತ್ತದೆ. ಇದು ಜನಸಂಖ್ಯೆಯನ್ನು ಇರುವಷ್ಟೇ ಮಟ್ಟದಲ್ಲಿ ಕಾಯ್ದು ಕೊಳ್ಳುವ ದರವಾಗಿದೆ (ರೀಪ್ಲೇಸ್‌ಮೆಂಟ್ ರೇಟ್). ದಕ್ಷಿಣ ಭಾರತದ ತಮಿಳುನಾಡಿನಲ್ಲಿ ಇದು ೨೦೧೬ರಲ್ಲಿ ೧.೬ ರಷ್ಟಿದ್ದರೆ ಕರ್ನಾಟಕ ಮತ್ತು ಕೇರಳದಲ್ಲಿ ೧.೮. ಆಂಧ್ರ ಪ್ರದೇಶ ಮತ್ತು ತೆಲಂಗಾಣದಲ್ಲಿ ಇದು ೧.೭. ಅಂದರೆ ಈ ರಾಜ್ಯಗಳು ಒಟ್ಟಾರೆ ಜನಸಂಖ್ಯೆಯ ಸ್ಥಿರ ಬೆಳವಣಿಗೆ ಪ್ರಮಾಣವನ್ನು ಸಾಧಿಸಿಕೊಂಡು ಬಿಟ್ಟಿವೆ. ಆದರೆ ಒಟ್ಟು ಸಂತಾನೋತ್ಪತ್ತಿ ಪ್ರಮಾಣ ಬಿಹಾರ ಮತ್ತು ಉತ್ತರ ಪ್ರದೇಶಗಳಲ್ಲಿ ೩ಕ್ಕಿಂತ ಅಧಿಕವಾಗಿದೆ. ಗುಜರಾತ್, ಹರಿಯಾಣ, ಮಧ್ಯಪ್ರದೇಶ, ರಾಜಸ್ಥಾನ ಗಳಲ್ಲಿ ಇದು ೨ಕ್ಕಿಂತ ಅಧಿಕವಾಗಿದೆ. ಇದು ಅಧಿಕವಿರಲಿ ಅಥವಾ ಕಡಿಮೆಯಿರಲಿ, ಒಟ್ಟಾರೆ ೧೯೯೧ಕ್ಕೆ ಹೋಲಿಸಿದರೆ ಸಂತಾನೋತ್ಪತ್ತಿ ಪ್ರಮಾಣವು ಭಾರತದಲ್ಲಿ ತೀವ್ರ ಗತಿಯಲ್ಲಿ ಇಳಿಮುಖವಾಗುತ್ತಾ ನಡೆದಿದೆ. ನಮ್ಮ ದೇಶದ ೧೧ ಆಯ್ದ ರಾಜ್ಯಗಳಲ್ಲಿ ಒಟ್ಟು ಸಂತಾನೋತ್ಪತ್ತಿ ಪ್ರಮಾಣ ೨೦೧೧ರಲ್ಲಿ ೨ ಕ್ಕಿಂತ ಕಡಿಮೆಯಿದ್ದರೆ ೧೦ ಆಯ್ದ ರಾಜ್ಯಗಳಲ್ಲಿ ಇದು ೨ಕ್ಕಿಂತ ಅಧಿಕವಾಗಿದೆ. ಇದು ಕೂಡ ಜನಸಂಖ್ಯೆಯ ಬೆಳವಣಿಗೆಯು ಕಡಿಮೆಯಾಗುತ್ತಿರುವುದನ್ನು ಸಿದ್ಧಪಡಿಸುತ್ತದೆ (ನೀತಿ ಆಯೋಗದ ವರದಿ).

ಶಾಶ್ವತ ಘೋಷ್ (ಐಡಿಯಾಸ್ ಫಾರ್ ಇಂಡಿಯ, ೨೦೧೯, ಹಿಂದು-ಮುಸ್ಲಿಮ್ ಫರ್ಟಿಲಿಟಿ ಡಿಫರೆನ್ಸಿಯಲ್ಸ್ ಇನ್ ಇಂಡಿಯಾ: ಡಿಸ್ಟ್ರಿಕ್ಟ್ ಲೆವೆಲ್ ಎಸ್ಟಿಮೇಟ್ಸ್ ಫ್ರಮ್ ಸೆನ್ಸಸ್ ೨೦೧೧) ಅವರ ಹಿಂದು ಮತ್ತು ಮುಸ್ಲಿಮ್ ಕೋಮುಗಳ ಒಟ್ಟು ಸಂತಾನೋತ್ಪತ್ತಿ ಪ್ರಮಾಣದ ಅಧ್ಯಯನದ ವಿವರಗಳನ್ನು ದಕ್ಷಿಣ ಭಾರತದ ನಾಲ್ಕು ಮತ್ತು ಉತ್ತರ ಭಾರತದ ನಾಲ್ಕು ರಾಜ್ಯಗಳಿಗೆ ಸಂಬಂಧಿಸಿದಂತೆ ಕೋಷ್ಟಕ ೨ರಲ್ಲಿ ನೀಡಲಾಗಿದೆ.

ಈಗಾಗಲೆ ಚರ್ಚಿಸಿರುವಂತೆ ಮುಸ್ಲಿಮರ ಒಟ್ಟು ಸಂತಾನೋತ್ಪತ್ತಿ ಪ್ರಮಾಣವು ೨೦೦೧ ಮತ್ತು ೨೦೧೧ರಲ್ಲಿ ಹಿಂದೂಗಳಲ್ಲಿರುವುದಕ್ಕಿಂತ ಅಧಿಕ ವಾಗಿದೆ. ಆದರೆ ೨೦೦೧ ಮತ್ತು ೨೦೧೧ರ ನಡುವೆ ಹಿಂದೂ ಮತ್ತು ಮುಸ್ಲಿಮರ ಒಟ್ಟು ಸಂತಾನೋತ್ಪತ್ತಿ ಪ್ರಮಾಣಗಳ ನಡುವಿನ ವ್ಯತ್ಯಾಸವು ಎಲ್ಲ ಎಂಟು ರಾಜ್ಯಗಳಲ್ಲಿಯೂ ಕಡಿಮೆಯಾಗುತ್ತಿದೆ. ಉದಾ:

**ಕೋಷ್ಟಕ ೨**

| ಹಿಂದೂ-ಮುಸ್ಲಿಮ್ ಜನಸಂಖ್ಯೆಯಲ್ಲಿ ಒಟ್ಟು ಸಂತಾನೋತ್ಪತ್ತಿ ಪ್ರಮಾಣ : ೨೦೦೧ ಮತ್ತು ೨೦೧೧ | | | | | |
|---|---|---|---|---|---|
| ದಕ್ಷಿಣ ಭಾರತದ ರಾಜ್ಯಗಳು | ಒಟ್ಟು ಸಂತಾನೋತ್ಪತ್ತಿ ಪ್ರಮಾಣ : ೨೦೧೧ | | ಉತ್ತರ ಭಾರತದ ರಾಜ್ಯಗಳು | ಒಟ್ಟು ಸಂತಾನೋತ್ಪತ್ತಿ ಪ್ರಮಾಣ : ೨೦೧೧ | |
| | ಹಿಂದೂ | ಮುಸ್ಲಿಮ್ | | ಹಿಂದೂ | ಮುಸ್ಲಿಮ್ |
| ಆಂಧ್ರಪ್ರದೇಶ | ೧.೬(೨.೩) | ೧.೮(೨.೮) | ಉತ್ತರ ಪ್ರದೇಶ | ೨.೬(೪.೧) | ೨.೯(೪.೮) |
| ಕರ್ನಾಟಕ | ೧.೮(೨.೩) | ೨.೨(೩.೨) | ಬಿಹಾರ | ೨.೯(೪.೫) | ೨.೩(೫.೧) |
| ಕೇರಳ | ೧.೫(೧.೫) | ೨.೩(೨.೬) | ಮಧ್ಯ ಪ್ರದೇಶ | ೨.೬(೩.೯) | ೨.೬(೩.೮) |
| ತಮಿಳುನಾಡು | ೧.೬(೧.೮) | ೧.೯(೨.೧) | ರಾಜಸ್ಥಾನ | ೨.೮(೪.೧) | ೩.೪(೪.೮) |

ವೆಬ್‌ಸೈಟ್ : http://www.ideasforindia.in>topics,developmenthindu-muslims

ಉತ್ತರ ಪ್ರದೇಶ ಮತ್ತು ಬಿಹಾರಗಳಲ್ಲಿ ಒಟ್ಟು ಸಂತಾನೋತ್ಪತ್ತಿ ಪ್ರಮಾಣಗಳು ೨೦೦೧ ಮತ್ತು ೨೦೧೧ರಲ್ಲಿ ಕ್ರಮವಾಗಿ ೪.೮ ರಿಂದ ೨.೯ ಕ್ಕೆ ಮತ್ತು ೫.೧ರಿಂದ ೨.೩ಕ್ಕೆ ಇಳಿದಿದೆ. ಈ ಕಡಿಮೆ ಯಾಗುತ್ತಿರುವ ಪ್ರಮಾಣ ದಕ್ಷಿಣ ರಾಜ್ಯಗಳಲ್ಲಿ ಅಧಿಕವಾಗಿದ್ದರೆ ಉತ್ತರ ಭಾರತದ ರಾಜ್ಯಗಳಲ್ಲಿ ಕಡಿಮೆಯಿದೆ. ಇವೆರಡೂ ಧಾರ್ಮಿಕ ಸಮುದಾಯಗಳ ನಡುವಿನ ಜನಸಂಖ್ಯೆಯ ಬೆಳವಣಿಗೆ ಪ್ರಮಾಣದಲ್ಲಿನ ವ್ಯತ್ಯಾಸವು ಕಡಿಮೆಯಾಗುತ್ತಿದೆ.

ನಮ್ಮ ಸಮಾಜದ ಸಂದರ್ಭದಲ್ಲಿ ಜನಸಂಖ್ಯಾ ಸ್ಫೋಟ ಎನ್ನುವುದಕ್ಕೆ ಇಂದು ಯಾವುದೇ ಅರ್ಥವಿಲ್ಲ. ಯಾವುದನ್ನು ಅಮೆರಿಕೆಯ ಜನಸಂಖ್ಯಾಶಾಸ್ತ್ರಜ್ಞ ಪಾಲ್ ಎಲ್‌ರಿಚ್ ಹೇಳಿದ 'ಪಾಪ್ಯುಲೇಶನ್ ಬಾಂಬ್' ಎನ್ನುವ ಪರಿಭಾಷೆ ಇಂದು ಅಪ್ರಸ್ತುತವಾಗಿದೆ. ವಿದೇಶಿ ತಜ್ಞರೆಲ್ಲರೂ ನುಡಿದಿದ್ದ ಜನಸಂಖ್ಯೆಯ ಆಸ್ಫೋಟದಿಂದಾಗಿ ಬರಗಾಲ ಬಂದು ಮತ್ತು ಹಸಿವಿನ ಹಾಹಾಕಾರ ಉಂಟಾಗಿ ಭಾರತದ ಆರ್ಥಿಕತೆಯು ಮೂರಾಬಟ್ಟೆಯಾಗುತ್ತದೆ ಎನ್ನುವ ಭವಿಷ್ಯವಾಣಿಯು ಸುಳ್ಳಾಗಿದೆ. ನಮ್ಮ ದೇಶವು ಜನಸಂಖ್ಯೆಯ ಬೆಳವಣಿಗೆಯನ್ನು ತೀವ್ರಗತಿಯಲ್ಲಿ ತಡೆಗಟ್ಟುವುದರಲ್ಲಿ




ಯಶಸ್ವಿಯಾಗಿದೆ. ಜನಸಂಖ್ಯೆಯ ಬೆಳವಣಿಗೆಯನ್ನು ಇಂದು ಆತಂಕಕಾರಿಯಾಗಿ ಬಿಂಬಿಸುವ ಅಗತ್ಯವಿಲ್ಲ. ಜನರ ವಿವೇಕಯುತ ತಿಳುವಳಿಕೆ ಬಗ್ಗೆ ಅನುಮಾನವಿಟ್ಟುಕೊಳ್ಳುವುದು ಅಪೇಕ್ಷಣೀಯವಲ್ಲ. ಆರೋಗ್ಯ ಕ್ಷೇತ್ರದಲ್ಲಿ ನಡೆದ ಅದ್ಭುತವೆನ್ನಬಹುದಾದ ಸುಧಾರಣೆಗಳು(ಉದಾ. ಪ್ಲೇಗಿನ ನಿರ್ಮೂಲನೆ), ಶಿಕ್ಷಣಕ್ಷೇತ್ರದಲ್ಲಿನ ಬೆಳವಣಿಗೆ, ಆಹಾರ ಭದ್ರತೆ, ಸಾರಿಗೆ-ಮಾಹಿತಿ ಕ್ಷೇತ್ರದಲ್ಲಿನ ಪ್ರಗತಿ ಮುಂತಾದವುಗಳ ಕಾರಣವಾಗಿ ಜನಸಂಖ್ಯೆಯ ಬೆಳವಣಿಗೆಯನ್ನು ನಿಯಂತ್ರಿಸುವುದು ಸಾಧ್ಯವಾಗಿದೆ.

**ಒಟ್ಟು ೦-೬ ವಯೋಮಾನದ ಮಕ್ಕಳ ಸಂಖ್ಯೆ: ೨೦೦೧-೨೦೧೧**

ಜನಸಂಖ್ಯೆಯ ಬೆಳವಣಿಗೆಯು ದಕ್ಷಿಣ ಭಾರತದ ರಾಜ್ಯಗಳಲ್ಲಿ ನಿಯಂತ್ರಣಕ್ಕೆ ಬಂದಿದೆ ಮತ್ತು ಉತ್ತರ ಭಾರತದಲ್ಲಿ ಇದು ಜೀವಂತವಾಗಿದೆ ಎಂಬುದಕ್ಕೆ ಒಂದು ಪ್ರಮುಖ ಸೂಚನೆಯೆಂದರೆ ೦-೬ ವರ್ಷಗಳ ವಯೋಮಾನದ ಮಕ್ಕಳ ಸಂಖ್ಯೆ. ಬಿಹಾರ, ಹರಿಯಾಣ, ಮಧ್ಯಪ್ರದೇಶ, ಉತ್ತರ ಪ್ರದೇಶ ರಾಜ್ಯಗಳಲ್ಲಿ ೦-೬ ವಯೋಮಾನದ ಮಕ್ಕಳ ಸಂಖ್ಯೆಯು ೨೦೦೧ರಲ್ಲಿ ೬೨೫.೪೭ ಲಕ್ಷದಷ್ಟಿದ್ದುದು ೨೦೧೧ರಲ್ಲಿ ಇದು ೬೪೧.೧೩ ಲಕ್ಷಕ್ಕೇರಿದೆ. ಆದರೆ ಕರ್ನಾಟಕ, ಕೇರಳ, ತಮಿಳುನಾಡು ಮತ್ತು ಆಂಧ್ರಪ್ರದೇಶ ರಾಜ್ಯಗಳಲ್ಲಿ ಮಕ್ಕಳ ಸಂಖ್ಯೆಯು ೨೦೦೧ರಲ್ಲಿ ೨೮೩.೮೨ ಲಕ್ಷದಷ್ಟಿದ್ದುದು ೨೦೧೧ರಲ್ಲಿ ೨೭೧.೯೮ ಲಕ್ಷಕ್ಕಿಳಿದಿದೆ. ಇದು ಏನ್ನು ಸೂಚಿಸುತ್ತದೆ? ಉತ್ತರ ಭಾರತದ ರಾಜ್ಯಗಳಲ್ಲಿ ಕುಟುಂಬದ ಸರಾಸರಿ ಗಾತ್ರ ೨೦೧೧ರಲ್ಲಿ ೫ ಕ್ಕಿಂತ ಅಧಿಕವಿದ್ದರೆ ದಕ್ಷಿಣ ಭಾರತದ ರಾಜ್ಯಗಳಲ್ಲಿ ಇದು ೪ರಷ್ಟಿದೆ. ಪ್ರಧಾನಮಂತ್ರಿಯವರು ತಮ್ಮ ಸ್ವಾತಂತ್ರ್ಯ ದಿನಾಚರಣೆಯಂದು ನೀಡಿದ ಭಾಷಣದಲ್ಲಿ ಮಂಡಿಸಿರುವ ಮಾನದಂಡದ ಪ್ರಕಾರ ದಕ್ಷಿಣ ಭಾರತದ ರಾಜ್ಯಗಳ ಜನರು ಉತ್ತರ ಭಾರತದ ರಾಜ್ಯಗಳಲ್ಲಿನ ಜನರಿಗಿಂತ ಹೆಚ್ಚು 'ದೇಶಭಕ್ತ'ರು ಎಂದು ಹೇಳಲು ಬರುತ್ತದೆಯೇ?

ಒಟ್ಟು ಇಲ್ಲಿನ ಚರ್ಚೆಯ ಪ್ರಮುಖ ತಥ್ಯವಿಷ್ಟು, ಒಂದು ಪ್ರದೇಶದಲ್ಲಿನ ಜನಸಂಖ್ಯೆಯ ತೀವ್ರಗತಿ ಬೆಳವಣಿಗೆಗೆ ಅಲ್ಲಿನ ಜನಸಂಖ್ಯೆಯಲ್ಲಿನ ಮುಸ್ಲಿಮರ ಪ್ರಮಾಣವನ್ನು ಕಾರಣವನ್ನಾಗಿ ಮಾಡುವುದಕ್ಕೆ

ಆಧಾರ ಬಹಳ ತೆಳುವಾಗಿದೆ. ಒಂದು ಪ್ರದೇಶದಲ್ಲಿನ ಜನಸಂಖ್ಯೆಯ ಬೆಳವಣಿಗೆಗೆ ಅಲ್ಲಿನ ಮಹಿಳೆಯರ ಸಾಕ್ಷರತೆ ಮತ್ತು ಲಿಂಗ ಸಮಾನತೆಗಳು ಮಹತ್ವದ ಪಾತ್ರ ನಿರ್ವಹಿಸುತ್ತವೆ ಎಂಬುದಕ್ಕೆ ಅನೇಕ ಅಧ್ಯಯನಗಳಲ್ಲಿ ನಮಗೆ ಅನೇಕ ಪುರಾವೆಗಳು ದೊರೆಯುತ್ತವೆ. ನಮ್ಮದು ಮೂಲಭೂತವಾಗಿ ಲಿಂಗ ಅಸಮಾನತೆಯ ಮತ್ತು ಪುರುಷ ಪ್ರಧಾನ ಸಮಾಜ. ಲಿಂಗ ಸಮಾನತೆಯನ್ನು ಇಂದಿಗೂ ನಮ್ಮ ಸಮಾಜವು ಒಂದು ಸಾಮಾಜಿಕ ಮೌಲ್ಯವಾಗಿ ಒಪ್ಪಿಕೊಂಡಿಲ್ಲ. ಧಾರ್ಮಿಕವಾಗಿ ಮಹಿಳೆಯರು ಅನೇಕ ಬಗೆಯ ತಾರತಮ್ಯಗಳನ್ನು ಲಾಗಾಯ್ತಿನಿಂದ ಅನುಭವಿಸಿಕೊಂಡು ಬರುತ್ತಿದ್ದಾರೆ. ಈ ಲಿಂಗ ಅಸಮಾನತೆಯ ಪ್ರಣಾಳಿಕೆಯು ಅನೂಚಾನವಾಗಿ ನಮ್ಮ ಸಮಾಜದಲ್ಲಿ ಹರಿದುಕೊಂಡು ಬರುತ್ತಿದೆ ಎಂಬುದಕ್ಕೆ ೨೦೧೮ರಲ್ಲಿ ಸರ್ವೋಚ್ಚ ನ್ಯಾಯಾಲಯದ ಸಂವಿಧಾನ ಪೀಠವು ಪ್ರಗತಿಪರ ನೆಲೆಯಲ್ಲಿ ಕೇರಳದ ಶಬರಿಮಲೆಯ ಅಯ್ಯಪ್ಪಸ್ವಾಮಿ ದೇವಾಲಯಕ್ಕೆ ಮಹಿಳೆಯರ ಪ್ರವೇಶದ ಮೇಲಿದ್ದ ನಿಷೇಧವನ್ನು ರದ್ದುಪಡಿಸಿ ನೀಡಿದ ತೀರ್ಪಿನ ವಿರುದ್ಧ ಸಮಾಜದ ಚಾತುರ್ವರ್ಣ ಪ್ರಣೀತ ಪ್ರಣಾಳಿಕೆಯನ್ನು ಒಪ್ಪಿಕೊಂಡಿರುವ ವರ್ಗವು ನಡೆಸುತ್ತಿರುವ ಚಳುವಳಿಯಲ್ಲಿ ಇದನ್ನು ಕಾಣಬಹುದು. ಜನಸಂಖ್ಯೆಯ ಬೆಳವಣಿಗೆಯು ಇಂದು ದಕ್ಷಿಣ ಭಾರತದ ರಾಜ್ಯಗಳಲ್ಲಿ ಸಮಸ್ಯೆಯಾಗಿ ಉಳಿದಿಲ್ಲ. ಇಡೀ ಭಾರತಕ್ಕೆ ಅಖಂಡ ರೀತಿಯ ಜನಸಂಖ್ಯಾ ನೀತಿಯನ್ನು ಅನುಸರಿಸುವುದರಿಂದ ಸಮಸ್ಯೆಯು ಪರಿಹಾರವಾಗುವುದಿಲ್ಲ. ವಿವಿಧ ರಾಜ್ಯಗಳಲ್ಲಿ ವಿವಿಧ ರೀತಿಯ ಕ್ರಮಗಳನ್ನು ತೆಗೆದುಕೊಳ್ಳಬೇಕಾಗುತ್ತದೆ. ಆದರೆ ಬಲವಂತದ ಅಥವಾ ದಂಡವನ್ನು ಬೀಸುವ ಕ್ರಮಗಳಿಂದ ಈ ಸಮಸ್ಯೆಯು ಬಗೆಹರಿಯುವುದಿಲ್ಲ. ಅಸ್ಸಾಮಿನಲ್ಲಿ ಎರಡು ಮಕ್ಕಳಿಗಿಂತ ಅಧಿಕವಿರುವ ಪಾಲಕರನ್ನು ಸರ್ಕಾರಿ ಉದ್ಯೋಗಕ್ಕೆ ಅನರ್ಹರನ್ನಾಗಿ ಸಲಾಗಿದೆ. ಅಂತಹ ಪಾಲಕರು ಸ್ಥಳೀಯ ಸಂಸ್ಥೆಗಳ ಚುನಾವಣೆಗೆ ಸ್ಪರ್ಧಿಸುವುದನ್ನು ನಿಷೇಧಿಸಲಾಗಿದೆ. ಇಂತಹ ಕ್ರಮಗಳಿಂದ ಹೆಚ್ಚು ಪ್ರಯೋಜನವಿಲ್ಲ. ನಮ್ಮ ಸರ್ಕಾರವು ಜನಸಂಖ್ಯಾ ನೀತಿಯನ್ನು ರೂಪಿಸುವಾಗ ಮತ್ತು ಅದಕ್ಕೆ ಸಂಬಂಧಿಸಿದ ಕ್ರಮಗಳನ್ನು ತೆಗೆದುಕೊಳ್ಳುವಾಗ ಬಹಳ ಎಚ್ಚರಿಕೆ ವಹಿಸಬೇಕಾಗುತ್ತದೆ. ಬಲವಂತದ ಅಥವಾ ದಂಡ ಪ್ರಯೋಗದ ಕ್ರಮಗಳಿಂದ ಹೆಚ್ಚು ಅಪಾಯಕ್ಕೆ ಒಳಗಾಗುವವರು ಮಹಿಳೆಯರು ಮತ್ತು ಬಡಕುಟುಂಬಗಳು ಎಂಬುದನ್ನು ಗಮನಿಸುವ ಅಗತ್ಯವಿದೆ. ನಮ್ಮ ಪ್ರಧಾನಮಂತ್ರಿಯವರ ಸ್ವಾತಂತ್ರ್ಯ ದಿನಾಚರಣೆಯ ಸಂದೇಶವು ಜನರ ಸ್ವಾತಂತ್ರ್ಯ ಹರಣದಲ್ಲಿ ಪರ್ಯವಸಾನವಾಗಬಾರದು. ಈ ಬಗ್ಗೆ ಜನಸಂಖ್ಯಾ ತಜ್ಞರ ಸಲಹೆ–ಮಾರ್ಗದರ್ಶನವನ್ನು ಪಡೆದುಕೊಳ್ಳುವುದು ಸೂಕ್ತ. ಒಟ್ಟಾರೆ ಇದನ್ನು ಭಾವನಾತ್ಮಕ ನೆಲೆಯಲ್ಲಿ ಪರಿಗಣಿಸದೆ ವಸ್ತುನಿಷ್ಠವಾಗಿ ಯೋಚಿಸಿ ಕ್ರಮಗಳನ್ನು ತೆಗೆದುಕೊಳ್ಳಬೇಕು. ಕುಟುಂಬದ ಗಾತ್ರ ಮತ್ತು ದೇಶಭಕ್ತಿಗಳ ನಡುವಿನ ಸಂಬಂಧವನ್ನು ವಿವೇಕಯುತವಾಗಿ ಮರುಪರಿಶೀಲಿಸುವ ಅಗತ್ಯವಿದೆ. ಮಹಿಳೆಯರ ಸಾಕ್ಷರತೆ, ಕುಟುಂಬಗಳಲ್ಲಿ ತೀರ್ಮಾನ ತೆಗೆದುಕೊಳ್ಳುವಲ್ಲಿ ಮಹಿಳೆಯರ ಸ್ವಾಯತ್ತತೆ, ಅವರ ಆಸ್ತಿ ಹಕ್ಕು, ಮನೆಯ ಹೊರಗಿನ ಉದ್ಯೋಗದ ಅವಕಾಶಗಳು ಮುಂತಾದವುಗಳನ್ನು ಉತ್ತಮಪಡಿಸುವ ಮೂಲಕ ಜನಸಂಖ್ಯೆಯ ಬೆಳವಣಿಗೆಯನ್ನು ತೀವ್ರಗತಿಯಲ್ಲಿ ನಿಯಂತ್ರಿಸಬಹುದು. ದಕ್ಷಿಣ ಭಾರತದ ರಾಜ್ಯಗಳು ಜನಸಂಖ್ಯೆಯ ಬೆಳವಣಿಗೆಯನ್ನು ಹೇಗೆ ನಿಯಂತ್ರಿಸಿವೆ ಎಂಬುದರಿಂದ ಉತ್ತರ ಭಾರತದ ಮತ್ತು ಪೂರ್ವಾಂಚಲದ ರಾಜ್ಯಗಳು ಪಾಠ ಕಲಿಯಬೇಕು.

*(ಇಲ್ಲಿ ಬಳಸಿರುವ ಅಂಕಿಸಂಖ್ಯೆಗಳನ್ನು ವಿವಿಧ ಜನಗಣತಿ ವರದಿಗಳಿಂದ, ನೀತಿ ಆಯೋಗದ ಪ್ರಕಟಣೆಯಿಂದ ಮತ್ತು ವೆಬ್‌ಸೈಟುಗಳಿಂದ ಸಂಗ್ರಹಿಸಿಕೊಳ್ಳಲಾಗಿದೆ)*

**ಡಾ॥ ಟಿ. ಆರ್. ಚಂದ್ರಶೇಖರ**
ವಿಶ್ರಾಂತ ಪ್ರಾಧ್ಯಾಪಕ, ನಂ. ೯. ೯/೧೦.
೨ನೆಯ ಮುಖ್ಯ ರಸ್ತೆ, ೪ನೆಯ ಅಡ್ಡ ರಸ್ತೆ
ಬೇಗೂರು ಮುಖ್ಯ ರಸ್ತೆ, ಹೊಂಗಸಂದ್ರ
ಬೆಂಗಳೂರು – ೫೬೦ ೦೬೮
Email : trcshekhara@gmail.com

## ಕತೆಗಾರ ಎಸ್. ಬಿ. ಜೋಗೂರ್ ನಿಧನಕ್ಕೆ ಸಂತಾಪ

ಕನ್ನಡದ ಕತೆಗಾರ, ಅಧ್ಯಾಪಕ, ಜನಪರ ಚಿಂತಕ ಶ್ರೀ ಎಸ್. ಬಿ. ಜೋಗೂರರು ತಮ್ಮ ೫೧ನೇ ವಯಸ್ಸಿನಲ್ಲಿ ಧಾರವಾಡದಲ್ಲಿ ನಿಧನರಾಗಿದ್ದಾರೆ. ಕೆಲವು ದಿನಗಳಿಂದ ಅನಾರೋಗ್ಯಕ್ಕೆ ತುತ್ತಾಗಿದ್ದರು. ತಮ್ಮ ಅನಾರೋಗ್ಯದ ಮಧ್ಯೆಯೂ ಬರಹದ ಮೂಲಕ, ಅಧ್ಯಾಪನದ ಮೂಲಕ ಕ್ರಿಯಾಶೀಲರಾಗಿದ್ದರು. ಗ್ರಾಮೀಣ ಬದುಕಿನ ಬದುಕು, ಭಾಷೆ, ಶೈಲಿಯನ್ನು ತಮ್ಮ ಕಥೆಯಲ್ಲಿ ಅಭಿವ್ಯಕ್ತಗೊಳಿಸುತ್ತಿದ್ದ ಅವರ ಬರಹ ಅನನ್ಯವಾಗಿತ್ತು. 'ಹೊಸತು' ಪತ್ರಿಕೆಗೆ ನಿರಂತರ ಬರೆಯುತ್ತಿದ್ದ ಜೋಗೂರಿಗೆ ಅಂತಿಮ ನಮನಗಳು. ಅವರ ಕುಟುಂಬದ ಸದಸ್ಯರ ನೋವಿನಲ್ಲಿ 'ಹೊಸತು' ಭಾಗಿಯಾಗುತ್ತದೆ.

*–ಸಂ.*

## ಓದುಗರಲ್ಲೊಂದು ವಿಶೇಷ ಮನವಿ

'ಹೊಸತು' ಪತ್ರಿಕೆ ಜಾಹಿರಾತುಗಳಿಗಿಂತ ಹೆಚ್ಚಾಗಿ ಚಂದಾದಾರರ ಮೇಲೆ ಅವಲಂಬಿಸಿರುವುದರಿಂದ ಅದು ಆರ್ಥಿಕವಾಗಿ ಇನ್ನೂ ಸ್ವಾವಲಂಬಿಯಾಗಿಲ್ಲ. ಆದುದರಿಂದ ಆರ್ಥಿಕ ಬೆಂಬಲ ನೀಡುವ ಪ್ರಾಯೋಜಕರ ನೆರವಿನ ಅಗತ್ಯವಿದೆ. ಕನಿಷ್ಠ ರೂ. ೫೦೦೦/– ಹಣ ನೀಡಿ ಪ್ರಾಯೋಜಕರಾಗುವವರ ಹೆಸರನ್ನು ಪತ್ರಿಕೆಯಲ್ಲಿ ಪ್ರಕಟಿಸಲಾಗುವುದು. ಹಾಗೆಯೇ, ಅವರು ಸೂಚಿಸುವ ಯಾವುದಾದರೂ ಇಬ್ಬರು ವ್ಯಕ್ತಿಗಳಿಗೆ /ವಿಳಾಸಗಳಿಗೆ ತಲಾ ಮೂರು ವರ್ಷಗಳ ಅವಧಿಗೆ 'ಹೊಸತು' ಪತ್ರಿಕೆಯನ್ನು ಉಚಿತವಾಗಿ ಕಳಿಸಲಾಗುವುದು (ಅಥವಾ ನಾಲ್ಕು ವ್ಯಕ್ತಿಗಳಿಗೆ ತಲಾ ಒಂದು ವರ್ಷ). ಹಿತೈಷಿಗಳು ಈ ರೀತಿ ಪ್ರಾಯೋಜಕರಾಗುವ ಮೂಲಕ ಪತ್ರಿಕೆ ಆರ್ಥಿಕವಾಗಿ ಸದೃಢಗೊಳ್ಳಲು ಸಹಾಯವಾಗುವುದು.

ನಮ್ಮ ಓದುಗರು ಸ್ವತಃ ಪ್ರಾಯೋಜಕರಾಗಬಹುದು ಅಥವಾ ಅಂತಹವರನ್ನು ಗುರುತಿಸಿ ಅವರು ಪ್ರಾಯೋಜಕರಾಗುವಂತೆ ಪ್ರೇರೇಪಿಸಬಹುದು. ಪ್ರಾಯೋಜಕರಾಗಬಹುದಾದ ಸಮಾನಮನಸ್ಕರ ಹೆಸರು, ವಿಳಾಸ ತಿಳಿಸಿದಲ್ಲಿ ನಾವೇ ಅವರನ್ನು ಸಂಪರ್ಕಿಸುತ್ತೇವೆ.

ಈ ನಿಟ್ಟಿನಲ್ಲಿ ನಮ್ಮ ಓದುಗರು ಹೆಚ್ಚಿನ ಮುತುವರ್ಜಿ ವಹಿಸಿ ಪತ್ರಿಕೆಯ ಬೆಳವಣಿಗೆಗೆ ನೆರವಾಗಬೇಕೆಂದು ನಮ್ಮ ಕಳಕಳಿಯ ಮನವಿ. ಪ್ರಾಯೋಜಕತ್ವದ ರೂ. ೫,೦೦೦ ಮೊಬಲಗನ್ನು 'ಹೊಸತು' ಹೆಸರಿಗೆ ಚೆಕ್ ಅಥವಾ ನಗದು ಮೂಲಕ ಇಲ್ಲವೇ ಕೆನರಾ ಬ್ಯಾಂಕ್, ಮಾಧವನಗರ ಶಾಖೆ, Current A/c No. 0788201015590, IFSC code CNRB0000788 ಇಲ್ಲಿಗೆ ನೇರವಾಗಿ ವರ್ಗಾಯಿಸಬಹುದು.

*– ಪ್ರಕಾಶಕ*

# ಹೆಜ್ಜೆಗಳು ಮೂಡಿಸಿದ ಹಾದಿ

## ೧೮೦೦ – ೧೯೫೦

*(ಮುಂದುವರೆದ ಭಾಗ)*

**ಸುಧಾರಣಾವಾದಿ ಪರಿಣಾಮಗಳು**

ಇಂದಿನ ಕರ್ನಾಟಕವನ್ನು ಆಗಿನ ಬಾಂಬೆ ಮತ್ತು ಮದ್ರಾಸ್ ಪ್ರೆಸಿಡೆನ್ಸಿಗಳಲ್ಲಿ ನೋಡಬೇಕಾಗುತ್ತದೆ. ಟಿಪ್ಪೂವಿನ ನಂತರ ದಂಗೆಯ ಆತಂಕ ನಿವಾರಣೆಗಾಗಿ ಬ್ರಿಟಿಷರು ಅವೈಜ್ಞಾನಿಕ ರೀತಿಯಲ್ಲಿ ವಸಾಹತು ಪ್ರದೇಶಗಳನ್ನು ವಿಂಗಡಿಸಿದರು. ಪೇಶ್ವೆ ಆಡಳಿತ ಕೊನೆಗೊಂಡ ನಂತರ ಧಾರವಾಡ, ಬೆಳಗಾವಿ ಮತ್ತು ಬಿಜಾಪುರಗಳು ಬ್ರಿಟಿಷರ ಅಧೀನಕ್ಕೊಳಪಟ್ಟವು. ಧಾರವಾಡ ಹಾಗೂ ಬೆಳಗಾವಿಗಳನ್ನು 'ಪೂನಾ ಕಮುಸಾರಿಯೇಟ್' ಎಂದು ಕರೆಯಲಾಗುತ್ತಿತ್ತು. ಈ ಭಾಗದಲ್ಲಿ ಜ್ಯೋತಿಬಾ ಫುಲೆಯವರ ವಿಚಾರಗಳ



**ಜ್ಯೋತಿಬಾ ಫುಲೆ**

ಪ್ರಭಾವವಿತ್ತು. ಈ ಭಾಗದಲ್ಲಿ ೧೮೩೦ರಿಂದಲೇ ಮಿಷನರಿ ಶಾಲೆಗಳು ಪ್ರಾರಂಭವಾದವು. ಹೆಂಚಿನ ಮತ್ತು ನೇಯ್ಗೆಯ ಕಾರ್ಖಾನೆಗಳು ಪ್ರಾರಂಭವಾದವು. ಬಾಲಕಿಯರ ಶಿಕ್ಷಣದ ವಿಷಯವು ಆದ್ಯತೆಯನ್ನು ಪಡೆದುಕೊಂಡಿತು. ೧೮೬೭ರಲ್ಲಿ ಧಾರವಾಡದಲ್ಲಿ ಮೊದಲ ಬಾಲಕಿಯರ ಶಾಲೆಯು ಪ್ರಾರಂಭವಾಯಿತು. ೧೮೭೩–೭೪ರ ಅವಧಿಯಲ್ಲಿ ಈ ಶಾಲೆಯಲ್ಲಿ ೪೨೯ ವಿದ್ಯಾರ್ಥಿನಿಯರು ಹೆಸರನ್ನು ದಾಖಲಿಸಿದ್ದರು. ೧೮೮೧–೮೨ರ ವೇಳೆಗೆ ೨೪ ಶಾಲೆಗಳು ಪ್ರಾರಂಭವಾದವು.

೧೮೫೪ರಲ್ಲಿ ಬೆಳಗಾವಿಯಲ್ಲಿ ಸೇಂಟ್‌ಮೇರೀಸ್ ಯುರೋಪಿಯನ್ಸ್ ಸ್ಕೂಲ್ ಫಾರ್ ಬಾಯ್ಸ್ ಆಂಡ್ ಗರ್ಲ್ಸ್ ಪ್ರಾರಂಭವಾಯಿತು. ೧೮೭೫ರಲ್ಲಿ ಲಂಡನ್ ಮಿಶನ್ ಬೆಳಗಾವಿಯಲ್ಲಿ ಬಾಲಕಿಯರ ಶಾಲೆಯನ್ನು ತೆರೆಯಿತು. ಇದು ಬಾಲಕಿಯರಿಗೆ ಉಚಿತ ಶಿಕ್ಷಣವನ್ನು ನೀಡಿತು. ೧೯೧೬ರಲ್ಲಿ ಕೇಂದ್ರ ಶಾಸಕಾಂಗ ಸಭೆಯಲ್ಲಿ ಉಚಿತ ಶಿಕ್ಷಣ ಮಸೂದೆಗೆ ಅನುಮೋದನೆ ಪಡೆವ ಗೋಖಲೆಯವರ ಪ್ರಯತ್ನ ಯಶಸ್ವಿಯಾಗಲಿಲ್ಲ. ೧೯೧೭ರಲ್ಲಿ ಬಾಂಬೆ ಪ್ರೆಸಿಡೆನ್ಸಿಯಲ್ಲಿ ವಿಠಲ್‌ಭಾಯಿ ಪಟೇಲ್ ಮಂಡಿಸಿದ ಕಡ್ಡಾಯ ಪ್ರಾಥಮಿಕ ಶಿಕ್ಷಣ ಮಸೂದೆ ಅನುಮೋದನೆಗೊಂಡು 'ಪಟೇಲ್ ಕಾಯ್ದೆ' ಜಾರಿಗೆ ಬಂದು ಮಹಿಳಾ ಶಿಕ್ಷಣಕ್ಕೆ ಇನ್ನಷ್ಟು ಬೆಂಬಲ ಒದಗಿತು.

ಕರಾವಳಿ ಭಾಗದಲ್ಲಿ ಬಾಸೆಲ್ ಮಿಶನ್ ಹೆಚ್ಚು ಸಕ್ರಿಯವಾಗಿತ್ತು. ಮಹಿಳಾ ಶಿಕ್ಷಣಕ್ಕೆ ಅಪೋಸ್ಟಲ್ ಕಾರ್ಮೆಲ್ ಕೊಡುಗೆ ಮಹತ್ವದ್ದು. ೧೮೭೦ರಲ್ಲಿ ಮಂಗಳೂರಿನಲ್ಲಿ ಬಾಸೆಲ್ ಸಂಸ್ಥೆಯ 'ಬ್ರಾಹ್ಮಿನ್ ಗರ್ಲ್ಸ್ ಸ್ಕೂಲ್' ಪ್ರಾರಂಭವಾಯಿತು. ಇದೇ ವೇಳೆಗೆ ಡೊಂಗರಕೇರಿಯಲ್ಲಿ 'ವಿಕ್ಟೋರಿಯಾ ಕಾಸ್ಟ್ ಸ್ಕೂಲ್' ಪ್ರಾರಂಭವಾಯಿತು. ಸಮಾಜವಾದಿ ಅಮ್ಮೆಂಬಳ ಸುಬ್ಬರಾವ್ ಈ ಭಾಗದಲ್ಲಿ ಮಹಿಳಾ ಶಿಕ್ಷಣವನ್ನು ಪ್ರೋತ್ಸಾಹಿಸಿದರು. ೧೮೯೪ರಲ್ಲಿ ಸಂಪ್ರದಾಯವಾದಿಗಳ ವಿರೋಧದ ನಡುವೆಯೂ ಕೆನರಾ ಗರ್ಲ್ಸ್ ಹೈಸ್ಕೂಲ್ ಶುರುವಾಯಿತು. ೧೯೦೦ರಲ್ಲಿ ಕಾರ್ಕಳದಲ್ಲಿ ಮಿಶನರಿ ಶಾಲೆ ಪ್ರಾರಂಭವಾಯಿತು. ಆದರೆ, ಬಾಲ್ಯವಿವಾಹದಂತಹ ಜಾಡ್ಯದ ಪರಿಣಾಮವಾಗಿ ಮಹತ್ವದ ಮುನ್ನಡೆಯು ಸಾಧ್ಯವಾಗಲಿಲ್ಲ.

ರೊದ್ದ ತಿರುಮಲರಾಯರು ವೃತ್ತಪತ್ರಿಕೆಗಳ ಮೂಲಕ, ಜನಜಾಗೃತಿಯ ಮೂಲಕ ಮಹಿಳಾ ಶಿಕ್ಷಣದ ಪರ ಜನಮತವನ್ನು ರೂಪುಗೊಳಿಸ ತೊಡಗಿದರು. ಪಂಡಿತಾ ರಮಾಬಾಯಿಯಂಥವರ ಬದುಕು ಸಂಪ್ರದಾಯವಾದಿಗಳಿಗೆ ಆತಂಕಕಾರಿಯಾಗಿ ಕಂಡಿತ್ತು. ಮಹಿಳಾ ಶಿಕ್ಷಣದಿಂದ ಸ್ಥಾಪಿತ ಜಾತಿ–ಧರ್ಮಗಳ ಚೌಕಟ್ಟಿಗೆ ಧಕ್ಕೆ ಒದಗಬಹುದೇ ಎಂಬ ಆಂತಕವಿತ್ತು. ಇದೇ ಅವಧಿಯಲ್ಲಿ ಮುಂಬೈ ಗೆಜೆಟೇರಿಯನ್‌ನಲ್ಲಿ ಹೆಣ್ಣುಮಕ್ಕಳು ಉತ್ತಮ ಗೃಹಿಣಿಯರಾಗಲು ಮತ್ತು ಯೋಗ್ಯ ತಾಯಂದಿರಾಗಲು ಅವರಿಗೆ ಶಿಕ್ಷಣ ನೀಡಬೇಕು ಎಂಬ ದಾಖಲೆಯಿರುವುದು ಈ ಆತಂಕದ ಪರಿಹಾರೋಪಾಯವಾಗಿದೆ. ಆರ್. ಜಿ. ಭಂಡಾರ್ಕರ್ ಅವರು ಮಹಿಳಾ ಶಿಕ್ಷಣದ ಪರವಾಗಿದ್ದರು. ಇದೇ ಅವಧಿಯಲ್ಲಿ ಉನ್ನತ ವ್ಯಾಸಂಗ ಪೂರೈಸಿದ ಯುವಕರಿಗೆ, ಸುಶಿಕ್ಷಿತ ವಧುಗಳನ್ನು ಒದಗಿಸುವ – ಸಾಮಾಜಿಕ ಚಿಂತನೆಯ ಕಾರಣದಿಂದ ಮಹಿಳಾ ಶಿಕ್ಷಣವು ಆದ್ಯತೆಯನ್ನು ಪಡೆಯಿತು. ಆದರೆ ಈ ಬದಲಾವಣೆಯಿಂದ ಬಹುಸಂಖ್ಯಾತ ಮಹಿಳಾ ಸಮುದಾಯ ದೂರವೇ ಇತ್ತು.

**ಡಾ॥ ವಿನಯಾ ಒಕ್ಕುಂದ**

ಮಹಿಳಾ ಶಿಕ್ಷಣವು ನೂರೊಂದು ಸಾಮಾಜಿಕ ವಿದ್ಯಮಾನಗಳೊಂದಿಗೆ ತಳಕುಹಾಕಿಕೊಂಡಿದ್ದು, ಬಾಲ್ಯವಿವಾಹ, ವಿಧವಾ ಸಮಸ್ಯೆಗಳಲ್ಲಿ ಬದಲಾವಣೆ ಬರದೆ ಮಹಿಳಾ ಶಿಕ್ಷಣದ ಸ್ಥಿತಿ ಬದಲಲು ಸಾಧ್ಯವಿರಲಿಲ್ಲ. ಮಂಗಳೂರಿನಲ್ಲಿ 'ಡಿಪ್ರೆಸ್ಡ್ ಕ್ಲಾಸಸ್ ಮಿಶನ್' ಪ್ರಾರಂಭಿಸಿದ್ದ ಕುದ್ಮುಲ್ ರಂಗರಾಯರು ಹಿಂದುಳಿದ ವರ್ಗಗಳ ಮಹಿಳೆಯರ ಏಳಿಗೆಗೆ ಪ್ರಯತ್ನಿಸಿದರು. ಹಿಂದುಳಿದ ವರ್ಗಗಳಿಗೆ ಶಿಕ್ಷಣ, ಕೃಷಿ ಭೂಮಿ ಮತ್ತು ವಾಸದ ಮನೆಯನ್ನು ದೊರಕಿಸಬೇಕೆಂಬುದು ಅವರ ಕನಸಾಗಿತ್ತು. ಈ ಕನಸನ್ನು ಕ್ರಿಯಾ ರೂಪಕ್ಕಿಳಿಸಲು ಅವರು ಮತ್ತು ಅವರ ಕುಟುಂಬ ಸಾಮಾಜಿಕ ಬಹಿಷ್ಕಾರಕ್ಕೂ ಒಳಗಾಗಬೇಕಾಯಿತು. ಬಾಲವಿಧವೆಯರಿಗೆ ಶಾಲೆ ತೆರೆವ ಅವರ ಕನಸು, ಅವರ ಮರಣಾನಂತರ ಬೆನಗಲ್ ರಾಮರಾಯರು ಭೂಮಿದಾನ ಮಾಡಿದ ಮೇಲೆ ಈಡೇರುವಂತಾಯಿತು.

ಸಮಾಜ ಪರಿವರ್ತನೆಯ ತುಡಿತವು ಬರಹದ ಚಳುವಳಿಯಾಗಿಯೂ ನಡೆಯಿತು. ವೆಂಟಕರಂಗೋ ಕಟ್ಟಿಯವರು ತಮ್ಮ ಅನುಭವ ಮತ್ತು ವಿಚಾರಗಳನ್ನು ಕೂಡಿಸಿ ಬರೆದ 'ವಿಧವೆಯ ಇತಿಹಾಸ' ಕೃತಿಯು ಸಾಕಷ್ಟು ಪ್ರಶ್ನೆಗಳನ್ನು ಹುಟ್ಟುಹಾಕಿತು. ವಿಧವೆಯರ ಕೇಶಮುಂಡನವನ್ನವರು ಬಲವಾಗಿ ವಿರೋಧಿಸಿದರು. ೫೦೦ ರೂ.ಗಳ ಪಣವನ್ನಿಟ್ಟು 'ವಿಧವಾ ವಿವಾಹಕ್ಕೆ ಶಾಸ್ತ್ರ ವಿರೋಧವಿಲ್ಲ' ಎಂಬ ವಿಷಯದ ಚರ್ಚೆಗೆ ಆಹ್ವಾನವಿತ್ತರು. ಆದರೆ ಉತ್ತರಾದಿ ಮಠದವರ ಮಠೀಯ ಚರ್ಚೆಯ ಎದುರು ಗೆಲ್ಲಲಾಗಲಿಲ್ಲ. ಮಂಜೇಶ್ವರ ಶಿವರಾಂ ಅವರ 'ವಿವಾಹ ಕನ್ಯಾ ಸ್ವರೂಪ ನಿರೂಪಣಂ' ಕೃತಿ, ಶಾಮರಾವ್ ಕೈಕಿಣಿಯವರ ಬರಹಗಳು, ಎನ್.ಜಿ. ಚಂದಾವರ್ಕರ್ ಅವರ ಕಾನೂನು ಹೋರಾಟಗಳು ಪ್ರಮುಖವಾದವು. ಆರ್. ಜಿ. ಭಂಡಾರ್ಕರ್ ತಮ್ಮ ವಿಧವೆ ಪುತ್ರಿಗೆ ಮರುವಿವಾಹವನ್ನು ಏರ್ಪಡಿಸಿದಾಗ ಇಡೀ ಸಮಾಜ ಅಲ್ಲೋಲ–ಕಲ್ಲೋಲಗೊಂಡಿತು. ಈ ವಿವಾಹವು ಕಣ್ಣಾಪುರ ಮಠ ಮತ್ತು ಚಿತ್ರಾಪುರ ಮಠಗಳ ನ್ಯಾಯ ನಿರ್ಣಯದ ಮೆಟ್ಟಿಲನ್ನೇರಿತು. ಸ್ವತಃ ವಿದ್ವಾಂಸರಾಗಿದ್ದ ಭಂಡಾರ್ಕರರು ಶಾಸ್ತ್ರ ಸಮ್ಮತಿಯನ್ನು ಪ್ರಸ್ತುತಪಡಿಸಿದರು. ಸಮಾಜವು ಮಹಿಳಾ ಶಿಕ್ಷಣದ ಅಗತ್ಯವನ್ನು ಸ್ವಲ್ಪಮಟ್ಟಿಗೆ ಒಪ್ಪಿಕೊಂಡರೂ, ವಿಧವಾ ವಿವಾಹವನ್ನು ಒಪ್ಪಿಕೊಂಡಿರಲಿಲ್ಲ. ೧೮೪೨ರಲ್ಲಿ

ವಿಷ್ಣುಶಾಸ್ತ್ರಿ ಪಂಡಿತರು 'ವಿಧವಾ ವಿವಾಹೋತ್ತೇಜಕ ಮಂಡಲ'ವನ್ನು ಸ್ಥಾಪಿಸಿದರು. ಬೆಳಗಾವಿಯಲ್ಲಿ ೨ ಬ್ರಾಹ್ಮಣ ವಿಧವಾ ವಿವಾಹಗಳು ನಡೆದವು. ೧೮೪೯ರಲ್ಲಿ ದಾದಾಭಾಯಿ ಪಾಂಡುರಂಗ ಸ್ಥಾಪಿಸಿದ 'ಪರಮಹಂಸ ಮಂಡಳಿ'ಯು ವಿಧವಾ ವಿವಾಹ ಮತ್ತು ಶಿಕ್ಷಣಕ್ಕೆ ಬೆಂಬಲವಿತ್ತಿತು. ಬ್ರಹ್ಮಸಮಾಜದಿಂದ ಪ್ರಭಾವಿತರಾಗಿದ್ದ ನೀರೇಶ್ವಲ್ಯ ಅರಸಪ್ಪ ಮತ್ತು ಉಲ್ಲಾಳ ರಘುನಾಥಯ್ಯನವರು ಮಹಿಳಾ ಪರವಾಗಿ ಕೆಲಸ ಮಾಡಿದರು.

ಈ ಸುಧಾರಣಾವಾದದ ಪ್ರಭಾವ ಕನ್ನಡ ಸಾಹಿತ್ಯದ ಮೇಲಾಯಿತು. ಆಧುನಿಕ ಕನ್ನಡದ ಮೊದಲ ಕಾದಂಬರಿಗಳಾದ 'ವಾಗ್ದೇವಿ', 'ಇಂದಿರಾಬಾಯಿ'ಗಳು ವಿಧವಾ ವಿವಾಹ ಮತ್ತು ಮಹಿಳಾ ಶಿಕ್ಷಣವನ್ನು ಕೇಂದ್ರವಾಗಿ ಹೊಂದಿದ್ದವು. ೧೮೯೯ರಲ್ಲಿ ಗುಲ್ವಾಡಿ ವೆಂಕಟರಾವ್ ಅವರಿಂದ, ೧೯೦೫ರಲ್ಲಿ ಬೋಳುವಾರು ಬಾಬುರಾವ್ ಅವರಿಂದ ರಚಿಸಲ್ಪಟ್ಟ ಈ ಕೃತಿಗಳು ಮಹಿಳಾ ಸಮಸ್ಯೆಯನ್ನು ಉದಾರವಾಗಿ ನೋಡಿದವು. ಆದರೆ ಹೆಣ್ಣಿನ ಕುರಿತ ಒಟ್ಟಾರೆ ನಿಲುವೇ ಪ್ರಗತಿಪರವಾಗಿತ್ತು ಎನ್ನಲು ಸಾಧ್ಯವಿಲ್ಲ. ಕೆರೂರು ವಾಸುದೇವಾಚಾರ್ಯರ 'ಇಂದಿರಾ' ಕಥೆಯು ಹೆಣ್ಣಿನ ಶುದ್ಧತೆಗೆ ಭಂಗ ಬರುತ್ತದೆಂಬ ಕಾರಣವನ್ನು ಮುಂದೊಡ್ಡಿ ಪುನರ್‌ವಿವಾಹವನ್ನು ನಿರಾಕರಿಸುತ್ತದೆ. ಎಂ. ಎಸ್. ಪುಟ್ಟಣ್ಣನವರ 'ಮಾಡಿದ್ದುಣ್ಣೋ ಮಹರಾಯ' ಕೃತಿಯು ಸಹಗಮನವನ್ನು ವೈಭವೀಕರಿಸುತ್ತದೆ. ಹೆಣ್ಣಿನ ಸಾಂಪ್ರದಾಯಿಕತೆಯನ್ನು ಬೆಂಬಲಿಸುವ ಆರ್ಯನಾರೀ ಪರಿಕಲ್ಪನೆಯು ಮಹಿಳಾ ಅಭಿವ್ಯಕ್ತಿಗೂ ತೊಡರುಗಾಲಾಗಿತ್ತು.

ಈ ದ್ವಂದ್ವದೊಂದಿಗೇ ಮಹಿಳಾ ಅಭಿವ್ಯಕ್ತಿಯ ಮತ್ತು ಉದಾರವಾದದ ಸುಧಾರಣಾ ಯತ್ನಗಳು ನಡೆದವು. ಈ ಕಾಲದಲ್ಲಿ ಬರಹಲೋಕಕ್ಕೆ ಪಾದಾರ್ಪಣ ಮಾಡಿದ ಮಹಿಳೆಯರಿಗೆ ಬರಹ ಎನ್ನುವುದು ಸಾಮಾಜಿಕ ಆಂದೋಲನದ ಭಾಗವೂ ಆಗಿತ್ತು. ನಂಜನಗೂಡಿನ ತಿರುಮಲಾಂಬಾ ಮಹಿಳೆಯರ ಬರವಣಿಗೆಗೆ ಇಂಬು ನೀಡಲು ೧೯೧೬ರಲ್ಲಿ 'ಸತಿ ಹಿತೈಷಿಣಿ' ಗ್ರಂಥಮಾಲೆಯನ್ನು ಪ್ರಾರಂಭಿಸಿದರು. ಸ್ತ್ರೀಯರಿಂದ ಸ್ತ್ರೀಯರಿಗಾಗಿ ಮೊಟ್ಟ ಮೊದಲ ಪತ್ರಿಕೆ 'ಕರ್ನಾಟಕ ನಂದಿನಿ'ಯನ್ನು ಆರಂಭಿಸಿದರು. ಅದು ಕನ್ನಡ ಪತ್ರಿಕೋದ್ಯಮದ ಚಿನ್ನದ ಹಬ್ಬದ ವರ್ಷವಾಗಿತ್ತು. ಇದುವರೆಗಿನ ಪತ್ರಿಕಾ ಕ್ಷೇತ್ರವು ಮಹಿಳೆಯರಿಗೆ ಸಾಮಾಜಿಕ – ಧಾರ್ಮಿಕ ನೀತಿಗಳನ್ನು ಬೋಧಿಸುವುದರಲ್ಲಿಯೇ ತಲ್ಲೀನವಾಗಿದ್ದವು. "ಸ್ತ್ರೀಯರು ಗೃಹಕೃತ್ಯವೊಂದನ್ನು ಹೊರತುಪಡಿಸಿ ಮತ್ತಾವುದರಲ್ಲಿಯೂ ಅನುಭವ ಇಲ್ಲದವರೆಂದು ಅಪವಾದ ಉಂಟಾಗಿದೆಯಷ್ಟೇ? ಅದನ್ನು ತಪ್ಪಿಸಲೆಂದೇ ನಂದಿನಿ ಹುಟ್ಟಿದೆ" ಎನ್ನುತ್ತಾರೆ. ಮಹಿಳಾ ವಿಷಯದ ಚರ್ಚೆಗೆ ನಂದಿನಿ ಮುಕ್ತ ಅವಕಾಶ ಒದಗಿಸಿತಾದರೂ ಆ ಕಾಲದ ಪಿತೃಚಿಂತನೆಯ ನಿಲುವನ್ನು ಪೂರ್ಣವಾಗಿ ಕೊಡವಿಕೊಳ್ಳಲಾಗಲಿಲ್ಲ. ಚಾರಿತ್ರಿಕವಾಗಿ ಕನ್ನಡದ ಮೊದಲ ಮಹಿಳಾ ಕಾದಂಬರಿ ಶಾಂತೂಬಾಯಿ ನೀಲಗಾರರ 'ಸುಶೀಲೆ'. ಈ ಕೃತಿಯು ಕರ್ನಾಟಕ


ನಂಜನಗೂಡಿನ ತಿರುಮಲಾಂಬಾ

ವಿದ್ಯಾವರ್ಧಕ ಸಂಘವು ಏರ್ಪಡಿಸಿದ್ದ 'ಆದರ್ಶ ಆರ್ಯ ನಾರೀ' ಪರಿಕಲ್ಪನೆಯ ಸ್ಪರ್ಧೆಗಾಗಿ ಏರ್ಪಡಿಸಿತ್ತು. ಇಂತಹ ಇಬ್ಬಂದಿತನವನ್ನು ನೀಗಿಕೊಂಡೂ ಮಹಿಳಾ ಪರವಾದ ತಾತ್ವಿಕತೆಯನ್ನು ರೂಪಿಸಿಕೊಂಡಿದ್ದು ಈ ಕಾಲದ ಬರಹಗಾರ್ತಿಯರ ಸಾಧನೆ. ನಂಜನಗೂಡಿನ ತಿರುಮಲಾಂಬಾ ಲೇಖಕಿ, ಪ್ರಕಾಶಕಿ, ಸಂಪಾದಕಿಯಾಗಿ ಸ್ಥಾಪಿತ ಪಿತೃಪ್ರಧಾನತೆಯಲ್ಲಿ ಒಂದಿಷ್ಟು ಚಲನಶೀಲತೆಯನ್ನು ತಂದರು.

ಆರ್. ಕಲ್ಯಾಣಮ್ಮ ನವೋದಯ ಸಾಹಿತ್ಯದ ಮೊದಲ ಕಥೆಗಾರ್ತಿ. ಸತತ ೪೦ ವರ್ಷಗಳವರೆಗೆ 'ಸರಸ್ವತಿ' ಮಾಸ ಪತ್ರಿಕೆಯನ್ನು ಪ್ರಕಟಿಸಿದರು. ಕಾಂಗ್ರೆಸ್‌ನ ಸ್ವಾತಂತ್ರ್ಯ ಹೋರಾಟದೊಂದಿಗೆ ತಮ್ಮನ್ನು ಗುರ್ತಿಸಿಕೊಂಡಿದ್ದರು. ಇವರಿಗೆ ಮೈಸೂರಿನ ರಾಜ ಮನೆತನದೊಂದಿಗೆ ಆತ್ಮೀಯ ಸಂಬಂಧವಿತ್ತು. ಆದರೆ, ಕೃಷ್ಣರಾಜ ಒಡೆಯರು ಪಟ್ಟವೇರಿದ್ದ ರಜತ ಮಹೋತ್ಸವದ ಸಂದರ್ಭದಲ್ಲಿ ಸಂಗ್ರಹವಾದ ನಿಧಿಯಿಂದ ನಿರ್ಗತಿಕ ವಿಧವೆಯರಿಗೆ ಮತ್ತು ಅನಾಥೆಯರಿಗೆ ಆಲಯವನ್ನು ಕಟ್ಟಿಸಲು ಕೇಳಿಕೊಂಡರು. ಪ್ರಮುಖರು ಈ ಸಲಹೆಯನ್ನು ಉಪೇಕ್ಷಿಸಿದಾಗ, ಮಹಾರಾಜರ ಸ್ಮಾರಕಕ್ಕಾಗಿ ದುಂದುವೆಚ್ಚ ಮಾಡುವುದನ್ನು ತಮ್ಮ ಪತ್ರಿಕೆಯಲ್ಲಿ ನಿರ್ಭಿಡೆಯಿಂದ ಖಂಡಿಸಿದರು. ಮೈಸೂರು ಸಂಸ್ಥಾನದಲ್ಲಿ ಅಭಿವೃದ್ಧಿಯ ಚಿಂತನೆಗಳು ಮಹಿಳೆಯನ್ನು ಕೇಂದ್ರವಾಗಿಟ್ಟುಕೊಳ್ಳಬೇಕೆಂದು ಸತತವಾಗಿ ಒತ್ತಾಯಿಸಿದರು. ೧೯೩೩ರಲ್ಲಿ ಕಲ್ಯಾಣಮ್ಮನವರು ಸರ್ಕಾರದಿಂದ ಗೌರವ ನ್ಯಾಯಾಧೀಶರಾಗಿ ನೇಮಕಗೊಂಡರು. ಈ ಪದವಿಗೇರಿದ ಪ್ರಥಮ ಮಹಿಳೆ ಎನಿಸಿಕೊಂಡರು. ಇವರ ನಿಷ್ಠೆಯಿಂದಾಗಿ 'ಕಲ್ಯಾಣಮ್ಮನವರ ಕೋರ್ಟು' ಎಂದೇ ಪ್ರಸಿದ್ಧವಾಗಿತ್ತು. ೧೯೩೫ರಲ್ಲಿ ಮೈಸೂರು ಸರ್ಕಾರದ 'ಪ್ರಜಾಪ್ರತಿನಿಧಿ ಸಭೆ'ಗೆ ಆಯ್ಕೆಯಾದರು. ಅದೇ ವರ್ಷ ಬೆಂಗಳೂರಿನ ಪುರಸಭೆಗೂ ಆಯ್ಕೆಯಾದರು. ೧೯೩೮ರಲ್ಲಿ ನಗರಸಭೆಯ ಉಪಾಧ್ಯಕ್ಷೆಯಾಗಿ ಸರ್ವಾನುಮತದಿಂದ ಆಯ್ಕೆಯಾದರು. ಈ ಅವಧಿಯಲ್ಲಿ ಶಿಕ್ಷಣ, ನಗರ ನೈರ್ಮಲ್ಯ, ಆರೋಗ್ಯ, ನಗರ ಸೌಂದರ್ಯ ಇತ್ಯಾದಿ


ಆರ್. ಕಲ್ಯಾಣಮ್ಮ

ವಿಷಯಗಳ ಬಗ್ಗೆ ನಿರ್ಭಿಡೆಯ ನಿರ್ಣಯವನ್ನು ತೆಗೆದುಕೊಂಡಿದ್ದರು. ಜೀವ ವಿಮಾ ಕಂಪನಿ, ಸೆಂಟ್ರಲ್ ಜೈಲು ಸಮಿತಿ, ಯೂನಿವರ್ಸಿಟಿ ಸೆನೆಟ್ ಸದಸ್ಯೆ ಹೀಗೆ ಹಲವು ಮಗ್ಗಲುಗಳಲ್ಲಿ ದುಡಿದರು. ೧೯೩೮ರಲ್ಲಿ ಅವರು ಸ್ಥಾಪಿಸಿದ್ದ ಅಖಿಲ ಕರ್ನಾಟಕ ಮಕ್ಕಳ ಕೂಟ ಮತ್ತು ೧೯೧೩ರಲ್ಲಿ ಸ್ಥಾಪಿಸಿದ್ದ 'ಶಾರದಾ ಸ್ತ್ರೀ ಸಮಾಜ'ವು ಮುಂದೆ ಸ್ವಾತಂತ್ರ್ಯಾನಂತರದ ಸರ್ಕಾರಗಳ 'ಮಹಿಳಾ ಮತ್ತು ಮಕ್ಕಳ ಕ್ಷೇಮಾಭಿವೃದ್ಧಿ ಇಲಾಖೆ'ಯಾಗಿ ಮುನ್ನಡೆಯಿತೆಂಬುದು ಚರಿತ್ರೆ. ಆಧುನಿಕ ಕನ್ನಡ ಮಹಿಳಾ ಅಭಿವ್ಯಕ್ತಿಯ ಆರಂಭದ ಕಾಲದಲ್ಲಿ ಮಹತ್ವದ ಗುರುತುಗಲ್ಲಾಗಿರುವ ಆರ್. ಕಲ್ಯಾಣಮ್ಮನವರು ಮಹಿಳಾ ಸಬಲೀಕರಣದ ಕ್ಷೇತ್ರದಲ್ಲಿಯೂ ಗಣನೀಯರು.

ಆಧುನಿಕ ಕನ್ನಡದಲ್ಲಿ ಮಹಿಳಾ ಸಣ್ಣಕಥೆ ಪ್ರಕಾರದ ಸಶಕ್ತ ಸಂಪುಟ ಆರಂಭವಾಗುವುದು ಶ್ಯಾಮಲಾದೇವಿ ಬೆಳಗಾಂವಕರ ಅವರ ಮೂಲಕ. ಸುಮಾರು ೧೯೧೩ ರಿಂದ ೧೯೪೩ರ ಅವಧಿಯಲ್ಲಿ ಧಾರವಾಡದಲ್ಲಿ ಬಾಳಿದ ಶ್ಯಾಮಲಾದೇವಿ ಬರಹಗಾರ್ತಿಯಾಗಿ ಮಾತ್ರವಲ್ಲ, ಸಾಮಾಜಿಕ ಜಾಗೃತಿಯ ಮುಂಚೂಣಿಯ ಕಾರ್ಯಕರ್ತೆಯಾಗಿ ಮುಖ್ಯರಾಗುತ್ತಾರೆ. ಧಾರವಾಡದ ನಗರಸಭೆಗೆ ಆಯ್ಕೆಯಾದ ಮೊದಲ ಮಹಿಳಾ ಸದಸ್ಯೆಯಿವರು. ಧಾರವಾಡದಲ್ಲಿ ಮೊಟ್ಟ ಮೊದಲ ಬಾರಿ ಪ್ರಾರಂಭವಾದ 'ಲಮಾಣಿ ಸ್ತ್ರೀ ಬೋರ್ಡಿಂಗ್'ಗೆ ಶ್ರಮದಾನ ಮಾಡಿದವರಿವರು. ಶ್ಯಾಮಲಾದೇವಿಯವರು ತಮ್ಮ ಪತಿ ರಾಮಚಂದ್ರರಾಯರ ಸಂಪಾದಕತ್ವದಲ್ಲಿ ಹೊರಬರುತ್ತಿದ್ದ 'ಜಯಕರ್ನಾಟಕ' ಪತ್ರಿಕೆಯಲ್ಲಿ ಮಹಿಳಾ ವಿಷಯಗಳ ಚರ್ಚೆಗಾಗಿಯೇ ಪ್ರತ್ಯೇಕ ಅವಕಾಶವನ್ನು ಒದಗಿಸುತ್ತಾರೆ. ಜಯಕರ್ನಾಟಕ 'ಮಕ್ಕಳ ಮನೆ'ಯನ್ನು ಸ್ಥಾಪಿಸಿದರು. ತುಂಬ ಸಣ್ಣ ವಯಸ್ಸಿಗೆ ತೀರಿಹೋದ ಶ್ಯಾಮಲಾದೇವಿ "ಸ್ತ್ರೀಗೂ ವಿಕಾಸ ಹೊಂದಲು ಅವಕಾಶ ಕೊಡುವುದಾದರೆ, ಅವರು ಪುರುಷರಿಗಿಂತ ಎಷ್ಟೂ ಹಿಂದುಳಿಯಲಾರರು" – ಎನ್ನುವ ಸ್ಪಷ್ಟ ಸ್ತ್ರೀವಾದಿ ಚಿಂತಕಿ. ಹೀಗೆ ಮಹಿಳಾ ಅಸಮಾನತೆಯ ನೆಲೆಗಟ್ಟನ್ನು ಸರಿಪಡಿಸುವ ನಿರಂತರ ಪ್ರಯತ್ನಗಳು ನಡೆದವಾದರೂ, ಪುರುಷ ಪ್ರಾಧಾನ್ಯತೆಯ

ಆಳವಾದ ಬೇರುಗಳನ್ನು ಕದಲಿಸುವುದು ಅಷ್ಟು ಸುಲಭವಾಗುವುದಿಲ್ಲ. ಮಹಿಳಾ ಜೀವನದ ಕುರಿತು ಅಂತಃಕರಣದ ಕಥನಗಳನ್ನು ದಾಖಲಿಸಿದ ಮಾಸ್ತಿ ವೆಂಕಟೇಶ ಅಯ್ಯಂಗಾರ ಅವರೇ, ತಮ್ಮ ಸಮಕಾಲೀನ ಮಹಿಳೆಯರು ಬರೆಯುವುದನ್ನು, ಸಾಮಾಜಿಕವಾಗಿ ಕ್ರಿಯಾಶೀಲರಾಗುವುದನ್ನು ವಿರೋಧಿಸಿದ್ದರು. ಸ್ಥಾಪಿತ ವ್ಯವಸ್ಥೆಯ ಮುಳ್ಳು ಹಾದಿಯಲ್ಲಿ ಪಾದ ಚುಚ್ಚುವ ಎಲ್ಲ ಇರಿತವನ್ನು ತಾಳಿಕೊಂಡು ಮಹಿಳಾ ಚರಿತ್ರೆಯು ಮುನ್ನಡೆಯಬೇಕಾಯಿತು.

ಹೀಗೆ ಸ್ವಾತಂತ್ರ್ಯಪೂರ್ವದ ಕರ್ನಾಟಕದ ಪ್ರದೇಶದಲ್ಲಿ ಮಹಿಳಾ ಪರವಾದ ದೃಷ್ಟಿಕೋನದ ಸುಧಾರಣಾವಾದಿ ನಿಲುವಿನ ಹಲವು ಕಾರ್ಯಗಳು ನಡೆದವು. ಆದರೆ ಇವು ಬೃಹತ್ತಾದ ಸ್ವಾಯತ್ತವಾದ ಚಳುವಳಿಯ ರೂಪವನ್ನು ಪಡೆದುಕೊಳ್ಳಲಿಲ್ಲ. ಕೊಡಗು ಮತ್ತು ಕರಾವಳಿ ಪ್ರದೇಶಗಳಲ್ಲಿ ಬ್ರಿಟಿಷ್ ಮಿಷನರಿ ಸಂಸ್ಥೆಗಳೇ ಮಹಿಳಾ ಶಿಕ್ಷಣಕ್ಕೆ ಪೂರಕವಾಗಿದ್ದವು. ಹೆಣ್ಣುಮಕ್ಕಳು ಅನುಭವಿಸುತ್ತಿದ್ದ ಅವಕಾಶ ವಂಚಿತತನದ ಬಗ್ಗೆ ಬ್ರಿಟಿಷ್ ಅಧಿಕಾರಿಗಳು ತಮ್ಮ ವರದಿಯಲ್ಲಿ ದಾಖಲಿಸಿದ್ದಾರೆ. ಸರ್ ವಿಲಿಯಂ ವಾರ್ಡನು – ಜೀವಮಾನವಿಡೀ ಪುರುಷರ ಕಾಮನೆಗಳನ್ನು ಪೂರೈಸುತ್ತ, ಯಾವ ಸ್ವತಂತ್ರ ಆಲೋಚನೆಯ ಹಕ್ಕಿಲ್ಲದೆ ಉಳಿದುಹೋದ ಹೆಣ್ಣುಮಕ್ಕಳ ಪರಿಸ್ಥಿತಿಯನ್ನು ದಾಖಲಿಸುತ್ತಾನೆ. ಇಂತಹ ಹಲವು ವರದಿಗಳು ದೊರೆಯುತ್ತವೆ – ಪ್ರತಿಯೊಂದು ಧರ್ಮದ ಮೇಲ್ವರ್ಗವು ವಿದ್ಯಾಭ್ಯಾಸವನ್ನು ಸಾಂಪ್ರದಾಯಿಕಗೊಳಿಸಿಕೊಂಡಿತ್ತು ಮತ್ತು ಈ ಸಾಂಪ್ರದಾಯಿಕತೆಯು ಜ್ಞಾನದ ಸೌಲಭ್ಯವನ್ನೂ ಗಂಡುಮಕ್ಕಳ ಹಕ್ಕಾಗಿಸಿತ್ತು. ಯಾವ ಆಚರಣೆಯ ಮೂಲಕ ಮೇಲ್ಜಾತಿ ಹಾಗೂ ಮೇಲ್ವರ್ಗದ ಗಂಡುಮಕ್ಕಳಿಗೆ ಅಕ್ಷರಾಭ್ಯಾಸವನ್ನು ಮಾಡಿಸಲಾಗುತ್ತಿತ್ತು ಎಂಬ ದಾಖಲೆಯು ಇದೆ. ಕೆಳಜಾತಿಯನ್ನು ಇಡಿಯಾಗಿಯೆ ಶಿಕ್ಷಣಕ್ಕೆ ದೂರೀಕರಿಸಿದ್ದರಿಂದ ಅಲ್ಲಿಯ ಮಹಿಳೆಯರ ಸ್ಥಿತಿ ಅಧಃಪತನದ್ದಾಗಿತ್ತು.

ಅಚ್ಚರಿಯ ಸಂಗತಿಯೆಂದರೆ, ಸ್ತ್ರೀ ಸಮಾನತೆಯ ಹೊಸ ಮನ್ವಂತರವನ್ನೇ ಸಾರಿದ ಶರಣ ಚಳುವಳಿಯ ನಂತರದ ಕಾಲದಲ್ಲಿ ಅದೇ ಧರ್ಮದಲ್ಲಿಯೂ ಸಮಾನತೆಯ ಪರಿಕಲ್ಪನೆಯು ಅಮೂರ್ತ ಆದರ್ಶದ ರೂಪದಲ್ಲಿ ಮಾತ್ರ ಉಳಿದು, ಆಚರಣೆಯಲ್ಲದು ಜಡವಾಯಿತು. ಲಿಂಗಾಯತ ಮಠಗಳು ಜ್ಞಾನ ಪ್ರಸಾರದ ವಿದ್ಯಾ ಪುರಸ್ಕಾರದ ನೆಲೆಗಳೆನಿಸಿದವು. ಆದರೆ ಈ ಮಠಮಾನ್ಯಗಳು ಗಂಡುಮಕ್ಕಳಿಗೆ ಮಾತ್ರ ಆಶ್ರಯವನ್ನು ನೀಡಿದವು. ಬಹುತೇಕ ಸಂದರ್ಭದಲ್ಲಿ ಈ ಮಠಗಳು ಜಾತಿವ್ಯವಸ್ಥೆಯ ಜಡವನ್ನು ಮೀರಿ, ಅನ್ಯಜಾತಿ ಸಮುದಾಯಗಳ ಬಡ ಗಂಡುಮಕ್ಕಳನ್ನು ಒಳಗೊಂಡವಾದರೂ ಹೆಣ್ಣುಮಕ್ಕಳ ವಿಷಯದಲ್ಲಿ ಉದಾರತೆಯನ್ನು ತೋರಲಿಲ್ಲ. ಸ್ವಾತಂತ್ರ್ಯಪೂರ್ವದಲ್ಲಿಯೇ ಧಾರ್ಮಿಕ ಸ್ಥಿತ್ಯಂತರ ನಡೆದು ಲಿಂಗಾಯತ ಧರ್ಮವು ಸ್ಥಾವರವಾಗತೊಡಗಿತು. ಹನ್ನೆರಡನೆಯ ಶತಮಾನದಲ್ಲಿ ಮಠದ ಸಂಸ್ಕೃತಿಯನ್ನು ವಿರೋಧಿಸಿದ್ದ ಧರ್ಮವು ಹದಿನೆಂಟನೆಯ ಶತಮಾನದಷ್ಟೊತ್ತಿಗೆ ಮಠೀಯತೆಯನ್ನೇ ತನ್ನ ಪ್ರಧಾನ ಲಕ್ಷಣವಾಗಿಸಿಕೊಂಡಿತ್ತು. ಸಿದ್ಧಗಂಗಾಮಠ, ಸುತ್ತೂರು ಮಠ, ಮುರುಘಾ ಮಠ, ಭಾಲ್ಕಿಮಠ, ಗುಲ್ಬರ್ಗಾದ ಶರಣಬಸಪ್ಪ ಮಠ ಹೀಗೆ ಮುಖ್ಯ ಕೇಂದ್ರಗಳು ಮತ್ತು ಶಾಖಾಮಠಗಳು ಪ್ರಾರಂಭವಾದವು. ಸಮಾಜ ಸುಧಾರಣೆಯ ಭಾಗವಾಗಿ ಈ ಎಲ್ಲ ಮಠಗಳೂ ವಿದ್ಯಾಭ್ಯಾಸದ ಕೇಂದ್ರಗಳಾದವು. ಪ್ರಾಥಮಿಕ ಮತ್ತು ಪ್ರೌಢಶಿಕ್ಷಣವನ್ನು ಊರೂರುಗಳಲ್ಲಿ ಪ್ರಾರಂಭಿಸಿದವು. ಆದರೆ ಅವು ಗಂಡುಮಕ್ಕಳ ಶಿಕ್ಷಣಕ್ಕೆ ಮಾತ್ರ ಆಸ್ಪದವನ್ನು ಒದಗಿಸಿದವು. ನಗರಗಳಲ್ಲಿ ಮಠಗಳು ವಿದ್ಯಾರ್ಥಿಗಳ ಉನ್ನತ ವ್ಯಾಸಂಗಕ್ಕೆ ಅನುವು ಮಾಡಿಕೊಡಲು ಹಾಸ್ಟೆಲ್‌ಗಳನ್ನು ಪ್ರಾರಂಭಿಸಿದಾಗಲೂ ಅಲ್ಲಿ ಹೆಣ್ಣುಮಕ್ಕಳಿಗೆ ಅವಕಾಶವಿರಲಿಲ್ಲ. ಮಹಿಳೆಯ ಆಧುನಿಕತೆಗೆ ಈ ಮಠೀಯ ತಡೆಗೋಡೆಯು ಪ್ರಬಲವಾಗಿತ್ತು. ಸಾಮೂಹಿಕ ಸಮಾನತೆಯ ಪ್ರಶ್ನೆ ಒತ್ತುವರಿ ಆಗುತ್ತಲೇ ಇತ್ತು. ಹಿಂದಿರುಗಿ ನೋಡಿದಾಗ ಅನ್ನಿಸುವುದು – "ಹಾದಿಯುದ್ದಕ್ಕೂ ಬಂದೀಖಾನೆಗಳು ಆದರೂ ಹಾದು ಬಂದಿದ್ದೇವೆ ನಾವು."

ಅಧ್ಯಯನದ ಎರಡನೆಯ ಹಂತದಲ್ಲಿ, ಅಂದರೆ ಸ್ವಾತಂತ್ರ್ಯೋತ್ತರದ ಕಾಲದಲ್ಲಿ ನಡೆದ ಸಾಮಾಜಿಕ ಆರ್ಥಿಕ ಪರಿವರ್ತನೆಗಳಿಗೂ ಮಹಿಳಾ ವಿಷಯಗಳಿಗೂ ಇರುವ ಸಂಬಂಧದ ಶೋಧನೆ ಕುತೂಹಲಕಾರಿಯಾದದ್ದು. ಈ ಹಂತದ ಸಮಾಜ ಉದಾರವಾದಿ ನೆಲೆಯಲ್ಲಿ ಲಿಂಗ ಸಮಾನತೆಯನ್ನು ಸ್ವೀಕಾರಾರ್ಹ ಮೌಲ್ಯವೆಂದು ಒಪ್ಪಿಕೊಳ್ಳುತ್ತಿತ್ತು. ಇದರ ಪರಿಣಾಮವಾಗಿ ಮಹಿಳಾ ಶಿಕ್ಷಣ ಹಾಗೂ ಉದ್ಯೋಗದ ಅವಕಾಶಗಳು ತೆರೆಯತೊಡಗಿದವು. ಈ ಕಾಲಾವಧಿಯಲ್ಲಿ ಸಮಾಜದ ಬೇರೆ ಬೇರೆ ಸಮುದಾಯಗಳು ತಮ್ಮ ದಮನಿತ ಸ್ಥಿತಿಯ ವಿರುದ್ಧ ಸಂಘಟನಾತ್ಮಕವಾಗಿ ಸಮಾನತೆಯ ಹಕ್ಕೊತ್ತಾಯವನ್ನು ಮಂಡಿಸತೊಡಗಿದ್ದವು. ಸ್ವಾತಂತ್ರ್ಯ ಹೋರಾಟದಲ್ಲಿ ಪ್ರಜ್ಞಾವಂತಿಕೆಯಿಂದ ಪಾಲ್ಗೊಂಡ ಮಹಿಳಾ ಸಮುದಾಯವು ಆ ನಂತರದ ಸಾಮಾಜಿಕ ಚಳುವಳಿಗಳಲ್ಲಿ ಅಷ್ಟೇ ತೀವ್ರವಾಗಿ






*ಜಯದೇವಿತಾಯಿ ಲಿಗಾಡೆ*

ತೊಡಗಿಸಿಕೊಂಡಿತ್ತೇ? ಎಂಬುದು ಮುಖ್ಯವಾಗುತ್ತದೆ. ಈ ಹಿನ್ನೆಲೆಯಲ್ಲಿ ಮಹತ್ವದ ಕೆಲವು ಚಳುವಳಿಗಳನ್ನು ಪರಿಶೀಲಿಸಲಾಗಿದೆ.

**೧. ಕರ್ನಾಟಕ ಏಕೀಕರಣ ಚಳುವಳಿ**

೧೯೨೨ರಿಂದಲೇ ಕರ್ನಾಟಕ ಏಕೀಕರಣದ ಪರಿಕಲ್ಪನೆಯು ಬೇರೂರಿ ಬೆಳೆಯತೊಡಗಿತ್ತು. ದೇಶದ ಸ್ವಾತಂತ್ರ್ಯದಷ್ಟೇ ನಾಡಿನ ಅಸ್ಮಿತೆಯ ಹೋರಾಟವೂ ಮುಖ್ಯವಾಗಿತ್ತು. ಆದರೆ ನಾಡು – ನುಡಿಯ, ರಾಷ್ಟ್ರೀಯತೆಯ ಹೋರಾಟವು ಭಾರತಮಾತೆ, ಕನ್ನಡಮ್ಮ ಎಂಬ ಆದರ್ಶೀಕೃತ ಚಹರೆಯನ್ನು ಸ್ವೀಕರಿಸಿದಷ್ಟೇ ಸಲೀಸಾಗಿ ಮಹಿಳಾ ಪರ ನಿಲುವನ್ನು ಸ್ವೀಕರಿಸುವುದು ಸಾಧ್ಯವಾಗಲಿಲ್ಲ. ಕರ್ನಾಟಕ ಏಕೀಕರಣದ ಚರಿತ್ರೆಯು ತನ್ನ ಪುಟಗಳಲ್ಲಿ ದಾಖಲಿಸಿಕೊಂಡಿರುವುದು – ಆಲೂರು ವೆಂಕಟರಾಯ, ಕಡಪಾ ರಾಘವೇಂದ್ರರಾಯ, ಗದಿಗೆಯ್ಯ ಹೊನ್ನಾಪುರಮಠ, ರಾವಬಹದ್ದೂರ, ಸಿದ್ದಪ್ಪ ಕಂಬಳಿ, ಫ. ಗು. ಹಳಕಟ್ಟಿ ಹೀಗೆ ದಂಡಿ ದಂಡಿ ಹೆಸರುಗಳನ್ನು ಇವರುಗಳಿಗೆ ಸರಿಸಮವಾಗಿ ಈ ಪ್ರಮಾಣದಲ್ಲಿ ಮಹಿಳೆಯರ ಹೆಸರುಗಳಿಲ್ಲ. ಸೊಲ್ಲಾಪುರದ ಜಯದೇವಿತಾಯಿ ಲಿಗಾಡೆ, ಏಕೀಕರಣ ಚಳುವಳಿಗೆ ತಮ್ಮ ಬಾಳನ್ನೇ ಮುಡಿಪಿಟ್ಟು ದುಡಿದರು. ೧೮೮೯ರಲ್ಲಿಯೇ ಸರಸ್ವತಿ ಮಂದಿರವನ್ನು, ಭಗಿನಿ ಮಂಡಳವನ್ನು ಕಟ್ಟಿ ಮಹಿಳಾ ಜಾಗೃತಿಗಾಗಿ ಶ್ರಮಿಸಿದರು. ಇವರೊಂದಿಗೆ ಬಸವ್ವಬಾಯಿ ವಾರದ, ಗೌರವ್ವಬಾಯಿ ವಾರದ, ಸಂಗವ್ವಬಾಯಿ ಮಡಕಿ, ಪಂಚವ್ವಬಾಯಿ ಸರದಾರ ಹೀಗೆ ಕೆಲವು ಮಹಿಳೆಯರನ್ನು 'ಕನ್ನಡ ಕುಲ ಪಾಲಕಿಯರು' ಎಂದು ಕರೆದ ದಾಖಲೆಯಿದೆಯಾದರೂ ಒಟ್ಟು ಏಕೀಕರಣ ಚಳುವಳಿ ಮಹಿಳಾ ಸಂವೇದನಾಶೀಲವಾಗಿತ್ತು ಎನ್ನಲು ಯಾವುದೇ ಪುರಾವೆಗಳಿಲ್ಲ.

### ೨. ರೈತ ಚಳುವಳಿಗಳು

ಸ್ವಾತಂತ್ರ್ಯಪೂರ್ವದಲ್ಲಿ ೧೯೩೬ರಲ್ಲಿ ಹುಟ್ಟಿದ ಕಿಸಾನ್‌ಸಭಾ, ಕರನಿರಾಕರಣ ಚಳುವಳಿಯೊಂದಿಗೇ ಬೆಳೆಯುತ್ತ ರೈತರ ಕಷ್ಟ-ನಷ್ಟಗಳನ್ನು ಮುನ್ನೆಲೆಗೆ ತರಲು ಕಾರಣವಾಯಿತು. ೧೯೫೬ರಲ್ಲಿ ಕರ್ನಾಟಕ ಪ್ರಾಂತ ರೈತಸಂಘವು ಅಸ್ತಿತ್ವಕ್ಕೆ ಬಂತು. ಇದಕ್ಕೂ ೨೦ ವರ್ಷಗಳ ಹಿಂದೆ ಉತ್ತರ ಕನ್ನಡ ಜಿಲ್ಲೆಯಲ್ಲಿ ಜಮೀನ್ದಾರರ ಗೇಣಿ ಪದ್ಧತಿಯ ವಿರುದ್ಧ ಸಮಾಜವಾದಿ ಚಿಂತಕರ ನೇತೃತ್ವದಲ್ಲಿ, ಬಡವರ ಹಸಿವಿನ ಅನಿವಾರ್ಯತೆಯಲ್ಲಿ ಹೋರಾಟವು ರೂಪುಗೊಂಡಿತು. ೩೩ ವರ್ಷಗಳ ಸುದೀರ್ಘಕಾಲ ನಡೆದ ಅಹಿಂಸಾತ್ಮಕ ಹೋರಾಟವಿದು. ಈ ಅವಧಿಯಲ್ಲಿ ಸ್ವಾತಂತ್ರ್ಯಾನಂತರದ ಕಾಂಗ್ರೆಸ್‌ನಿಂದ ಕೆಲವು ಚಿಂತಕರು ಹೊರಬಂದು, 'ಕಾಂಗ್ರೆಸ್ ಸೋಶಿಯಲಿಸ್ಟರ ಫೋರಂ'ಅನ್ನು ರೂಪಿಸಿಕೊಂಡ ಚಾರಿತ್ರಿಕ ಸಂಗತಿ ಜರುಗಿತು. ೧೯೪೦ರಲ್ಲಿ 'Land Rents in North Kanara' ಪುಸ್ತಕ ಬರೆದ ನೆಪದಲ್ಲಿ ದಿನಕರ ದೇಸಾಯಿಯವರಿಗೆ ಜಿಲ್ಲೆಯ ಪ್ರವೇಶಕ್ಕೆ ನಿಷೇಧ ಹಾಕಲಾಯಿತು. ಇಷ್ಟು ತೀವ್ರವಾದ ಈ ಹೋರಾಟವು ಆರ್ಥಿಕ ಅಸಮಾನತೆಯನ್ನು ಮಾತ್ರ ಮುಖ್ಯವೆಂದು ಪರಿಗಣಿಸಿತ್ತು. ಹೋರಾಟಗಾರರ ಕುಟುಂಬದ ಮಹಿಳೆಯರು ಚಳುವಳಿಯಲ್ಲಿ ಸಕ್ರಿಯರಾಗಿದ್ದರು. ಹಾಲಕ್ಕಿ ಒಕ್ಕಲಿಗ ಸಮಾಜದ ಹೆಣ್ಣುಮಕ್ಕಳು ಹೋರಾಟವನ್ನು ಮುನ್ನಡೆಸಿದ್ದರು. ಕರ್ನಾಟಕದಲ್ಲಿ ೩೦ರ ದಶಕದ ಗೇಣಿ ಪದ್ಧತಿ ವಿರೋಧಿ ಚಳುವಳಿಯು ೯೦ರ ದಶಕದ ಬಾಗೂರು-ನವಿಲೆ ಹೋರಾಟದವರೆಗೂ ಅವಿರತವಾಗಿ, ವಿಭಿನ್ನ ಆಯಾಮಗಳಲ್ಲಿ ನಡೆಯಿತು.

ರೈತ ಹೋರಾಟದ ಮುಖಂಡರಾದ ಪ್ರೊ|| ಎಂ. ಡಿ. ನಂಜುಂಡಸ್ವಾಮಿಯವರು ೮೦ರ ದಶಕದ ನಂತರದಲ್ಲಿಯೇ ಈ ಹೋರಾಟವು ೩ ಹಂತಗಳಲ್ಲಿ ಬದಲಾಯಿತೆಂದು ಗುರ್ತಿಸುತ್ತಾರೆ.

| | | |
|---|---|---|
| ೧೯೮೦-೮೯ | – | ವೈಚಾರಿಕ ಸಂಪನ್ನತೆಯ ದಶಕ. |
| ೧೯೮೯-೯೯ | – | ವೈಚಾರಿಕ ವಿಚಲತೆಯ ದಶಕ. |
| ೧೯೯೯-೨೦೦೯ | – | ಆತ್ಮಾವಲೋಕನದ ದಶಕ. |

ಸ್ವಾತಂತ್ರ್ಯ ಸಂಗ್ರಾಮದ ಮಾದರಿಯಲ್ಲಿಯೇ ಕರನಿರಾಕರಣೆ, ಪಿಕೆಟಿಂಗ್‌ಗಳಿಂದ ಪ್ರಾರಂಭವಾಗಿ ಗಣಿಗಾರಿಕೆ, ನೀಲಗಿರಿ ಬೆಳೆ ವಿರುದ್ಧದ ಹೋರಾಟವನ್ನೂ ಒಳಗೊಂಡು ೯೦ರ ನಂತರ WTO ವಿರುದ್ಧ, ರಸಗೊಬ್ಬರ ನೀತಿ ವಿರುದ್ಧ, BT ಹತ್ತಿಬೀಜದ ವಿರುದ್ಧ ಹೀಗೆ ನೂರಾರು ಬಗೆಯ ಹೋರಾಟಗಳು ನಡೆದವು. ರೈತ ಮಹಿಳೆಯರು ಈ ಎಲ್ಲ ಸಂದರ್ಭಗಳಲ್ಲಿಯೂ ಭಾಗವಹಿಸಿದ್ದರು. ಸಮಸ್ತ ರೈತ ಹೋರಾಟ, ಮಹಿಳೆಯರನ್ನು ಕೇಂದ್ರವಾಗಿಟ್ಟುಕೊಂಡು ಮೇಲ್‌ಸ್ತರದಲ್ಲಾದರೂ ಕಾರ್ಯಪ್ರವೃತ್ತವಾದ ೩ ದಾಖಲೆಗಳಿವೆ - (i) ೧೯೮೨ರಲ್ಲಿ ಕಬ್ಬನ್‌ಪಾರ್ಕ್‌ನಲ್ಲಿ ನಡೆದ ರೈತ ಸಮಾವೇಶದಲ್ಲಿ ರೈತ ಮಹಿಳೆ ಮದ್ದೂರಮ್ಮ ಧ್ವಜಾರೋಹಣ ಮಾಡಿದ್ದು (ii) ೧೯೮೭ ನವೆಂಬರ್‌ನಲ್ಲಿ ಹಳಿಯಾಳದಲ್ಲಿ ರೈತ ಮಹಿಳಾ ಸಮಾವೇಶ ಜರುಗಿದ್ದು, ಗಂಗೂಬಾಯಿ ಕದಂ ಇದರ ಅಧ್ಯಕ್ಷತೆ ವಹಿಸಿದ್ದರು. ಸುಮನ್ ಅಗರವಾಲ್, ಸಾವಿತ್ರಿ ಪಟ್ವೇಕಾರ್, ಯಲ್ಲೂರಕರ ಮೊದಲಾದ ದೇಶೀಯಮಟ್ಟದ ರೈತ ಮಹಿಳಾ ಮುಖಂಡರು ಭಾಗಿಗಳಾಗಿದ್ದರು. (iii) ೨೦೦೦ದಲ್ಲಿ ಸೆಪ್ಟೆಂಬರ್‌ನಲ್ಲಿ ಬೆಂಗಳೂರಿನ ಜಾನಪದ ಲೋಕದಲ್ಲಿ ಪ್ರಥಮ ವಿಶ್ವ ರೈತ ಮಹಿಳಾ ಸಮಾವೇಶ ಜರುಗಿತು. ಅಂತರರಾಷ್ಟ್ರೀಯ ಮಟ್ಟದ ಹಲವು ಮಹಿಳಾ ಮುಖಂಡರು ಭಾಗವಹಿಸಿದ್ದರು.

ರೈತ ಚಳುವಳಿಗಳು, ರೈತಾಪಿ ವರ್ಗದ ಸಮಸ್ಯೆಯನ್ನು ಪ್ರಮುಖವಾಗಿಟ್ಟುಕೊಳ್ಳುವುದರಿಂದ, ರೈತ ಮಹಿಳೆಯರು ಎದುರಿಸುತ್ತಿರುವ ಸಮಸ್ಯೆ - ಸಂಕಟಗಳ ಬಗ್ಗೆ ಯೋಚಿಸಲಾಗದಷ್ಟು ಜಡವಾಗಿದೆ ಎಂಬ ಆರೋಪವಿದೆ. ರೈತರ ಆತ್ಮಹತ್ಯೆಗಳ ಕುರಿತ ಅಧ್ಯಯನ ಅವಲೋಕನಗಳು, ರೈತ ಮಹಿಳೆಯರು ಎದುರಿಸುತ್ತಿರುವ ಸಂಕೀರ್ಣ ಭೀಕರ ಸ್ಥಿತಿಯನ್ನು ಅರ್ಥೈಸಿಕೊಳ್ಳುತ್ತಿಲ್ಲ ಎಂಬ ಬಗ್ಗೆ ತಕರಾರುಗಳಿವೆ. ಸಂಘಟನೆಗಳಲ್ಲಿ ಪ್ರಧಾನ ನಾಯಕತ್ವದವರೆಗೆ ಮಹಿಳೆಯರಿಗೆ ಅವಕಾಶಗಳು ದೊರೆಯುತ್ತಿವೆಯೇ? ಎಂಬ ಪ್ರಶ್ನೆಗಳಿವೆ. ಆದರೆ ರೈತ ಸಂಘಟನೆಯು, ಸುನಂದಾ ಜಯರಾಂ, ಅರಟಾಳು ಅನಸೂಯಮ್ಮ, ಚುಕ್ಕಿ ನಂಜುಂಡಸ್ವಾಮಿ ಮೊದಲಾದ ಮಹಿಳೆಯರ ವ್ಯಕ್ತಿತ್ವದ ಜೀವಕೋಶಗಳನ್ನು ರೂಪಿಸಿದ್ದು ಸುಳ್ಳಲ್ಲ. ಅಂತರರಾಷ್ಟ್ರೀಯ ಮಟ್ಟದಲ್ಲಿ ತಮ್ಮ ವ್ಯಕ್ತಿತ್ವವನ್ನು ನಿರ್ಮಿಸಿಕೊಂಡ ಈ ಮಹಿಳೆಯರು ದೇಶದ ಸಮಾಜೋ ಆರ್ಥಿಕ ವಿದ್ಯಮಾನವನ್ನು ಆಮೂಲಾಗ್ರವಾಗಿ ಅರ್ಥೈಸಿಕೊಂಡ, ಲಿಂಗಸೂಕ್ಷ್ಮ ಸಂಗತಿಗಳ ಬಗ್ಗೆ ಚಿಂತನೆಯನ್ನು ಮಂಡಿಸುವ ಮತ್ತು ಅದನ್ನು ಸಾಮಾಜಿಕ ಕ್ರಿಯಾರೂಪಕ್ಕೆ ಅನ್ವಯಿಸುವ ಸಾಧಕಿಯರಾಗಿದ್ದಾರೆ.

*(ಮುಂದುವರಿಯುವುದು)*

**ಡಾ|| ವಿನಯಾ ಒಕ್ಕುಂದ**
'ನೆಮ್ಮದಿ', ನಂ. ೧೨೪, ಸಿ.ಐ.ಟಿ.ಬಿ. ಕಾಲೋನಿ
ಶ್ರೀನಗರ, ಧಾರವಾಡ - ೫೮೦೦೦೩

## ಅಬ್ಬರಿಸುವ ಅಲೆಯಾಗು

ಇನ್ಸಾನಿಯತ್ ಇಲ್ಲದ ಜನ
ಕಾಶ್ಮೀರಿಯತ್‌ನ ಕೊಂದಿದ್ದಾರೆ
ಇನ್ನಿಲ್ಲಿ ಸೇಬು ಕಿತ್ತಳೆ ತೋಟಗಳೆಲ್ಲಾ
ಅಂಬಾನಿ ಅದಾನಿಗಳ ಕಬಂಧ-
ಬಾಹುಗಳಲ್ಲಿ ಹಿಂಡಿ ಹಿಪ್ಪೆಯಾಗಿ
ಮಣ್ಣುಗೂಡಬಹುದು
ಬೃಹತ್ ಉದ್ದಿಮೆಗಳು ತಲೆಎತ್ತಿ
ಸೂಫಿ ಸೊಂಪನ್ನು ಹತ್ತಿಕ್ಕಿ
ತಿಳಿ ಹಸಿರು ಸರೋವರಗಳಲ್ಲಿ
ತ್ಯಾಜ್ಯ ವಿಷಗಳನ್ನು ತುಂಬಬಹುದು
ಹೂದೋಟಗಳಲ್ಲಿ ಹೆಡೆ ಎತ್ತುವ
ಕೋಮುದ್ವೇಷದ ಸರ್ಪ
ತನ್ನದಲ್ಲದ ಹಾಲೆರೆಸಿಕೊಂಡು
ಸಂತರ ಗೋರಿಗಳಲ್ಲಿ ಹುತ್ತಗಟ್ಟುತ್ತವೆ
ದೋಣಿಮನೆಗಳ ಮರೆಯಿಂದ
ಬೆದರು ನೋಟ ಬೀರುತ್ತಿರುವ
ದುಂಬಿಕಂಗಳಿಗೆ ಎಲ್ಲಿಂದ
ಯಾವಾಗ ಪೆಲಟ್ ಬಂದು ಚುಚ್ಚೀತೋ!
ಪ್ರೇಮ ಕಾಶ್ಮೀರವೇ, ಸಪ್ತವರ್ಣ ಧನುಸ್ಸೇ
ದ್ವೇಷದ ಕೈಗಳು ನಿನ್ನ ಮುರಿವ ಮುನ್ನ
ಗಟ್ಟಿಯಾಗು ಅಬ್ಬರಿಸುವ ಅಲೆಯಾಗು
ಆಕ್ರಮಣಕಾರರೊಂದಿಗೆ
ಸೂಫಿಯ ಪಿಸುದನಿ
ಸರೋವರದ ಮೌನ ನೀಲಮೆ
-ಗಳು ಹೋರಾಡಲಾರವು

**ಕಸ್ತೂರಿ**
ಪಿ-೨೬, ೧೫ನೇ ಕ್ರಾಸ್, ಎಸ್. ಎಸ್. ಪುರಂ
ತುಮಕೂರು - ೫೭೨೧೦೨



# ಬಾಹ್ಯಾಕಾಶದಲ್ಲಿ ಮಿನುಗಿದ ಭಾರತದ ರತ್ನ

# ವಿಕ್ರಮ್ ಸಾರಾಭಾಯಿ

**ಆ**ಗಸ್ಟ್ ೧೨, ೧೯೧೯ರಂದು ಗುಜರಾತ್ ರಾಜ್ಯದ ಕೈಗಾರಿಕೋದ್ಯಮಿ ಶ್ರೀ ಅಂಬಾಲಾಲ್ ಹಾಗೂ ಶ್ರೀಮತಿ ಸರಳಾ ದೇವಿಯವರ ಎಂಟು ಮಕ್ಕಳಲ್ಲಿ ಓರ್ವನಾಗಿ, ಅಹ್ಮದಾಬಾದ್ ನಗರದಲ್ಲಿ ಜನನ. ಮೂಲ ವಿದ್ಯಾಭ್ಯಾಸ ಭೌತಶಾಸ್ತ್ರದಲ್ಲಿ, ಕೈಗಾರಿಕೋದ್ಯಮಿಯಾದರೂ ಸಹ ಕ್ರೀಡಾರಂಗದಲ್ಲಿಯೂ ಅಪಾರ ಆಸಕ್ತಿ ಹಾಗೂ ಬಾಹ್ಯಾಕಾಶ ವಿಜ್ಞಾನ ಮತ್ತು ಸಂಶೋಧನೆಯತ್ತ ಹೆಚ್ಚು ಒಲವು. ತಂದೆ-ತಾಯಿಯವರೇ ಆಡಳಿತ ನಡೆಸುತ್ತಿದ್ದ ಖಾಸಗಿ ಶಾಲೆ 'ರಿಟ್ರೀಟ್'ನಲ್ಲಿ ಪ್ರಾಥಮಿಕ ಶಿಕ್ಷಣ ಆರಂಭ. ನಂತರದ ವಿದ್ಯಾಭ್ಯಾಸ ಗುಜರಾತ್‌ನ ಅಹ್ಮದಾಬಾದ್ ಕಾಲೇಜಿನಲ್ಲಿ. ೧೯೪೦ರಲ್ಲಿ ಕೇಂಬ್ರಿಜ್ ವಿಶ್ವವಿದ್ಯಾನಿಲಯದಲ್ಲಿ ನೈಸರ್ಗಿಕ ವಿಜ್ಞಾನದ ಕಲಿಕೆ. ಇಂಗ್ಲೆಂಡ್‌ದಿಂದ ಭಾರತಕ್ಕೆ ಮರಳಿದ ನಂತರ ಬೆಂಗಳೂರಿನ ಭಾರತೀಯ ವಿಜ್ಞಾನ ಸಂಸ್ಥೆಯಲ್ಲಿ (ಐ.ಐ.ಎಸ್.ಸಿ) ಸರ್. ಸಿ. ವಿ. ರಾಮನ್ ಅವರ ವಿದ್ಯಾರ್ಥಿಯಾಗಿ ಹೆಚ್ಚಿನ ವ್ಯಾಸಂಗ, ಸಂಶೋಧನೆಯಲ್ಲಿ ಅದ್ಭುತ ಸಾಧನೆ. ೧೯೪೨ನೇ ಇಸವಿಯಲ್ಲಿ ಅವರ ಚೊಚ್ಚಲ ಸಂಶೋಧನಾ ಪ್ರಮೇಯ 'Time Distribution of Cosmic Rays' ಬಿಡುಗಡೆಯಾದದ್ದು ವಿಶೇಷ. ೧೯೪೫ರಲ್ಲಿ ಕೇಂಬ್ರಿಜ್ ವಿಶ್ವವಿದ್ಯಾನಿಲಯದಿಂದ ಖಗೋಳ ವಿಜ್ಞಾನದಲ್ಲಿ ಪಿಎಚ್‌ಡಿ ಪದವಿ. ೧೯೪೨ರಲ್ಲಿ ಸುಪ್ರಸಿದ್ಧ ನೃತ್ಯಗಾರ್ತಿ ಮೃಣಾಲಿನಿಯವರೊಟ್ಟಿಗೆ ವಿವಾಹ. ವಿಕ್ರಮ್ ಸಾರಾಭಾಯಿ ಅವರಿಗೆ ಇಬ್ಬರು ಮಕ್ಕಳು. ಮಗಳು ಮಲ್ಲಿಕಾ ಸಾರಾಭಾಯಿ, ನೃತ್ಯಗಾರ್ತಿ ಹಾಗೂ ಸಾಮಾಜಿಕ ಕಾರ್ಯಕರ್ತೆ, ಪುತ್ರ ಕಾರ್ತಿಕೇಯನಿಗೂ ತಂದೆಯಂತೆಯೇ ವಿಜ್ಞಾನದಲ್ಲಿ ಅತೀವವಾದ ಆಸಕ್ತಿ. ವಿಕ್ರಮ್ ಸಾರಾಭಾಯಿ ದಂಪತಿಗಳು ಜೈನಧರ್ಮದ ಅನುಯಾಯಿಗಳು.

ಬಾಹ್ಯಾಕಾಶದ ತೊಟ್ಟಿಲು ಎಂದೇ ಪ್ರಸಿದ್ಧಿಯಾಗಿರುವ ಭೌತ ಶಾಸ್ತ್ರ ಸಂಶೋಧನಾ ಪ್ರಯೋಗಾಲಯವನ್ನು (PRL) ೧೯೪೭ನೇ ಇಸವಿಯ ನವೆಂಬರ್ ೧೧ನೇ ತಾರೀಕಿನಂದು ಸ್ಥಾಪಿಸಿದವರು ವಿಕ್ರಮ್. ಆರಂಭದ ಹಂತದಲ್ಲಿ ಸ್ವಗೃಹದಿಂದಲೇ ಆಕಾಶಯಾನದ ವಿಚಾರದಲ್ಲಿ ಸಂಶೋಧನೆಗಳ ಆರಂಭ. ಪ್ರೊ॥ ಕಲ್ಪಾತಿ ರಾಮಕೃಷ್ಣ ರಾಮನಾಥನ್ ಈ ನೂತನ ಸಂಸ್ಥೆಯ ಮೊದಲ ನಿರ್ದೇಶಕರು. ಈ ಸಂಶೋಧನಾಲಯ ಹೊರ ವಾಯುಮಂಡಲದ ಅಧ್ಯಯನಕ್ಕೆ ಹೆಚ್ಚು ಒತ್ತು ನೀಡಿದ್ದು ವಿಶೇಷವಾದರೂ ಸಹ ನಂತರದ ದಿನಗಳಲ್ಲಿ ರೇಡಿಯೋ ಭೌತಶಾಸ್ತ್ರಕ್ಕೆ ಪ್ರಬಲವಾಗಿ ಪ್ರಾಧಾನ್ಯತೆ ನೀಡಿದ ಹಿನ್ನೆಲೆಯಲ್ಲಿ ಅಣು ಶಕ್ತಿ ಆಯೋಗದಿಂದ ಹೆಚ್ಚಿನ ಸಂಶೋಧನೆಗಳಿಗೆ ಅಗತ್ಯ ಹಣಕಾಸಿನ ನೆರವನ್ನು ಪಡೆಯಲು ಸಮರ್ಥವಾಯಿತು.

ವಿಕ್ರಮ್ ಸಾರಾಭಾಯಿ ಅವರಿಗೆ ಅನೇಕಾನೇಕ ವಿಚಾರಗಳ ಬಗ್ಗೆ ಎಲ್ಲೆ ಮೀರಿದ ಆಸಕ್ತಿ. ಈ ಕಾರಣಕ್ಕೆ ಅವರು ಆಪರೇಷನ್ ಸಂಶೋಧನಾ ಸಮುಚ್ಚಯವನ್ನು (ಓಆರ್‌ಜಿ) ಮಾರುಕಟ್ಟೆಗಳ ಅಧ್ಯಯನಕ್ಕೋಸ್ಕರ ಸ್ಥಾಪಿಸಿದರು. ನೆಹರು ಫೌಂಡೇಶನ್ ಅಭಿವೃದ್ಧಿ ಸಂಸ್ಥೆ, ಸುಪ್ರಸಿದ್ಧ ಐ.ಐ.ಎಮ್. (ಅಹ್ಮದಾಬಾದ್) ಸಂಸ್ಥೆ, ಅಹ್ಮದಾಬಾದ್ ಜವಳಿ ಕೈಗಾರಿಕಾ ಸಂಶೋಧನಾ ಸಂಸ್ಥೆ (ಎಟಿಐಆರ್‌ಎ). ಇತ್ಯಾದಿಗಳ ಸ್ಥಾಪನೆಯಲ್ಲಿ ಸಹ ವಿಕ್ರಮ್ ಸಾರಾಭಾಯಿ ಶ್ರಮಿಸಿರುವುದು ಅವಿಸ್ಮರಣೀಯ. ಅಣು ವಿಜ್ಞಾನದಲ್ಲಿ ಅಪಾರ ಆಸಕ್ತಿ ಹೊಂದಿದ್ದ ವಿಕ್ರಮ್ ಸಾರಾಭಾಯಿ ಅವರ ಅವಿರತ ಶ್ರಮದಿಂದ ಸ್ಥಾಪನೆಯಾದದ್ದು ಕಲ್ಪಾಕ್ಕಂನಲ್ಲಿರುವ Faster Breeder Test Reactor (FBTR), ಕಲ್ಕತ್ತಾದಲ್ಲಿ Variable Energy Cyclotron Project, ಹೈದರಾಬಾದ್‌ನಲ್ಲಿರುವ ಎಲೆಕ್ಟ್ರಾನಿಕ್ ಕಾರ್ಪೊರೇಶನ್ ಆಫ್ ಇಂಡಿಯಾ (ಇಸಿಐಎಲ್), ಝಾರ್ಖಂಡ್‌ನಲ್ಲಿ ಯುರೇನಿಯಮ್ ಕಾರ್ಪೊರೇಶನ್ ಆಫ್ ಇಂಡಿಯಾ ಇತ್ಯಾದಿಗಳು. ಎಲ್ಲದಕ್ಕೂ ಮಿಗಿಲಾಗಿ ಭಾರತೀಯ ಬಾಹ್ಯಾಕಾಶ ಸಂಸ್ಥೆ "ಇಸ್ರೋ" ಸಂಸ್ಥಾಪಕರೇ ಈ ಮೇರು ವರ್ಗದ ವಿಜ್ಞಾನಿ ವಿಕ್ರಮ್ ಸಾರಾಭಾಯಿ. ಅಂತರಿಕ್ಷಕ್ಕೆ ಹಾರಿಬಿಡುವ ಉಪಗ್ರಹಗಳ ತಯಾರಿಕೆಯಲ್ಲಿ ಅಗತ್ಯವಿರುವ ನಿರ್ಮಾಣ ಸಂಸ್ಥೆಯನ್ನು ಸ್ಥಾಪಿಸಿದ್ದು ವಿಕ್ರಮ್ ಸಾರಾಭಾಯಿ ಅವರೇ ಎಂಬುದು ಅವರ ವಿವಿಧ ಹೆಮ್ಮೆಯ ಸಾಧನೆಗಳಲ್ಲಿ ಒಂದಾದರೆ ೧೯೭೫ನೇ ಇಸವಿಯಲ್ಲಿ ರಶಿಯಾ ದೇಶದ ತಾಂತ್ರಿಕ ನೆರವಿನೊಂದಿಗೆ ಆ ದೇಶದ ಉಡಾವಣಾ ವೇದಿಕೆಯನ್ನು ಬಳಸಿ ಮೊದಲ ಅಂತರಿಕ್ಷ ಉಪಗ್ರಹ ಆರ್ಯಭಟವನ್ನು ಹಾರಿಸಿದ ಕೀರ್ತಿ ದಿವಂಗತ ವಿಕ್ರಮ್ ಸಾರಾಭಾಯಿ ಅವರಿಗೆ ಸಲ್ಲುತ್ತದೆ. ಈ ಮೂಲ ಕಾರಣಕ್ಕೆ ವಿಕ್ರಮ್ ಅವರನ್ನು ಭಾರತದ ಅಂತರಿಕ್ಷ ಕಾರ್ಯಕ್ರಮದ ಪಿತಾಮಹ ಎಂದೇ ಸ್ಮರಿಸಲಾಗುತ್ತದೆ.

೧೯೬೦ನೇ ಇಸವಿಯಲ್ಲಿ ಗಣಿತ ಹಾಗೂ ವಿಜ್ಞಾನ ಶಾಸ್ತ್ರವನ್ನು ಹೆಚ್ಚು ಪ್ರಚಲಿತಗೊಳಿಸುವ ನಿಟ್ಟಿನಲ್ಲಿ ಹೆಚ್ಚು ವಿದ್ಯಾರ್ಥಿಗಳನ್ನು ಈ ವಿಭಾಗದತ್ತ ಪ್ರೇರೇಪಿಸಲು ವಿ.ಎ.ಎಸ್.ಸಿ.ಎಸ್.ಸಿ. (Vikram A. Sarabhai Community Science Center) ಕೇಂದ್ರವನ್ನು ಸ್ಥಾಪಿಸಿದ್ದು ಇಂದಿಗೂ ಖಗೋಳ ವಿಜ್ಞಾನದ ಸಂಶೋಧನೆಯಲ್ಲಿ ನೆರವಾಗುತ್ತಿದೆ. ವಿಕ್ರಮ್ ಸಾರಾಭಾಯಿ ಅವರ ಅಭೂತಪೂರ್ವ ಸಾಧನೆಗಳ ಪಟ್ಟಿ ಅಗಾಧವಾಗಿದ್ದು ಕೆಲವನ್ನು ಮಾತ್ರ ಇಲ್ಲಿ ನಮೂದಿಸಲಾಗಿದೆ.

ಬಾಹ್ಯಾಕಾಶ ವಲಯದಲ್ಲಿನ ಅದ್ಭುತ ಸಾಧನೆಯನ್ನು ಗುರುತಿಸಿ ೧೯೬೬ರಲ್ಲಿ ಪದ್ಮಭೂಷಣ ಪ್ರಶಸ್ತಿಯನ್ನು ವಿಕ್ರಮ್ ಸಾರಾಭಾಯಿ ಅವರಿಗೆ ನೀಡಿ ಗೌರವಿಸಲಾಯಿತು. ತದನಂತರ, ೧೯೭೨ನೇ ಇಸವಿಯಲ್ಲಿ ಮರಣೋತ್ತರವಾಗಿ ಪದ್ಮವಿಭೂಷಣ ಪ್ರಶಸ್ತಿಯನ್ನು ನೀಡಲಾಯಿತು. ವಿಕ್ರಮ್ ಅವರ ಮುಡಿಗೇರಿದ ಮತ್ತೊಂದು ಪ್ರತಿಷ್ಠಿತ ಗರಿ ಎಂದರೆ ವಿಜ್ಞಾನ ಹಾಗೂ ತಾಂತ್ರಿಕತೆಗೆ ನೀಡಲಾದ ಶಾಂತಿ ಸ್ವರೂಪ ಭಾಟ್ನಗರ್ ಪ್ರಶಸ್ತಿ. ೨೦೧೯ರ ಆಗಸ್ಟ್ ೧೨ನೇ ತಾರೀಕಿನಂದು ಶ್ರೀ ವಿಕ್ರಮ್ ಸಾರಾಭಾಯಿ ಅವರ ಜನ್ಮ ಶತಮಾನೋತ್ಸವವನ್ನು ಆಚರಿಸುವ ಸಂದರ್ಭ ವಿಜ್ಞಾನ ವಲಯಕ್ಕೆ ಒದಗಿ ಬಂದಿದೆಯಾದರೂ ಸಹ ೧೯೭೧ರ ಡಿಸೆಂಬರ್ ೩೦ರಂದು, ಕೇವಲ ತಮ್ಮ ೫೨ನೇ ವಯಸ್ಸಿನಲ್ಲಿ, ಕೇರಳದ ತಿರುವನಂತಪುರದಲ್ಲಿ ಹಠಾತ್ತನೆ ನಿಧನರಾದ ವಿಚಾರದಲ್ಲಿ ಹೆಚ್ಚಿನ ಮಾಹಿತಿ, ಕಾರಣ ಇಂದಿಗೂ ಲಭ್ಯವಿಲ್ಲ ಎಂಬುದು ಮಾತ್ರ ಬೇಸರದ ವಿಚಾರ. ಭಾರತ ಸರ್ಕಾರ ಶ್ರೀ ವಿಕ್ರಮ್ ಸಾರಾಭಾಯಿ ಅವರ ಸ್ಮರಣಾರ್ಥವಾಗಿ ೧೯೭೨ನೇ ಇಸವಿಯಲ್ಲಿ ೨೦ ಪೈಸೆಯ ಅಂಚೆ ಚೀಟಿಯನ್ನು ಬಿಡುಗಡೆ ಮಾಡಿ ಗೌರವ ಸೂಚಿಸಿತು.

ಪ್ರಸ್ತುತ ಭಾರತ ದೇಶ ಖಗೋಳ ವಿಜ್ಞಾನದಲ್ಲಿ ದಾಖಲಿಸಿರುವ ಅಭೂತಪೂರ್ವ ಯಶಸ್ಸು, ಸ್ವದೇಶೀ ತಂತ್ರಜ್ಞಾನ ಬಳಸಿ ಕ್ರೈಯೋಜೆನಿಕ್ ಇಂಜನ್ ತಯಾರಿಕೆ, ದಿನನಿತ್ಯದ ಚಟುವಟಿಕೆಗಳಿಗೆ ನೆರವಾಗುವಂತಹ, ಬಾಹ್ಯಾಕಾಶದಲ್ಲಿ ನಿರಂತರವಾಗಿ ಚಲಿಸುತ್ತಿರುವ ಅನೇಕಾನೇಕ ಉಪಗ್ರಹಗಳ ಯಶಸ್ವಿ ಹಾರಾಟಕ್ಕೆ, ಚಂದ್ರಯಾನದತ್ತ ಇಟ್ಟಿರುವ ಹತ್ತು-ಹಲವು ಹೆಜ್ಜೆಗಳಿಗೆ ನಾಲ್ಕೈದು ದಶಕಗಳ ಹಿಂದೆಯೇ ಅಡಿಪಾಯ ಹಾಕಿದ ದಿ॥ ವಿಕ್ರಮ್ ಸಾರಾಭಾಯಿ ಅವರಿಗೆ ಶ್ರದ್ಧಾಂಜಲಿ ಸಲ್ಲಿಸುವ ಸಾಮಾಜಿಕ ಜವಾಬ್ದಾರಿಯೇ ಈ ಮಾಹಿತಿ ಲೇಖನ.

**ರಾಜೀವ್ ಎನ್. ಮಾಗಲ್**
ಶ್ರೀ ಸಾಯಿ ಸಿರಿ ಎಸ್ಟೇಟ್, ಅಂ.ಪೆ. ಸಂ : ೬೩, ಸಕಲೇಶಪುರ - ೫೭೩ ೧೩೪ ಹಾಸನ ಜಿಲ್ಲೆ
ಮಿಂಚಂಚೆ : rajivmagal2016@gmail.com

# ತುಲಾ ಸಂಕ್ರಮಣ - ಚಿತ್ರಾ ನಕ್ಷತ್ರ - ಯಾವುದು ಸರಿ?

**ಈ** ತಿಂಗಳ ೧೮ರಂದು "ತುಲಾ ಸಂಕ್ರಮಣ" ಎಂಬುದೊಂದು ಆಚರಣೆ ಉಂಟು. ಅಂದು ಸೂರ್ಯ ಇನ್ನೂ ಕನ್ಯಾ ರಾಶಿಯಲ್ಲೇ ಇರುವುದನ್ನು ಕಾಣಬಹುದು. ಹೇಗೆ? ಬುಧ ಶುಕ್ರಗಳೆರಡೂ ಕಾಣುವ ಪುಂಜವೇ ಕನ್ಯಾ. ಆಕಾಶ ಶುಭ್ರ ವಾಗಿದ್ದರೆ ೩ರಂದು ಸಂಜೆ ಚಿತ್ರಾ ನಕ್ಷತ್ರವನ್ನು ಶುಕ್ರದ ಪಕ್ಕ ಕಾಣಬಹುದು. ಸೋಹೋ ಎಂಬ ಬಾಹ್ಯಾಕಾಶ ವೀಕ್ಷಣಾಲಯ ಪ್ರತಿದಿನವೂ ಸೂರ್ಯನ ಚಿತ್ರವನ್ನು ತೆಗೆದು ಕಳಿಸುತ್ತದೆ. ಹಿನ್ನೆಲೆಯಲ್ಲಿ ನಕ್ಷತ್ರಗಳೂ ಕಾಣಿಸುವುದು ಈ ಚಿತ್ರಗಳ ವೈಶಿಷ್ಟ್ಯ. ೧೮ರಂದು ಸೂರ್ಯನೊಡನೆ ಚಿತ್ರಾ ನಕ್ಷತ್ರವನ್ನು ನೋಡುವುದು ಹೀಗೆ ಸಾಧ್ಯವಾಗುತ್ತದೆ. ಕ್ಯಾಲೆಂಡರ್‌ಗಳಲ್ಲಿ ಮಳೆ ನಕ್ಷತ್ರ ಎಂಬ ನಮೂದೂ ಇರುತ್ತದೆ. ಇದಕ್ಕೂ ಮಳೆಗೂ ಸಂಬಂಧ ಸುತ್ತು ಬಳಸಾಗಿದೆ. ವಾಸ್ತವದಲ್ಲಿ ಇದು ಸೂರ್ಯನ ಸಮೀಪ ಇರುವ ನಕ್ಷತ್ರ. ಇದು ಸೋಹೋ ಚಿತ್ರಕ್ಕೆ ತಾಳೆಯಾ ಗುತ್ತದೆ. ಅಂದರೆ ಸೂರ್ಯನ ಸ್ಥಾನವನ್ನು ಸರಿಯಾಗಿ ಸೂಚಿಸು ತ್ತದೆ. ಹಾಗಾದರೆ ತುಲಾ ರಾಶಿಯ ಆಚರಣೆ ಹಿಂದೆ ಬಿದ್ದಿದೆ ಎಂದಾಯಿತಲ್ಲವೇ?

ಸಂಜೆಯ ಆಕಾಶದತ್ತ ಗಮನ ಹರಿಸೋಣ. ಮಳೆಯಿಂದ ಸ್ವಚ್ಛವಾದ ಆಕಾಶದಲ್ಲಿ ಎದ್ದು ಕಾಣುವ ಚುಕ್ಕೆಗಳು ಪಶ್ಚಿಮ ದಲ್ಲಿವೆ. ಶುಕ್ರ, ಬುಧ, ಸ್ವಲ್ಪ ಮೇಲೆ ಗುರು, ಇನ್ನೂ ಸ್ವಲ್ಪ ಮೇಲೆ ಶನಿ – ಹೀಗೆ. ದಿಗಂತದ ಅಂಚಿನಲ್ಲಿರುವುದು ಶುಕ್ರ. ಅದರ ಸಮೀಪವೇ ಕಾಣುವ ಕ್ಷೀಣ ಚುಕ್ಕೆ ಬುಧ. ೩ರಂದು ಚಂದ್ರನ ಪಕ್ಕ ಕಾಣುವ ಚುಕ್ಕೆ ಗುರು; ೫ರಂದು ಚಂದ್ರನ ಪಕ್ಕ ಇರುವುದು ಶನಿ. ಚಂದ್ರ ಶನಿ ಗ್ರಹವನ್ನು ಮುಚ್ಚಿಹಾಕುವ ಕಾರ್ಯಕ್ರಮವಿದೆ. ಇದೇ ಆಚ್ಛಾದನೆ. ಈ ಘಟನೆ ನಮಗೆ ಕಾಣುವುದಿಲ್ಲ; ಆದರೆ ಚಂದ್ರನಿಗೆ ಅಂಟಿಕೊಂಡ ಹಾಗೆ ಈ ಚುಕ್ಕೆ ಕಾಣುತ್ತದೆ. ತಿಂಗಳ ಮೊದಲ ವಾರದಲ್ಲಿ ಹೀಗೆ ಇವನ್ನು ಗುರುತಿಸಿಕೊಂಡು ದಿನೇ ದಿನೇ ಅವುಗಳ ಸ್ಥಾನಗಳನ್ನು ಗಮನಿಸಿ. ೩೦ರಂದು ಪುನಃ ಚಂದ್ರ ಪಶ್ಚಿಮದ ಅಂಚಿಗೆ ಕಾಣಿಸಿಕೊಂಡಾಗ ಈ ನಾಲ್ಕೂ ಚುಕ್ಕೆಗಳು ಹೇಗೆ ಸಮೀಪಿಸಿ ಇವೆ ಎಂದು ತಿಳಿಯುತ್ತದೆ. ಬುಧ, ಶುಕ್ರ ಆಮೇಲೆ ಚಂದ್ರ, ಅದರ ಪಕ್ಕ ಕಾಣುವ ಚುಕ್ಕೆ ಜ್ಯೇಷ್ಠಾ ನಕ್ಷತ್ರ, ಆಮೇಲೆ ಗುರು, ಶನಿ. ಹೀಗೆ ನಾಲ್ಕೂ ಗ್ರಹಗಳನ್ನು ಸಂಜೆಯಲ್ಲಿಯೇ ನೋಡುವ ಅವಕಾಶ ಇದೆ. ಬಿಟ್ಟು ಹೋದದ್ದು ಮಂಗಳ ಮಾತ್ರ. ಆದರೂ ಮಂಗಳದ ವೈರಿಯನ್ನು ನೋಡಿದೆವೆಂದು ಸಮಾಧಾನ ಮಾಡಿಕೊಳ್ಳಬಹುದು. ಏಕೆ ಗೊತ್ತೆ? ಅಂಟಾರೆಸ್ ಎಂಬುದು ಜ್ಯೇಷ್ಠಾದ ಹೆಸರು. ಅದರ ಅರ್ಥ ಆರೆಸ್‌ನ ವೈರಿ ಎಂದು. ಆರೆಸ್ ಎಂದರೆ ಯುದ್ಧದ ದೇವತೆ. ಅದೇ ಮಂಗಳ. ವೈರಿ ಏಕೆ? ಎರಡರ ನಡುವೆ ಸ್ಪರ್ಧೆ ಯಾವುದು ಹೆಚ್ಚು ಕೆಂಪು ಬಣ್ಣದ್ದು ಎಂದು.

ಅಕ್ಟೋಬರ್ ೩೦ರಂದು ಶನಿ, ಗುರು, ಜ್ಯೇಷ್ಠಾ, ಶುಕ್ರ, ಬುಧ ಚಂದ್ರನೊಂದಿಗೆ

ಶುಭ್ರವಾದ ಆಕಾಶದಲ್ಲಿ ಆಕಾಶಗಂಗೆಯನ್ನು ಹುಡುಕುವ ಪ್ರಯತ್ನ ಮಾಡಬಹುದು. ಧನುರಾಶಿಯ ದೂಳು, ಅನಿಲ ಮತ್ತು ನೆಬ್ಯುಲಾಗಳ ದಟ್ಟಣೆ – ಇದು ನದಿಯ ಉಗಮದ ಕಲ್ಪನೆ ಮೂಡಿಸುತ್ತದೆ. ವೃಶ್ಚಿಕ, ಧನುಗಳನ್ನು ಸೂಕ್ಷ್ಮವಾಗಿ ಗಮನಿಸಿದರೆ ಗಂಗೆಯ ಮುಖ್ಯಭಾಗ ಕಾಣುವುದು. ಇದರ ಇನ್ನೊಂದು ಶಾಖೆ ಉತ್ತರದ ತ್ರಿಕೋಣದ ಮೂಲಕ ಹರಿಯುವಂತೆ ಕಾಣುತ್ತದೆ. ರಾಜಹಂಸದ (ಸಿಗ್ನಸ್) ಹಂಸಾಕ್ಷಿ, ವೀಣಾದ (ಲೈರಾ) ಅಭಿಜಿತ್ ಮತ್ತು ಗರುಡದ (ಅಕ್ವಿಲಾ) ಶ್ರವಣ – ಈ ನಕ್ಷತ್ರಗಳೇ ತ್ರಿಕೋಣದ ಮೂಲೆಗಳು.

ಮಂಗಳ ಗ್ರಹ ಬೆಳಗಿನ ಜಾವ ಕಾಣುತ್ತಿದೆ. ದಿಗಂತದ ಅಂಚಿನಲ್ಲಿದೆ. ಜಿಯೋಕೋಬಿನಿ ಝಿನ್ನರ್ ಎಂಬ ಧೂಮಕೇತುವಿನ ಕಣಗಳು ೮ರ ಮುಂಜಾವಿನಲ್ಲಿ ಮತ್ತು ಹ್ಯಾಲೀ ಧೂಮಕೇತುವಿನ ಕಣಗಳು ೨೨ರ ಮುಂಜಾವಿನಲ್ಲಿ ಉಲ್ಕೆಗಳಾಗಿ ಮಿಂಚುವುವು.

**ಖಗೋಳ ದಿನಚರಿ**

- ೩ ಚಂದ್ರದ ಪಕ್ಕ ಗುರು : ಶುಕ್ರ – ಚಿತ್ರಾ ಜೋಡಿ
- ೫ ಚಾಂದ್ರಮಾಸದ ಮೊದಲ ಪಾದ: ಚಂದ್ರ ಶನಿ–ಜೋಡಿ*(ಆಚ್ಛಾದನೆ ಕಾಣುವುದಿಲ್ಲ)
- ೧೦ ಚಂದ್ರ – ಭೂಮಿ ನಡುವೆ ಗರಿಷ್ಠ ದೂರ
- ೧೩ ಹುಣ್ಣಿಮೆ ೧೧:೩೦ಕ್ಕೆ
- ೧೭ ಕೃತ್ತಿಕಾ – ರೋಹಿಣಿ – ಚಂದ್ರ ಪುಟ್ಟ ಗುಂಪು*
- ೧೯ ಬುಧ ಗ್ರಹದ ಗರಿಷ್ಠ ಕೋನೋನ್ನತಿ*
- ೨೧ ಚಾಂದ್ರಮಾಸದ ಕೊನೆಯ ಪಾದ
- ೨೩ ಚಂದ್ರ – ಮಘ ಜೋಡಿ
- ೨೬ ಚಂದ್ರ – ಭೂಮಿ ನಡುವೆ ಕನಿಷ್ಠ ದೂರ: ಮಂಗಳ ಚಂದ್ರ ಜೋಡಿ*
- ೨೮ ಅಮಾವಾಸ್ಯೆ
- ೨೯ ಶುಕ್ರ– ಚಂದ್ರ ಜೋಡಿ* (ಆಚ್ಛಾದನೆ ಕಾಣುವುದಿಲ್ಲ)
- ೩೧ ಚಂದ್ರ – ಗುರು ಜೋಡಿ*

(*ಛಾಯಾಗ್ರಹಣಕ್ಕೆ ಸದವಕಾಶ)

**ಡಾ॥ ಬಿ. ಎಸ್. ಶೈಲಜಾ**
ಜವಾಹರಲಾಲ್ ನೆಹರು ತಾರಾಲಯ, ಹೈಗ್ರೌಂಡ್ಸ್, ಬೆಂಗಳೂರು – ೧











# ಶಿಕ್ಷಣ

## ವಾಸ್ತವದ ಕೆಲವು ಸಮಸ್ಯೆಗಳು

ಇದೀಗ ಶಿಕ್ಷಣ ಕುರಿತಂತೆ ಹೊಸದೊಂದು ಚರ್ಚೆ ತೊಡಗಿದೆ. ಹತ್ತಾರು ಸಲಹೆಗಳು, ಟೀಕೆಗಳು ಬರುತ್ತಿವೆ. ಜೊತೆಗೆ, ಮೊದಲಿನಿಂದ ಇದ್ದ ಶಿಕ್ಷಣದ ಭಾಷೆ, ಮಾಧ್ಯಮ ಯಾವುದಾಗಿರಬೇಕು ಎಂಬುದು ಕ್ಲೀಶೆಯಾಗುವಷ್ಟು ಚರ್ಚೆಯಾಗಿದೆ. ಈ ಸಂದರ್ಭದಲ್ಲಿ ವಾಸ್ತವದ ಕೆಲವು ವಿಷಯಗಳನ್ನು ಚರ್ಚಿಸೋಣ.

ಮಾತೃಭಾಷೆಯಲ್ಲೇ ಶಿಕ್ಷಣ ಎಂಬುದನ್ನು ಜಾಗತಿಕ ತಜ್ಞರು ಹೇಳಿದ್ದರೂ ನಮ್ಮ ಪೋಷಕರಿಗೆ ಅದು ನಿಲುಕಿಯೇ ಇಲ್ಲ. ಕಾರಣಗಳು ಏನೇ ಇರಲಿ, ನಮ್ಮ ಮಕ್ಕಳಿಗೆ ಅವರಿಗೆ ವೈಜ್ಞಾನಿಕವಾದ ಶಿಕ್ಷಣ ಮಾಧ್ಯಮ ದೊರೆಯದೇ ಇರುವುದು ಅತ್ಯಂತ ಖೇದಕರ ಅಂಶ, ಇದು. ಹೊಸ ಶಿಕ್ಷಣ ಪದ್ಧತಿಗೆ ಬಂದಿರುವ ಕರಡು ಹಾಗೂ ಇದರ ಸುತ್ತಿನ ಅನೇಕ ಗಹನವಾದ ವಿಷಯಗಳನ್ನು ಬದಿಗಿಟ್ಟು ವಾಸ್ತವದಲ್ಲಿ ಏನಾಗುತ್ತಿದೆ ಎಂಬುದನ್ನು ನೋಡೋಣ.

ರಾಜ್ಯ ಸರ್ಕಾರ ಸಹ ಹಂತ ಹಂತವಾಗಿ ಎನ್‌ಸಿಇಆರ್‌ಟಿ ಪಠ್ಯವನ್ನು ಜಾರಿಗೆ ತರುತ್ತಿದೆ, ಸಂತೋಷ. (ಇದಕ್ಕೆ ತಕ್ಕಂತೆ ಶಿಕ್ಷಕರಿಗೆ ಅಗತ್ಯವಾದ ತರಬೇತಿಯನ್ನು ಕೊಡುತ್ತಿದೆಯೇ ಎಂಬ ಅಂಶವನ್ನೂ ಬದಿಗಿಡೋಣ). ಈಗ ಸಿಬಿಎಸ್‌ಇ ಮತ್ತು ಐಸಿಎಸ್‌ಇ ಬಹುಬೇಡಿಕೆಯುಳ್ಳ ವ್ಯವಸ್ಥೆಗಳು. ಕೇಂದ್ರ ಸರ್ಕಾರಿ ನೌಕರಿಯಲ್ಲಿರುವವರಿಗೆ ಎಂಬ ನೆಪದಲ್ಲಿ ಆರಂಭವಾದ ಇವು ಇಂದು ಬೇರೆಯೇ ರೂಪವನ್ನು ಪಡೆದುಕೊಂಡುಬಿಟ್ಟಿವೆ. ಸಿಬಿಎಸ್‌ಇಯ ಬೆಂಬಲವೆನ್ನಿಸಿಕೊಳ್ಳುವ ಮತ್ತು ಐಸಿಎಸ್‌ಇ ಪಠ್ಯಪುಸ್ತಕಗಳನ್ನು ಖಾಸಗಿಯವರು ಪಠ್ಯಕ್ರಮವನ್ನು ಅನುಸರಿಸಿ ಪ್ರಕಟಿಸುತ್ತಾರೆ. ಇದರಲ್ಲಿ ತಪ್ಪೇನು ಎನ್ನುವಂತಿಲ್ಲ. ಇವುಗಳ ಬೆಲೆ ಅಂತರಿಕ್ಷಕ್ಕೂ ಮೇಲಿದೆ! ನೂರು ಪುಟಗಳ ಪುಸ್ತಕಕ್ಕೆ ಇವರು ನಿಗದಿ ಮಾಡುವ ಸಾಮಾನ್ಯ ಬೆಲೆ ಮುನ್ನೂರು ರೂಪಾಯಿ! ವಿಜ್ಞಾನವನ್ನು ಮೂರು ಭಾಗಗಳಾಗಿ ಮಾಡಿ (ಭೌತ, ರಾಸಾಯನಿಕ ಮತ್ತು ಜೀವ) ಮೂರಕ್ಕೂ ಮುನ್ನೂರು ಮುನ್ನೂರು ಪೀಕುತ್ತಾರೆ. ಸಮಾಜ ಶಾಸ್ತ್ರಕ್ಕೆ (?) ನಾಲ್ಕು! ಲಕ್ಷಾಂತರ ಪ್ರತಿಗಳು ಖರ್ಚಾಗುವಾಗ ಇದರ ಹಿಂದಿರುವ ಲಾಬಿ ಎಷ್ಟು ದೊಡ್ಡದಿರಬಹುದು ಎಂಬುದು ಊಹೆಗೆ ಬಿಟ್ಟದ್ದು

**ಕಲ್ಗುಂಡಿ ನವೀನ್**

ನಮ್ಮ ರಾಜ್ಯ ಸರ್ಕಾರ ಹಂತ ಹಂತವಾಗಿ ಎನ್‌ಸಿಇಆರ್‌ಟಿ ಪಠ್ಯವನ್ನು ಜಾರಿಗೆ ತರುತ್ತಿದೆ, ಸಂತೋಷ. (ಇದಕ್ಕೆ ತಕ್ಕಂತೆ ಶಿಕ್ಷಕರಿಗೆ ಅಗತ್ಯವಾದ ತರಬೇತಿಯನ್ನು ಕೊಡುತ್ತಿದೆಯೇ ಎಂಬ ಅಂಶವನ್ನೂ ಬದಿಗಿಡೋಣ). ಈಗ ಸಿಬಿಎಸ್‌ಇ ಮತ್ತು ಐಸಿಎಸ್‌ಇ ಬಹುಬೇಡಿಕೆಯುಳ್ಳ ವ್ಯವಸ್ಥೆಗಳು. ಕೇಂದ್ರ ಸರ್ಕಾರಿ ನೌಕರಿಯಲ್ಲಿರುವವರಿಗೆ ಎಂಬ ನೆಪದಲ್ಲಿ ಆರಂಭವಾದ ಇವು ಇಂದು ಬೇರೆಯೇ ರೂಪವನ್ನು ಪಡೆದುಕೊಂಡುಬಿಟ್ಟಿವೆ. ಸಿಬಿಎಸ್‌ಇಯ ಬೆಂಬಲವೆನ್ನಿಸಿಕೊಳ್ಳುವ ಮತ್ತು ಐಸಿಎಸ್‌ಇ ಪಠ್ಯಪುಸ್ತಕಗಳನ್ನು ಖಾಸಗಿಯವರು ಪಠ್ಯಕ್ರಮವನ್ನು ಅನುಸರಿಸಿ ಪ್ರಕಟಿಸುತ್ತಾರೆ. ಇದರಲ್ಲಿ ತಪ್ಪೇನು ಎನ್ನುವಂತಿಲ್ಲ. ಇವುಗಳ ಬೆಲೆ ಅಂತರಿಕ್ಷಕ್ಕೂ ಮೇಲಿದೆ! ನೂರು ಪುಟಗಳ ಪುಸ್ತಕಕ್ಕೆ ಇವರು ನಿಗದಿ ಮಾಡುವ ಸಾಮಾನ್ಯ ಬೆಲೆ ಮುನ್ನೂರು ರೂಪಾಯಿ! ವಿಜ್ಞಾನವನ್ನು ಮೂರು ಭಾಗಗಳಾಗಿ ಮಾಡಿ (ಭೌತ, ರಾಸಾಯನಿಕ ಮತ್ತು ಜೀವ) ಮೂರಕ್ಕೂ ಮುನ್ನೂರು ಮುನ್ನೂರು ಪೀಕುತ್ತಾರೆ. ಸಮಾಜ ಶಾಸ್ತ್ರಕ್ಕೆ (?) ನಾಲ್ಕು! ಲಕ್ಷಾಂತರ ಪ್ರತಿಗಳು ಖರ್ಚಾಗುವಾಗ ಇದರ ಹಿಂದಿರುವ ಲಾಬಿ ಎಷ್ಟು ದೊಡ್ಡದಿರಬಹುದು ಎಂಬುದು ಊಹೆಗೆ ಬಿಟ್ಟದ್ದು.

(ಅರ್ಧ ಕಾಡು ಹುಸಿ ಅಭಿವೃದ್ಧಿಗೆ ಬಲಿಯಾದರೆ ಉಳಿದದ್ದು ಈ ಪುಸ್ತಕಗಳಿಂದಲೇ ನಾಶವಾಗುತ್ತವೆಯೇನೋ!). ಇನ್ನು ಈ ಪುಸ್ತಕಗಳಿಗೆ ಸಾಮಾನ್ಯ ಗೈಡು ಬೇರೆ, ವಿವರಣಾತ್ಮಕ ಹಾಗೂ ಹಿಂದಿನ ವರ್ಷಗಳ ಪ್ರಶ್ನ ಪತ್ರಿಕೆಗಳನ್ನು ಉತ್ತರಿಸಿರುವ ಗೈಡುಗಳು ಬೇರೆ! ಎಷ್ಟೋ ಖಾಸಗೀ ಶಾಲೆಗಳು ಈ ಪುಸ್ತಕಕೋರರೊಂದಿಗೆ ಒಪ್ಪಂದ ಮಾಡಿಕೊಂಡಿರುವಂತೆ ಕಾಣುತ್ತದೆ. ಇಂತಹದ್ದೇ ಕೊಳ್ಳಬೇಕು ಎಂಬ ತಾಕೀತು ಶಾಲೆಯಿಂದ ಪೋಷಕರಿಗೆ ಬರುತ್ತದೆ. ಇದು ಪುಸ್ತಕಗಳಿಗೆ ಮಾತ್ರವಲ್ಲ, ಕಾಲಿಗೆ ಹಾಕುವ ಬೂಟಿಗೂ ಅನ್ವಯ. ಇಂತಹ ಕಂಪನಿಯ ಬೂಟೇ ಕೊಳ್ಳಬೇಕು ಎಂಬ ಆದೇಶ ಬರುತ್ತದೆ. ಆ ಕಂಪನಿಯ ಒಂದು ತಾತ್ಕಾಲಿಕ ಮಾರಾಟ ಮಳಿಗೆ ತಲೆ ಎತ್ತುತ್ತದೆ. ಒಂದು ಜೊತೆ ಬೂಟಿಗೆ ಸಾವಿರಾರು ರೂಪಾಯಿ ತೆರಬೇಕು. ಇಂತಹ ಶಾಲೆಗಳಲ್ಲಿ ಶಿಕ್ಷಣ ಶುಲ್ಕ ಲಕ್ಷ ದಾಟಿ ಕಾಲವೇ ಆಗಿದೆ. ಜೊತೆಗೆ, ಬರೆಯುವ ಪುಸ್ತಕ ಇತ್ಯಾದಿಗಳಿಗೆ ಸಾವಿರ ಸಾವಿರ ತೆರಬೇಕು. ಶ್ರೀಮಂತರು ಬಿಡಿ, ಪ್ರತಿಷ್ಠೆಯ ಬೆನ್ನುಬಿದ್ದು ಇಂತಹ ಶಾಲೆಗಳಿಗೆ ಸೇರಿಸಿದ ಮಧ್ಯಮ ಮತ್ತು ಕೆಳಮಧ್ಯಮ ವರ್ಗಗಳ ಸ್ಥಿತಿಯನ್ನು ನೆನೆದರೆ ಕರುಣೆ ಮತ್ತು ಸಿಟ್ಟು ಒಟ್ಟಿಗೆ ಬರುತ್ತವೆ.




ಇಷ್ಟೆಲ್ಲಾ ಆದ ಮೇಲೆ ಮನೆಪಾಠದ ಖರ್ಚುಗಳು! (ಟ್ಯೂಷನ್)! ಇದು ಶಾಲೆಯಷ್ಟೇ ಕಡ್ಡಾಯವಾಗಿಹೋಗಿದೆ. ಇಲ್ಲಿಯೂ ಸಹ ದೊಡ್ಡ ಹೆಸರು ಮಾಡಿದ ಟ್ಯೂಷನ್ ಅಂಗಡಿಗಳೊಂದಿಗೆ ಒಪ್ಪಂದ ಮಾಡಿಕೊಂಡಿರುವ ಶಾಲೆಗಳು ಮತ್ತು ಕಾಲೇಜುಗಳಿವೆ. ಕಾಲೇಜಿನ ವಾರ್ಷಿಕ ಶುಲ್ಕದೊಂದಿಗೆ ಟ್ಯೂಷನ್ ಅಂಗಡಿಯ ಶುಲ್ಕವನ್ನೂ ಪಡೆದುಕೊಳ್ಳಲಾಗುತ್ತಿದೆ. ಇದರಲ್ಲಿ ನೀಟ್ ಮತ್ತಿತರ ಸ್ಪರ್ಧಾತ್ಮಕ ಪರೀಕ್ಷೆಗಳಿಗೆ ತರಬೇತಿ ನೀಡುವ ಶುಲ್ಕವೂ ಸೇರಿರುತ್ತದೆ. ಹಾಗಾಗಿ ಶಿಕ್ಷಣ ಎಂಬುದು ಹಲವು ಲಾಭಕೋರ ದಂಧೆಗಳ ಆಡುಂಬೊಲವಾಗುತ್ತಿದೆ. ಇದೊಂದು ಕಳವಳಕಾರಿ ಬೆಳವಣಿಗೆ. ನಿಜವಾಗಿಯೂ ಇದು ಶಿಕ್ಷಣದ ಅಗತ್ಯವೇ? ಗುರಿಯೇ? ತಜ್ಞರು ತೀರ್ಮಾನಿಸಬೇಕು.

ಇರಲಿ, ಈಗ ಮಕ್ಕಳನ್ನು ಕುರಿತು ಯೋಚಿಸೋಣ. ನಗರ ಪ್ರದೇಶಗಳಲ್ಲಿನ ಪ್ರೌಢಶಾಲೆಯ ಮಕ್ಕಳು ಬೆಳಗ್ಗೆ ಎದ್ದಾಗಿನಿಂದ ರಾತ್ರಿ ಮಲಗುವವರೆಗೆ ಸುಮಾರು ಹದಿನಾರು ಗಂಟೆಗಳ ಕಾಲ ಶೈಕ್ಷಣಿಕ ವಿಷಯಗಳಲ್ಲಿಯೇ ಇರುತ್ತಾರೆ. (ಇದಕ್ಕೆ ಹೊರತಾದದ್ದು ಒಂದು ಸಣ್ಣ ಗುಂಪು ಮಾತ್ರ. ಗ್ರಾಮೀಣ ಪ್ರದೇಶಗಳಲ್ಲಿ ಈ ಪಿಡುಗು ಇನ್ನೂ ಕಂಡುಬಂದಿಲ್ಲ, ಸಂತೋಷ!). ಬೆಳಗ್ಗೆ ಓದು ಅಥವಾ ಮನೆಪಾಠ (ಕೆಲವು ಕಡೆ ಮನೆಪಾಠ ಬೆಳಗಿನ ಶಿಕ್ಕೆ ಆರಂಭವಾಗುತ್ತದೆ) ಮತ್ತೆ ಶಾಲೆ. ಸಂಜೆ ಮತ್ತೆ ಮನೆಪಾಠ. ಮನೆಗೆ ಹಿಂದಿರುಗಿದ ನಂತರ ಶಾಲೆಯಲ್ಲಿ ಕೊಟ್ಟ ಹೋಂವರ್ಕ್, ಪ್ರಾಜೆಕ್ಟ್ ಮಾಡುವುದು ಇಲ್ಲವೇ ಓದುವುದು! ಇದು ಸಾಮಾನ್ಯ ದಿನಚರಿ. ಆಟೋಟಗಳಿಗೆ ಅವಕಾಶವೇ ಇಲ್ಲ. ದೈಹಿಕವಾಗಿ ಬೆಳವಣಿಗೆ ಹೊಂದುತ್ತಿರುವಂತಹ ಹದಿವಯಸ್ಸಿನ ಮಕ್ಕಳಿಗೆ ಇದೊಂದು ಮಾದರಿ ಜೈಲಿನಲ್ಲಿನಂತಹ ದಿನಚರಿ. ಇದು ಖಂಡಿತವಾಗಿ ಒಳ್ಳೆಯ ಬೆಳವಣಿಗೆಯಲ್ಲ. ಮೂರು ಹೊತ್ತೂ ಓದಿನ ಹಿಂದೆ ಬಿದ್ದು ಸವೆಯುತ್ತಿರುವ ಈ ಮಕ್ಕಳಿಗೆ ಹೊರಪ್ರಪಂಚದ ಅರಿವೇ ಇಲ್ಲ. ಇನ್ನು "ಜಾಗತಿಕ ಹಳ್ಳಿ" ಮಾದರಿಯ ಫಲವಾದ ಕೌಟುಂಬಿಕ ವ್ಯವಸ್ಥೆ ಈ ಸಮಸ್ಯೆಗೆ ಬೇರೊಂದೇ ಆಯಾಮವನ್ನು ತಂದೊಡ್ಡುತ್ತಿದೆ. ಹಾಗಾಗಿ, ಮಕ್ಕಳ ಸ್ಥಿತಿಗತಿಗಳು ಶೋಚನೀಯವಾಗುತ್ತಿವೆ. ಅವರಲ್ಲಿ ನಡವಳಿಕೆಗೆ ಸಂಬಂಧಿಸಿದಂತಹ ಸಮಸ್ಯೆಗಳು ವಿಪರೀತವಾಗಿ ಕಂಡು ಬರಲಾರಂಭಿಸಿವೆ. ಕೆಲವು ಮಕ್ಕಳು ಕೆಲಸಕ್ಕೆ ಹೋಗುವ ತಂದೆತಾಯಿಗಳ ಪರಿಸ್ಥಿತಿಯನ್ನು ಬಳಸಿಕೊಂಡು ಇಬ್ಬರಿಂದಲೂ ಹಣ ಕೀಳುತ್ತಿವೆ. ಮಕ್ಕಳು ಚಟ, ಮಾದಕವಸ್ತುಗಳಿಗೆ ದಾಸರೂ ಆಗುತ್ತಿದ್ದಾರೆ. ಈ ವರ್ಗದ ಮಕ್ಕಳ ಮಾನಸಿಕ ಸ್ಥಿತಿಗತಿಗಳನ್ನು ತಜ್ಞರು ಅಧ್ಯಯನ ಮಾಡಬೇಕಾದ ಪರಿಸ್ಥಿತಿಯಿದೆ. ಒಟ್ಟಾರೆಯಾಗಿ, ಈ ಸಾಮಾಜಿಕ ಬದಲಾವಣೆಯ ವಿಸ್ತೃತ ಅಧ್ಯಯನ ಮತ್ತು ಪರಿಹಾರದ ಅಗತ್ಯ ತುರ್ತಾಗಿ ಆಗಬೇಕಿದೆ.

ವೃತ್ತಿಪರ ಶಿಕ್ಷಣದ ಕುರಿತಾದ ಒಲವು ಸಾವಿರಾರು ಇತರ ಮಾರ್ಗಗಳಿರುವ ಇಂದೂ ಏನೇನೂ ಕಡಿಮೆಯಾಗಿಲ್ಲ. ಈ ಮಗ್ಗುಲನ್ನು ಸ್ಥೂಲವಾಗಿ, ಚಿಕಿತ್ಸಾತ್ಮಕವಾಗಿ ನೋಡೋಣ. ನಮ್ಮಲ್ಲಿರುವ ವೃತ್ತಿಪರ ಶಿಕ್ಷಣದ ಸೀಟುಗಳು ಎಷ್ಟು? ಹಾಗೂ ಎಷ್ಟು ಮಂದಿ ವಿದ್ಯಾರ್ಥಿಗಳು ಇದಕ್ಕಾಗಿ ಸ್ಪರ್ಧಾತ್ಮಕ ಪರೀಕ್ಷೆಯನ್ನು ಬರೆಯುತ್ತಾರೆ? ವೈದ್ಯಕೀಯವನ್ನು ತೆಗೆದುಕೊಂಡರೆ ಪ್ರತೀ ವರ್ಷ ಸುಮಾರು ತೊಂಬತ್ತು ಸಾವಿರ ವೈದ್ಯಕೀಯ ಸೀಟುಗಳು ಲಭ್ಯವಿದ್ದರೆ, ಹದಿನೈದು ಲಕ್ಷ ಜನ ವಿದ್ಯಾರ್ಥಿಗಳು ಸ್ಪರ್ಧಾತ್ಮಕ ಪರೀಕ್ಷೆಯನ್ನು ಬರೆಯುತ್ತಾರೆ. ಎಂಜಿನಿಯರಿಂಗ್ ಹಾಗೂ ಇತರೆ ಪರೀಕ್ಷೆಗಳಿಗೂ ಸರಿಸುಮಾರು ಇದೇ ಅನುಪಾತ ಅನ್ವಯವಾಗುತ್ತದೆ. ಅಂದರೆ ಈ ಹದಿನೈದು ಲಕ್ಷ ವಿದ್ಯಾರ್ಥಿಗಳಲ್ಲಿ ಕೇವಲ ತೊಂಬತ್ತು ಸಾವಿರ ವಿದ್ಯಾರ್ಥಿಗಳಿಗೆ ಮಾತ್ರ ಸೀಟುಗಳು ಲಭ್ಯ! ಉಳಿದವರು ಬೇರೆ ಹಾದಿಯನ್ನು ಹಿಡಿಯಬೇಕು. ಇದೊಂದು ಕೆಟ್ಟ ಅನುಪಾತ ಎಂಬುದು ಮೇಲ್ನೋಟಕ್ಕೇ ಗೊತ್ತಾಗುತ್ತದೆ. ಅಷ್ಟು ಮಂದಿ ವಿದ್ಯಾರ್ಥಿಗಳು ಈ ಅವೈಜ್ಞಾನಿಕ ಸ್ಪರ್ಧೆಯಲ್ಲಿ ತಮ್ಮ ಹದಿವಯಸ್ಸಿನ ಬದುಕನ್ನು ಬಲಿ ಕೊಟ್ಟು ಭಾಗವಹಿಸಬೇಕಾದ ಅವಶ್ಯಕತೆಯನ್ನು ಸೃಷ್ಟಿಸಲಾಗಿದೆ. ಇದು ತಪ್ಪಬೇಕು. ಇಲ್ಲಿ ಮತ್ತೊಂದು ಸುಳಿಯಿದೆ. ನೀಟ್ ಪರೀಕ್ಷೆ ಉಚಿತವೇನೂ ಅಲ್ಲ! ಸಾವಿರದ ನಾನೂರು ರೂಪಾಯಿ ಕಟ್ಟಬೇಕು (ಮೀಸಲಾತಿಯಲ್ಲಿ ಬರುವವರಿಗೆ ರೂ. ಏಳುನೂರ ಐವತ್ತು. ಹದಿನೈದು ಲಕ್ಷದಿಂದ ಈ ಹಣವನ್ನು ಗುಣಿಸಿ ನೋಡಿ!). ಈ ನೀಟ್ ಪರೀಕ್ಷೆ ತಂದೊಡ್ಡುವ ಅಸಮಾನತೆಯನ್ನು ಕುರಿತಾಗಿ ಹಿರಿಯರಾದ ಡಾ॥ ಜಿ. ರಾಮಕೃಷ್ಣ ಈಗಾಗಲೇ ಬರೆದಿರುವುದರಿಂದ ನಾನು ಅದನ್ನು ಇಲ್ಲಿ ಪುನರಾವರ್ತಿಸಲು ಹೋಗುವುದಿಲ್ಲ.



ದೇಶಕ್ಕೆ ಪ್ರತಿವರ್ಷ ಅಗತ್ಯವಿರುವ ವೈದ್ಯರು ಮತ್ತು ಎಂಜಿನಿಯರುಗಳ ಸಂಖ್ಯೆಗಳ – ಕಡೆಯ ಪಕ್ಷ – ಒಂದು ಅಂದಾಜಿನ ಲೆಕ್ಕಾಚಾರವನ್ನಾದರೂ ನಡೆಸಿ, ಅದಕ್ಕೆ ತಕ್ಕಷ್ಟು ಸೀಟುಗಳನ್ನು ಸೃಷ್ಟಿಸುವುದು ಸರ್ಕಾರದ ಜವಾಬ್ದಾರಿ. ಆದರೆ

ಆ ನಿಟ್ಟಿನಲ್ಲಿ ಯೋಚಿಸಿದಂತೆಯೇ ಕಾಣದು. ಇದು ವ್ಯವಸ್ಥೆಯ ಬಹುದೊಡ್ಡ ಲೋಪ. ಹಾಗೆಯೇ, ಸ್ನಾತಕೋತ್ತರ ಸೀಟುಗಳು. ಇಲ್ಲಿಯೂ ಅವಶ್ಯಕತೆ ಹಾಗೂ ಲಭ್ಯತೆಯ ನಡುವೆ ಬಹುದೊಡ್ಡ ಕಂದಕವಿದೆ. ಈ ಕಂದಕ ದೊಡ್ಡ ಪ್ರಮಾಣದ ಭ್ರಷ್ಟಾಚಾರದ ಸರಪಳಿಗೆ ದಾರಿ ಮಾಡಿಕೊಡುತ್ತಿದೆ.

ಇವೆಲ್ಲವನ್ನೂ ದಾಟಿಕೊಂಡು ಮಕ್ಕಳು ಉನ್ನತ ಶಿಕ್ಷಣ ಪಡೆದುಕೊಳ್ಳುತ್ತಿದ್ದಾರೆ. ಇನ್ನು ಈ ಉನ್ನತ ಶಿಕ್ಷಣದ ಇಂದಿನ ಸ್ಥಿತಿಗತಿಗಳನ್ನು ತಜ್ಞರು ಹೇಳಬೇಕು. ಮುಂದಿನ ಭಾರತೀಯ ಸಮಾಜಕ್ಕೆ ಯಾವ ಬದಲಾವಣೆ ತರಬಹುದು ಎಂಬುದನ್ನು ವಸ್ತುನಿಷ್ಠವಾಗಿ ನೋಡಿ ಹೇಳಬೇಕಾಗಿದೆ. ಹಿಂದೆ ಒಬ್ಬ ತಜ್ಞರು ನಮ್ಮಲ್ಲಿ ಮೂರು ವರ್ಗದ ಸ್ನಾತಕರಿದ್ದಾರೆ ಎಂದಿದ್ದರು. ಮೊದಲನೆಯ ವರ್ಗದವರು ಅತಿ ಬುದ್ಧಿವಂತರು. ಅವರು ವಿದೇಶಗಳಿಗೆ ಹೋಗುತ್ತಾರೆ, ಹಿಂದಿರುಗುವುದಿಲ್ಲ. (ಇದು ತಪ್ಪು ಎಂದಲ್ಲ, ಒಂದು ಎಣಿಕೆ, ಅಷ್ಟೆ). ಎರಡನೆಯ ವರ್ಗದವರು ನಮ್ಮ ದೇಶದ ಉದ್ದಿಮೆಗಳಿಗೆ ಹೊಂದುತ್ತಾರೆ. ಈ ಎರಡೂ ವರ್ಗಕ್ಕೆ ಸೇರದವರು ಶಿಕ್ಷಕರಾಗುತ್ತಿದ್ದಾರೆ. ಈ ಬೆಳವಣಿಗೆಯನ್ನು ಕುರಿತು ದೊಡ್ಡ ಪ್ರಮಾಣದ ಚರ್ಚೆಯಾಗಬೇಕಿದೆ. ಇರಲಿ, ಮತ್ತೊಂದು ಮಜಲನ್ನು ನೋಡೋಣ. ಇಂದು ಪ್ರತಿಷ್ಠಿತ ಐಐಟಿ ಹಾಗೂ ಇತರೆ ಸಂಸ್ಥೆಗಳ ಎಂಜಿನಿಯರಿಂಗ್ ಸಂಶೋಧನಾ ಸಾಮರ್ಥ್ಯವೇನು ? ಸಾಮಾನ್ಯ ಎಂಜಿನಿಯರಿಂಗ್ ಕಾಲೇಜುಗಳಿಗೆ ಹೋಲಿಸಿದರೆ ಐಐಟಿಗಳು ಉತ್ತಮ. ಸುಮಾರು ಹತ್ತು ವರ್ಷಗಳ ಮುನ್ನಡೆಯನ್ನು ಇವುಗಳ ನಡುವೆ ಕಾಣಬಹುದು. ಆದರೆ ಇದೇ ಮಟ್ಟ, ಸೌಲಭ್ಯಗಳಿರುವ ಜಾಗತಿಕ ಸಂಸ್ಥೆಗಳಿಗೆ ಹೋಲಿಸಿದರೆ? ಸಂಶೋಧನೆ ಮತ್ತಿತರ ಉನ್ನತ ಶೈಕ್ಷಣಿಕ ಮತ್ತು ಸಂಶೋಧನಾತ್ಮಕ ಮಾನದಂಡಗಳಿಗನುಸಾರವಾಗಿ ಇವುಗಳ ಸ್ಥಾನವೇನು? ಎಂದರೆ ಇಲ್ಲಿಯೂ ಭಾರತದ ಅದೇ ಹಳೆ ಕತೆ ! ಕ್ರಿಕೆಟ್ ತಂಡದ ಕತೆ ! ಎರಡೇ ವರ್ಷಗಳ ಹಿಂದೆ ವಿಜ್ಞಾನಿಗಳು ಭಾರತದ ಐಐಟಿಗಳು ಮತ್ತು ಇದೇ ಸ್ತರದ ಜಾಗತಿಕ ಸಂಸ್ಥೆಗಳನ್ನು ತುಲನಾತ್ಮಕವಾಗಿ ಅಧ್ಯಯನ ಮಾಡಿ 'ಕರೆಂಟ್ ಸೈನ್ಸ್' ಎಂಬ ಪ್ರತಿಷ್ಠಿತ ಸಂಶೋಧನಾ ಪತ್ರಿಕೆಯಲ್ಲಿ ವರದಿಯನ್ನು ಪ್ರಕಟಿಸಿತು. ನಮ್ಮ ಐಐಟಿಗಳು ಸಾಧಿಸಬೇಕಾಗಿರುವುದು ಬಹಳ ಇದೆ ಎಂದು ಅಲ್ಲಿ ಸ್ಪಷ್ಟವಾಗಿ ಹೇಳಲಾಗಿದೆ. ಒಂದು ವಾಕ್ಯವನ್ನು ನೋಡಿ "... ಈ ವಿಶ್ಲೇಷಣೆಯ ಒಂದು ಮುಖ್ಯವಾದ ಫಲಿತಾಂಶವೆಂದರೆ ನಮ್ಮಲ್ಲಿ ಅತ್ಯುತ್ತಮ ಸಾಧನೆಗೈಯ್ಯುತ್ತಿರುವ ಐಐಟಿಗಳು ಸಹ ಸಂಶೋಧನಾ ಸಾಮರ್ಥ್ಯದಲ್ಲಿ ಜಗತ್ತಿನ ಎರಡು ಶ್ರೇಷ್ಠ ವಿಶ್ವವಿದ್ಯಾಲಯಗಳಿಗಿಂತ (ಎಂಐಟಿ ಮತ್ತು ಎನ್‌ಟಿಯು ಮೆಸೆಚ್ಯುಸೆಟ್ಸ್ ಇನ್‌ಸ್ಟಿಟ್ಯೂಟ್ ಆಫ್ ಟೆಕ್ನಾಲಜಿ ಹಾಗೂ ನಂನ್ಯಾಂಗ್ ಟೆಕ್ನಲಾಜಿಕಲ್ ಯೂನಿವರ್ಸಿಟಿ) ಬಹಳ ಹಿಂದಿದೆ. ಇವುಗಳಲ್ಲಿ ಎನ್‌ಟಿಯು ೧೯೯೧ರಲ್ಲಿ ಸ್ಥಾಪಿತವಾಗಿದ್ದು ನಮ್ಮ ಐದು ಐಐಟಿಗಳಿಗಿಂತ ಹೊಸದು. ಇದು ಸಂಸ್ಥೆಯು ಎಷ್ಟು ಹಳೆಯದು ಎಂಬ ಅಂಶವೊಂದೇ ಅತ್ಯುತ್ತಮ ಸಾಧನೆಗೆ ಮುಖ್ಯವಾಗಬೇಕಾಗಿಲ್ಲ ಎಂಬುದನ್ನು ತೋರಿಸುತ್ತದೆ. ಎನ್‌ಟಿಯುನಂತಹ ಹೊಸ ಸಂಸ್ಥೆ ಸಂಶೋಧನಾ ಕ್ಷೇತ್ರದ ಮುಂಚೂಣಿ ವಿಶ್ವವಿದ್ಯಾನಿಲಯಗಳ ಪಟ್ಟಿಯಲ್ಲಿ ಸ್ಥಾನ ಗಳಿಸಲು ಸಾಧ್ಯವಾದರೆ ಭಾರತದ ಐಐಟಿಗಳಿಗೆ ಏನಾಗಿದೆ?" ವೈದ್ಯಕೀಯದಂತಹ ವಿಷಯಗಳಲ್ಲಿಯೂ ತಜ್ಞರು ಸರಿಸುಮಾರು ಇಂತಹುದೇ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಿದ್ದು, ಬದಲಿ ವ್ಯವಸ್ಥೆಯನ್ನು ಸೂಚಿಸುತ್ತಿದ್ದಾರೆ. ಅನೇಕ ಹಿರಿಯ ವೈದ್ಯರು ಸಾಕಷ್ಟು ಚಿಂತನೆ ನಡೆಸಿ ಬರೆಯುತ್ತಿದ್ದಾರೆ. ಅವು ಸಾಮಾಜಿಕ ಜಾಲತಾಣಗಳಲ್ಲಿ ಹರಿದಾಡುತ್ತಿವೆ. ಅಂದರೆ ಒಟ್ಟಾರೆಯಾಗಿ ಶಿಕ್ಷಣಕ್ಕೆ ಬೇರೆಯೇ ರೂಪ ಕೊಡಬೇಕಾದ ಕಾಲ ಸನ್ನಿಹಿತವಾಗಿದೆ.

ಹೊಸ ಕರಡು ಶಿಕ್ಷಣ ಪದ್ಧತಿಯನ್ನು ಕುರಿತ ಚರ್ಚೆ ಬಿರುಸಿನಿಂದ ನಡೆಯುತ್ತಿರುವ ಈ ಇಂದಿನ ದಿನಗಳಲ್ಲಿ ಈ ನೆಲದ ವಾಸ್ತವ ಪರಿಸ್ಥಿತಿ ಹೀಗಿದೆ. ಈ ಹಿನ್ನೆಲೆಯಲ್ಲಿ ನಮ್ಮ ಶಿಕ್ಷಣ ವ್ಯವಸ್ಥೆ ಮತ್ತು ಪದ್ಧತಿಗಳಲ್ಲಿ ಧನಾತ್ಮಕವಾದದ್ದನ್ನು ಎಲ್ಲಿಂದ ಮತ್ತು ಹೇಗೆ ತರಬೇಕು ಎಂಬುದನ್ನು ನಾವು ಯೋಚಿಸಬೇಕಾಗಿದೆ. ಈ ದೇಶದ ಮಾನವ ಸಂಪನ್ಮೂಲವನ್ನು ಅಭಿವೃದ್ಧಿಪಡಿಸುವಂತಹ ಗಂಭೀರವಾದ ಮತ್ತು ದೊಡ್ಡ ಜವಾಬ್ದಾರಿ ನಮ್ಮ ವ್ಯವಸ್ಥೆಯ ಮೇಲಿದೆ.

ಹೀಗಿರುವಾಗಲೇ ನಮ್ಮ ಸರ್ಕಾರಿ ಶಾಲೆ ಮತ್ತು ಕಾಲೇಜುಗಳು ಹೆಚ್ಚು ಪ್ರಸ್ತುತವಾಗಬೇಕಾಗಿರುವುದು. ಇಲ್ಲಿ ಆಗಬೇಕಾಗಿರುವುದು ಸಾಕಷ್ಟಿದೆ. ದೇಶದ ನೈಜ ಅಭಿವೃದ್ಧಿಯಾಗಬೇಕೆಂದರೆ ಅತ್ಯುತ್ತಮ ಶಿಕ್ಷಣ ಮತ್ತು ಗುಣಮಟ್ಟದ



ವೈದ್ಯಕೀಯ ಚಿಕಿತ್ಸೆ ಉಚಿತವಾಗಿ ಜನತೆಗೆ ಸಿಗಬೇಕು. ಇಷ್ಟಾದಲ್ಲಿ ದೇಶದ ಶೇ .೮೦ರಷ್ಟು ಸಮಸ್ಯೆಗಳು ಪರಿಹಾರವಾದಂತೆಯೇ. ಇದಕ್ಕೆ ಮೊದಲ ಹೆಜ್ಜೆ ಸರ್ಕಾರಿ ಶಾಲೆಗಳ ಸಬಲೀಕರಣ. ಇದು ಸಮರೋಪಾದಿಯಲ್ಲಿ ನಡೆಯಬೇಕು. ಶಿಕ್ಷಣದ ರಾಷ್ಟ್ರೀಕರಣ ಇದಕ್ಕೆ ಪರಿಹಾರ ಎನ್ನಲಾಗುತ್ತದೆ. ಆ ಕುರಿತ ಚಿಂತನೆಯೂ ನಡೆಯಬೇಕು.

ದೇಶದ ಸರ್ವಜನ ಹಿತಕ್ಕೆ ಅವಶ್ಯವಾಗಿ ಬೇಕಾದಂತಹ ಬದಲಾವಣೆಗಳು ಇಂದು ಬೇಕಿವೆ. ಈಗ ಬರುತ್ತಿರುವ ಬದಲಾವಣೆಗಳು ಅಗತ್ಯವಾದ ಗುರಿಯನ್ನು ಎಷ್ಟರ ಮಟ್ಟಿಗೆ ಸಾಧಿಸಬಲ್ಲವು, ಏನು ಮಾಡಬೇಕು, ಎಂಬುದನ್ನು ತಜ್ಞರು, ಪ್ರಜ್ಞಾವಂತರು ಪರಿಸ್ಥಿತಿಯ ವಿಶ್ಲೇಷಣೆ, ಚರ್ಚೆಗಳನ್ನು ಮಾಡಿ ಪರಿಹಾರಗಳನ್ನು ಕಂಡುಕೊಂಡು ಸರ್ಕಾರ ಅದನ್ನು ಅನುಷ್ಠಾನಕ್ಕೆ ತರುವಂತೆ ಶ್ರಮಿಸಬೇಕಾಗಿದೆ.

**ಕಲ್ಗುಂಡಿ ನವೀನ್**
೫/೧, ಶ್ಯಾನುಭೋಗ ನಂಜುಂಡಪ್ಪ ಗಲ್ಲಿ, ಚಿಕ್ಕಮಾವಳ್ಳಿ ಅಂಚೆ
ಉಪ್ಪಾರಹಳ್ಳಿ, ಬೆಂಗಳೂರು – ೫೬೦ ೦೦೪
Email : ksn.bird@gmail.com

## ಗಜ಼ಲ್

ಜೀವನದ ನೌಕೆಯಲಿ ಶಾಂತಿಸಾಗರವ ಕಾಣಲು ಹೋದೆ
ಹುಡುಕುತ್ತ ತಡಕುತ್ತ ಸಾಗಿದೆ ದೂರ ದೂರ

ಹಗಲಿನ ರವಿಯ ಬೆಳಕಿನಲಿ ಕಾಣುತ ಹೋದೆ
ಹೊಳೆವ ತೆರೆಗಳಲಿ ಏರಿಳಿಯುತ ಸಾಗಿದೆ ದೂರ ದೂರ

ರಾತ್ರಿಯಲಿ ಚಂದ್ರನ ಬಿಂಬ ಕಾಣುತ ಮುಂದೆ ಹೋದೆ
ನಿಶ್ಶಬ್ದದ ಸ್ತಬ್ಧ ಚಿತ್ರದ ಗುಂಟ ಸಾಗಿದೆ ದೂರ ದೂರ

ಕಣ್ಣು ಮಸುಕಾಗಿ ಕೈಕಾಲು ಸೋತು ಹೋದರೂ
ಅಳುಕದೆ ಅಲುಗದೆ ಸಾಗಿದೆ ದೂರ ದೂರ

ಶಾಂತಿಸಾಗರ ಮೃಗಜಲವೆಂಬುದ ಕಾಣದಾದೆ
ತಿಳಿದೋ ತಿಳಿಯದೋ ಸಾಗಿದೆ ದೂರ ದೂರ.

**ಶಾಂತಾದೇವಿ ಹಿರೇಮಠ**
ಪ್ರಭುಸಿದ್ಧ ನಿಲಯ, ವಿಕಾಸ ನಗರ, ಕೊಪ್ಪಳ– ೫೮೩೨೩೧

ಹೊಸ ಓದು



## ಮುಂದೆ ಬರುವುದು ಮಹಾನವಮಿ

ಅಲಕ ತೀರ್ಥಹಳ್ಳಿ

**ಪುಟ : ೧೯೨**
**ಬೆಲೆ : ರೂ. ೧೯೦/–**

**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್**
ನಂ. ೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ , ಬೆಂಗಳೂರು – ೫೬೦ ೦೦೧

*ನವಿಲೆಸರವೆಂಬ ಗ್ರಾಮವು ಕೃಷಿ ಭೂಮಿಯನ್ನು ಹೊಂದಿದ್ದು ಸುತ್ತಲೂ ಕಾಡಿನಿಂದಾವೃತವಾಗಿತ್ತದು. ನವಿಲುಗಳು ಮನೆಗಳ ಕಿಟಕಿಯ ಬಳಿಯೇ ಕೇಕೆ ಹಾಕಿ ನರ್ತಿಸುತ್ತಿದ್ದವು. ಸುತ್ತಲೂ ಇನ್ನೂ ಗ್ರಾಮಗಳಿದ್ದು ಅವೆಲ್ಲ ಸರಕಾರದ ನದಿಯ ಅಣೆಕಟ್ಟೆಯೆಂಬ ಅಭಿವೃದ್ಧಿಯ ಯೋಜನೆಯಲ್ಲಿ ಮುಳುಗಡೆಯಾಗಿ ಉಳಿದ ಎರಡು ಗ್ರಾಮಗಳ ಒಳಿತು – ಕೆಡುಕುಗಳನ್ನು ಕಣ್ಣಿಗೆ ಕಟ್ಟಿದಂತೆ ಚಿತ್ರಿಸಿದ ಕಾದಂಬರಿಯಿದು. ಇದರ ಹರಹು ಸುಮಾರು ಒಂದು ಶತಮಾನದಷ್ಟು ವಿಸ್ತಾರವಾದುದು. ನಿಧಾನವಾಗಿ ಹಳ್ಳಿಯ ಚಿತ್ರಣ ಬದಲಾಗುತ್ತದೆ. ಮೈ ಬಗ್ಗಿಸಿ ದುಡಿದು ನೆಮ್ಮದಿಯಿಂದ ಇದ್ದ ಕುಟುಂಬಗಳು ತಮ್ಮ ಹಾದಿಯನ್ನು ಬದಲಾಯಿಸುತ್ತವೆ. ಇಲ್ಲಿ ಒಳ್ಳೆಯವರ, ಕೆಟ್ಟವರ, ಪಲಾಯನವಾದಿಗಳ ಕಾಲಕ್ಕೆ ತಕ್ಕಂತೆ ಬದಲಾದ ಪಾತ್ರ ಚಿತ್ರಣವಿದೆ. ಅಣೆಕಟ್ಟೆಯಿಂದ ಶ್ರೀಮಂತ ರೈತರಿಗಷ್ಟೇ ಪ್ರಯೋಜನವಾದಾಗ ಜನಜೀವನ ಆಕಾಶ ಪಾತಾಳದಷ್ಟು ಅಂತರ ಕಂಡಿತು. ಊರಿನ ಜನರ ಭಾವನೆಗಳು ಪೀಳಿಗೆಯಿಂದ ಪೀಳಿಗೆಗೆ ಬದಲಾಗಿ, ನಗರಕ್ಕೆ ವಲಸೆಹೋಗಿ ವಯಸ್ಸಾದವರು ಮಾತ್ರ ಉಳಿದು ಊರಿನ ಚಿತ್ರಣ ಬದಲಾಯಿತು... ಮುಂದೆ ಓದಿ ನೋಡಿ – ಗ್ರಾಮೋದ್ಧಾರದ ಸರಕಾರದ ಕನಸು ಹೇಗೆ ನುಚ್ಚು ನೂರಾಯಿತೆಂದು !*

## ರಾಜಧರ್ಮ (ವಸಾಹತುಶಾಹಿ ಕಾಲಘಟ್ಟದ ರಾಜಕೀಯ ಪಠ್ಯಗಳ ಅಧ್ಯಯನ)

ರಹಮತ್ ತರೀಕೆರೆ

**ಪುಟ : ೧೨+೨೪೮** **ಬೆಲೆ : ರೂ. ೨೨೦/–**

**ಪ್ರಸಾರಾಂಗ**
ಕನ್ನಡ ವಿಶ್ವವಿದ್ಯಾಲಯ, ಹಂಪಿ

*ಚರಿತ್ರೆ, ಸಾಹಿತ್ಯ, ಸಂಸ್ಕೃತಿಗಳಿಂದ ವಿಚಾರಗಳನ್ನು ಸಂಶೋಧಿಸಿ ಆಂಗ್ಲರ ವಸಾಹತುಶಾಹಿ ಕಾಲಘಟ್ಟದಿಂದ ಇತ್ತೀಚಿನವರೆಗಿನ ರಾಜ ಮತ್ತು ಧರ್ಮದ ಬಿಡಿಸಲಾಗದ ನಂಟನ್ನು ವಸ್ತುವಾಗಿಸಿ ಬರೆಯಲಾದ ವಿಮರ್ಶಾತ್ಮಕ ಲೇಖನಗಳು. ಆಳವಾದ ಅಧ್ಯಯನದಿಂದ ಮಾತ್ರ ಇಂಥ ಮಹತ್ವದ ಕೃತಿಗಳು ರೂಪುಗೊಳ್ಳಬಲ್ಲವು – ಮಾತ್ರವಲ್ಲದೆ ಓದುಗರಲ್ಲೂ ಅಂದಿನ ಕಾಲದ ಸಾಹಿತ್ಯದ, ಜನಜೀವನದ ಬಗೆಗಿನ ಮಾಹಿತಿಯನ್ನು ಹೆಚ್ಚಿಸಬಲ್ಲವು. ಬ್ರಿಟಿಷರ ಆಳ್ವಿಕೆ ಕಾಲದ ಲೇಖಕರ ವರಸೆ, ಅಂದಿನ ರಾಜಮನೆತನದ ವೈಭೋಗ ಇವನ್ನು ತಮ್ಮ ಕಾವ್ಯಗಳಲ್ಲಿ ಅಂದಿನ ಕವಿವರ್ಯರು ಸೆರೆಹಿಡಿದಿದ್ದಾರೆ. ಅಂದಿನ ವಸಾಹತುಶಾಹಿ ರಾಜನೀತಿ ಜೊತೆಗೆ ಸಂಸ್ಥಾನಗಳ ಆಡಳಿತ ವ್ಯವಸ್ಥೆ ಇವುಗಳ ಸ್ಥೂಲ ಚಿತ್ರಣ ಇಲ್ಲಿ ಸಿಗುತ್ತದೆ. ಇದಕ್ಕೆ ಆಧಾರ ಅಂದಂದಿನ ಸಾಹಿತ್ಯಕೃತಿಗಳು, ಪುರಾಣ ಗ್ರಂಥಗಳು. ಅಂದಿನ ಚರಿತ್ರೆಯನ್ನು ಆಯಾಕಾಲದ ಸಾಹಿತ್ಯ ಕೃತಿಗಳು – ಸಂಸ್ಕೃತಿಗಳು ತಮ್ಮ ಒಡಲೊಳಗಿಟ್ಟುಕೊಂಡು ರಚನೆಯಾಗಿರುತ್ತವೆ. ಅಲ್ಲಿಂದ ವಿಷಯ ಸಂಗ್ರಹಿಸಿ ಅಲ್ಲಿರುವ ವಿರೋಧಾಭಾಸ, ವ್ಯಂಗ್ಯಾರ್ಥಗಳನ್ನು ಅರ್ಥೈಸಿಕೊಂಡು ತಮ್ಮ ವಿಮರ್ಶೆಗೆ ಒಡ್ಡಲು ತುಂಬ ತಾಳ್ಮೆ ಮತ್ತು ಅಷ್ಟೇ ಬುದ್ಧಿಮತ್ತೆ ಬೇಕು. ಅವೆರಡೂ ಶ್ರೀ ರಹಮತ್ ತರೀಕೆರೆಯವರಲ್ಲಿರುವುದರಿಂದ ಇಂಥ ಅಮೂಲ್ಯ ಕೃತಿ ಹೊರಬಂದಿದೆ.*



## ಶಿಕ್ಷಣದಲ್ಲಿ ಭಾಷೆ ಮತ್ತು ಮಾಧ್ಯಮದ ಸಮಸ್ಯೆಗಳು

ಡಾ॥ ಮಹಾಬಲೇಶ್ವರ ರಾವ್

**ಪುಟ : vi+೧೯೨** **ಬೆಲೆ : ರೂ. ೨೧೦/–**

**ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರ,** ಮಣಿಪಾಲ ಅಕಾಡೆಮಿ ಆಫ್ ಹೈಯರ್ ಎಜುಕೇಶನ್ (ಮಾಹೆ), ಎಂ.ಜಿ.ಎಂ. ಕಾಲೇಜು ಆವರಣ, ಉಡುಪಿ – ೫೭೬೧೦೨

*ಭಾಷೆಗಳು ಹಲವಾದರೂ ಕಲಿಕೆಯ ಮಾಧ್ಯಮವಾಗಿ ಮಾತೃಭಾಷೆಗೇ ಮೊದಲ ಸ್ಥಾನ. ಅದು ಮಗುವು ಮಾತು ಪ್ರಾರಂಭಿಸುವ ಭಾಷೆ. ಮುಂದೆ ಹಲವು ಭಾಷೆಗಳನ್ನು ಕಲಿಯುವ ಆಯ್ಕೆ ಇದ್ದೇ ಇದೆ. ಶಿಕ್ಷಣ ಮಾಧ್ಯಮದ ಸಮಸ್ಯೆಗಳನ್ನು ಮತ್ತು ಭಾಷೆಯ ಬಗೆಗಿನ ಅಧ್ಯಯನ ರೂಪದ ಒಂದು ವ್ಯಾಖ್ಯಾನವನ್ನು ಕೈಗೆತ್ತಿಕೊಂಡು ಈ ಕೃತಿಯಲ್ಲಿ ಲೇಖಕರು ಆಳ ಹಾಗೂ ವಿಸ್ತಾರವಾದ ಓದನ್ನು ನಮಗೆ ನೀಡಿದ್ದಾರೆ. ಇಲ್ಲಿ ಶಿಕ್ಷಣ ಮಾಧ್ಯಮದ ಭಾಷಾ ಸಮಸ್ಯೆಯೂ ಸೇರಿದೆ; ಇಂದಿನ ಸರಕಾರಗಳ ಶಿಕ್ಷಣ ನೀತಿಯೂ ಜನರಿಗೆ ಹೇಗೆ ಮಾರಕವಾಗಿದೆ ಎಂದು ಅರ್ಥೈಸಿಕೊಳ್ಳಬಹುದು. ಶಿಕ್ಷಣ ಮಾಧ್ಯಮದ ಕಡೆ ಬೆಟ್ಟು ಮಾಡಿದಾಗ, ಪ್ರೌಢಶಾಲಾ ವ್ಯಾಸಂಗ – ಉನ್ನತ ಶಿಕ್ಷಣದ ಕಡೆ ಹೊರಳಿದಾಗ ಅಲ್ಲಿ ಧುತ್ತೆಂದು ನಿಲ್ಲುವ ಇಂಗ್ಲಿಷೇ ನಮಗೆ ಗತಿ ಎನ್ನುವಂತಾಗಿದೆ ನಮ್ಮ ಸ್ಥಿತಿ. ಜಾಗತಿಕ ಭಾಷೆಯಾದ ಇಂಗ್ಲಿಷ್ ಕಲಿಯದಿದ್ದರೆ, ಪ್ರಾದೇಶಿಕ ಭಾಷೆಗೆ ಅಂಟಿಕೊಂಡಿದ್ದರೆ ವಿದ್ಯಾರ್ಥಿ ಅಲ್ಲಿಂದ ಮುಂದಡಿ ಇಡುವುದು ಅಸಾಧ್ಯವೆಂಬ ಮಾತೂ ಕೇಳಿ ಬರುತ್ತದೆ. ಕಲಿಕೆಯ ದೃಷ್ಟಿಯಿಂದ ಭಾಷೆ ಕಲಿಯಬೇಕೇ ವಿನಹ ಗಳಿಕೆಯ ದೃಷ್ಟಿಯಿಂದಲ್ಲ ಎಂಬ ಸತ್ಯ ನಮಗೆ ಅರ್ಥವಾಗಬೇಕು. ಭಾಷಾ ಮಾಧ್ಯಮದ ಸಮಸ್ಯೆಗಳನ್ನು ವಿವರಿಸುವ ಈ ಪುಸ್ತಕ ಅದಕ್ಕೆ ಪರಿಹಾರವನ್ನು ಜನರೇ ಕಂಡುಕೊಳ್ಳಬೇಕಾದ ಅಗತ್ಯ ಒತ್ತಿ ಹೇಳಬೇಕಾಗಿದೆ.*

## ನನ್ನ ದೇವರು ಹೆಣ್ಣು

ನೂರ್ ಜಾಹೀರ್ ಅನು : ಅಬ್ದುಲ್ ರೆಹಮಾನ್ ಪಾಷ ಎಂ.

**ಪುಟ : ೨೨೪** **ಬೆಲೆ : ರೂ. ೨೨೫/–**

**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್**
ನಂ. ೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ , ಬೆಂಗಳೂರು – ೫೬೦ ೦೦೧

*ಮುಸ್ಲಿಮ್ ಮೂಲಭೂತವಾದವನ್ನು ಶತಾಯ ಗತಾಯ ಉಳಿಸಿಕೊಳ್ಳುವ ಪ್ರಯತ್ನವೊಂದು ಈ ಕೃತಿಯಲ್ಲಿ ಹಾಸುಹೊಕ್ಕಾಗಿದ್ದು ಅಷ್ಟೇ ಪ್ರಗತಿಪರರ ಹೋರಾಟವೂ ರೂಪುಗೊಂಡಿದೆ. ಸಾಮಾನ್ಯವಾಗಿ ಎಲ್ಲ ಧರ್ಮಗಳೂ ಅಷ್ಟೇ, ಹೊಸದನ್ನು ಸ್ವೀಕರಿಸಲಾಗದ ನಿಂತ ನೀರಲ್ಲೇ ಮುಳುಗೇಳುವ ಪ್ರವೃತ್ತಿಯವು. ಮುಸ್ಲಿಂ ಸಮುದಾಯ ಶರೀಯತ್ ಎಂಬ ಧಾರ್ಮಿಕ ಕಾನೂನನ್ನು, ಕುರಾನ್ ಗ್ರಂಥವನ್ನು ಮುಂದು ಮಾಡಿ ಇಂದಿಗೆ ಪ್ರಸ್ತುತವಲ್ಲದ ಯಾವುದೇ ಬದಲಾವಣೆಗೆ ಸಹ ಮುಂದಾಗದಿರುವಂಥ ಹಠಮಾರಿತನವು ಪ್ರಗತಿಪರ ನಡೆಗೆ ಮಾರಕವಾಗಿದೆ. ಮುಖ್ಯವಾಗಿ ಎಲ್ಲವೂ ಪುರುಷಕೇಂದ್ರಿತವಾಗಿದ್ದು ಮಹಿಳಾ ಶೋಷಣೆಗೆ ದಾರಿ ಮಾಡಿಕೊಡುವಂಥ ಶಾ–ಬಾನೊ ಪ್ರಕರಣದಂಥ ಅನೇಕ ಉದಾಹರಣೆಗಳಿಲ್ಲಿವೆ. "ಇಸ್ಲಾಮ್ ನನ್ನ ಧರ್ಮ, ಅದನ್ನು ಉಳಿಸೋದು ತನ್ನ ಕರ್ತವ್ಯ" ಎಂಬುದನ್ನು ಅರೆದು ಕುಡಿಸಿರುವ ಮೂಲಭೂತವಾದಿಗಳು ಇಸ್ಲಾಮ್‌ನಲ್ಲಿ ಮಾತ್ರವಲ್ಲ, ಹಿಂದೂಗಳಲ್ಲಿ ಪುರೋಹಿತಶಾಹಿ, ಕ್ರೈಸ್ತರಲ್ಲಿ ಪಾದ್ರಿಗಳಾಗಿ ಇಂದಿಗೂ ಬದಲಾವಣೆಗೆ ಅಡ್ಡಗಾಲು ಹಾಕುತ್ತಿದ್ದಾರೆ. ಪ್ರಗತಿಪರರನ್ನು ತಮ್ಮ ವೈರಿಗಳಂತೆ ಕಾಣುವ, ಅವರನ್ನು ಮುಗಿಸುವ ಪ್ರವೃತ್ತಿ ಇಂದಿಗೂ ಚಾಲ್ತಿಯಲ್ಲಿರುವುದು ಆತಂಕಕಾರಿ! ಪ್ರಗತಿಪರರನ್ನು ನಿಂದಿಸುವ ಮೂಲಭೂತವಾದಿಗಳಿಗೂ, ಪ್ರಗತಿಯ ಪರ ಮಾತನಾಡುವ ಬದಲಾವಣಾವಾದಿಗಳಿಗೂ ನಡೆಯುವ ಮಾತಿನ ವರಸೆಗಳು ಇಲ್ಲಿ ನಮ್ಮನ್ನು ವಿಚಾರಕ್ಕೆ ತೆರೆದಿಡುತ್ತವೆ.*

**– ಇಂದಿರಾ ಕುಮಾರಿ,** *ಬೆಂಗಳೂರು*

# ಅವರು ಕಾಲದ ಕೂಸುಗಳಾಗಿದ್ದರು...

**ಮ. ಶ್ರೀ. ಮುರಳಿ ಕೃಷ್ಣ**

**ಕ**ಳೆದ ಆಗಸ್ಟ್ ೨೫ರಂದು ಧಾರವಾಡದ ಕಾರ್ಯಕ್ರಮವೊಂದರಲ್ಲಿ ಮಾತನಾಡುತ್ತ ಖ್ಯಾತ ಕಾದಂಬರಿಕಾರ ಮಾನ್ಯ ಡಾ|| ಎಸ್. ಎಲ್. ಭೈರಪ್ಪನವರು ಮುಸಲ್ಮಾನರ ಪೂಜಾ ವಿಧಾನ, ಸರ್ದಾರ್ ಪಟೇಲ್ ಪಟ್ಟ ತ್ಯಜಿಸಿದ್ದ ಹಿಂದಿರುವ ಕಾರಣ, ಸಾಹಿತಿಗಳಿಂದ ಬದಲಾವಣೆ ಇತ್ಯಾದಿ ವಿಚಾರಗಳನ್ನು ಪ್ರಸ್ತಾಪಿಸಿದರು. ಇತ್ತೀಚಿನ ದಶಕಗಳಲ್ಲಿ ಅವರು ಅನೇಕ ವೇದಿಕೆಗಳಿಂದ ಒಂದಲ್ಲ ಒಂದು ವಿವಾದಾತ್ಮಕ ಹೇಳಿಕೆಯನ್ನು ನೀಡುತ್ತ ಬಂದಿದ್ದಾರೆ. ಬೌದ್ಧ ಧರ್ಮ, ಕಮ್ಯುನಿಸ್ಟರು, ಬಂಡಾಯ, ದಲಿತ ಸಾಹಿತ್ಯ, ಬುದ್ಧಿಜೀವಿಗಳು ಇತ್ಯಾದಿ ವಿಷಯಗಳ ವಿರುದ್ಧ ಪ್ರಹಾರಗಳನ್ನು ಮಾಡುತ್ತ ಬಂದಿದ್ದಾರೆ.

ಮೇಲೆ ಪ್ರಸ್ತಾಪಿಸಿರುವ ಕಾರ್ಯಕ್ರಮದಲ್ಲಿ ಅವರು ಪಟೇಲ್ ಪ್ರಧಾನಿ ಪಟ್ಟವನ್ನು ನೆಹರೂಗೆ ಬಿಟ್ಟುಕೊಟ್ಟಿದ್ದು ಗಾಂಧೀಜಿ ಬಗೆಗಿನ ಗೌರವದಿಂದಲ್ಲ ಎಂಬ ಅರ್ಥಬರುವ ಮಾತುಗಳನ್ನು ಆಡಿದ್ದಾರೆ. ಪ್ರಧಾನಿ ಮೋದಿ ತಮ್ಮ ಕೆಲವು ಭಾಷಣಗಳಲ್ಲಿ ನೆಹರು ಬದಲು ಪಟೇಲ್ ಪ್ರಧಾನಿಯಾಗಿದ್ದರೇ ನಮ್ಮ ದೇಶದ ಪರಿಸ್ಥಿತಿ ಬೇರೆಯೇ ಆಗಿರುತ್ತಿತ್ತು ಎಂದು ಮಾತನಾಡಿದ್ದಾರೆ. ಇದು ಪ್ರವರ್ಧಮಾನದಲ್ಲಿರುವ ಬಲಪಂಥೀಯ ಶಕ್ತಿಗಳು ನಡೆಸುತ್ತ ಬಂದಿರುವ ಗಾಂಧೀಜಿ/ನೆಹರು ತುಚ್ಛೀಕರಣದ ಭಾಗವಾಗಿಯೇ ಕಾಣುತ್ತದೆ. ಭೈರಪ್ಪನವರು ಇದೇ ಹಾದಿಯ ಪಯಣಿಗರಾಗಿದ್ದಾರಾ?

ಗಾಂಧೀಜಿ–ನೆಹರು–ಪಟೇಲ್‌ರ ರಾಜಕೀಯಕ್ಕೆ ಸಂಬಂಧಿಸಿದಂತೆ ಅವರ ಕಾಲದಲ್ಲಿ ಸಂಭವಿಸಿದ ಕೆಲವು ಸಂಗತಿಗಳತ್ತ ಗಮನವನ್ನು ಹರಿಸೋಣ. ಡಿಸೆಂಬರ್ ೧೯೨೯ರಲ್ಲಿ ಲಾಹೋರಿನಲ್ಲಿ ಕಾಂಗ್ರೆಸ್‌ನ ಅಧಿವೇಶನ ಜರುಗುತ್ತದೆ. ಆ ಪಕ್ಷದ ೧೦ ಪ್ರಾಂತೀಯ ಸಮಿತಿಗಳು (ಈಗಿನ ಪ್ರದೇಶ ಸಮಿತಿಗಳು) ಅಧ್ಯಕ್ಷ ಪದವಿಗೆ ಗಾಂಧೀಜಿಯವರ ಹೆಸರನ್ನು ಸೂಚಿಸುತ್ತವೆ. ಪಟೇಲ್ ಮತ್ತು ನೆಹರೂರವರ ಪರ ಕ್ರಮವಾಗಿ ಐದು ಮತ್ತು ಮೂರು ಪ್ರಾಂತೀಯ ಸಮಿತಿಗಳು ಇರುತ್ತವೆ. ಆದರೆ ಗಾಂಧೀಜಿಯವರು ನೆಹರುರವರನ್ನು ಅಧ್ಯಕ್ಷೀಯ ಪದವಿಗೆ ಆಯ್ಕೆ ಮಾಡುತ್ತಾರೆ. ಅದಕ್ಕೆ ಕಾರಣಗಳು ಇರುತ್ತವೆ. ಒಂದು ಮೂಲದ ಅನ್ವಯ, ನೆಹರುರವರಿಗೆ ಆಗ ಸುಮಾರು ನಲ್ವತ್ತು ವರ್ಷಗಳಾಗಿರುತ್ತವೆ. ಅವರು ಯುವಜನರನ್ನು ಆಕರ್ಷಿಸಬಲ್ಲರು. ಅಧಿಕಾರದ ಜವಾಬ್ದಾರಿ ಅವರಲ್ಲಿದ್ದ ಯುವಜೋಶ್‌ಅನ್ನು ಮೆದುಗೊಳಿಸುತ್ತದೆ, ತಮ್ಮ (ಗಾಂಧೀಜಿಯವರ) ಅಭಿಪ್ರಾಯಗಳನ್ನು ಮನ್ನಿಸುತ್ತಾರೆ. ಜಿನ್ನಾರ ಕಾಂಗ್ರೆಸ್ ಜೊತೆಗಿನ ಸಂಬಂಧದ ಕಡಿತದ ನಂತರ ಅನೇಕ ಮುಸಲ್ಮಾನರು ಆ ಪಕ್ಷವನ್ನು ತೊರೆದಿರುತ್ತಾರೆ. ಅವರಲ್ಲಿ ಕೆಲವರನ್ನಾದರೂ ನೆಹರು ಪುನಃ ಕಾಂಗ್ರೆಸ್‌ಗೆ ಸೇರ್ಪಡೆಯಾಗಲು ಪ್ರಭಾವಿಸಬಲ್ಲರು. ಕಮ್ಯುನಿಸ್ಟ್ ವಿಚಾರಧಾರೆಯಿಂದ ಪ್ರಭಾವಿತರಾಗಿದ್ದ ಅನೇಕ ರ್‍ಯಾಡಿಕಲ್ ಯುವಕರು ನೆಹರು ಅಧ್ಯಕ್ಷರಾದರೇ ಕಾಂಗ್ರೆಸ್‌ನಲ್ಲೇ ಉಳಿಯಬಹುದು ಹಾಗೂ ಅವರು (ನೆಹರು) ಎಡಪಂಥದತ್ತ ಹೆಚ್ಚಾಗಿ ವಾಲದಂತೆ ಇದು ತಡೆಯಬಹುದು ಎಂಬುದು ಗಾಂಧೀಜಿಯವರ ಅಭಿಪ್ರಾಯಗಳಾಗಿರುತ್ತವೆ! ಗಾಂಧೀಜಿಯವರ ನೆಹರು ಪರವಾಗಿರುವ ನಿಲುವನ್ನು ಸಿ. ರಾಜಗೋಪಾಲಾಚಾರಿ ಮತ್ತು ಸ್ವತಃ ಪಟೇಲರೇ ಅನುಮೋದಿಸುತ್ತಾರೆ!

ಪುನಃ ೧೯೩೬ ಮತ್ತು ವಿಶೇಷವಾಗಿ ೧೯೪೬ರಲ್ಲಿ ಗಾಂಧೀಜಿ ನೆಹರು ಪರವಾಗಿ ನಿಲ್ಲುತ್ತಾರೆ. ಆಗಲೂ ೧೯೨೯ರಲ್ಲಿದ್ದ ಕಾರಣಗಳೇ ಕೆಲಸ ಮಾಡಿರುತ್ತವೆ! ಮಧ್ಯಂತರ ಸರ್ಕಾರ ಸೆಪ್ಟೆಂಬರ್ ೧೯೪೬ರಲ್ಲಿ ಅಧಿಕಾರಕ್ಕೆ ಬರುತ್ತದೆ. ಇದಕ್ಕೆ ಮುನ್ನ ಗಾಂಧೀಜಿ ಕಾಂಗ್ರೆಸ್ ಪಕ್ಷದ ಅಧ್ಯಕ್ಷ ಸ್ಥಾನಕ್ಕೆ ನೆಹರು ಹೆಸರನ್ನು ಸೂಚಿಸುತ್ತಾರೆ. ೧೯೪೦ರ ರಾಮ್‌ಗಡ್ ಅಧಿವೇಶನದಲ್ಲಿ ಮೌಲಾನಾ ಆಝಾದ್ ಕಾಂಗ್ರೆಸ್ ಪಕ್ಷದ ಅಧ್ಯಕ್ಷರಾಗಿ ಚುನಾಯಿತರಾಗುತ್ತಾರೆ. ಅವರಿಗೆ ಈ ಸ್ಥಾನದಲ್ಲಿ ಮುಂದು ವರೆಯಬೇಕೆಂಬ ಆಸೆಯಿರುತ್ತದೆ. ಆದರೆ ಗಾಂಧೀಜಿ ಆಝಾದ್‌ರು ಅಧ್ಯಕ್ಷ ಸ್ಥಾನಕ್ಕೆ ಪುನಃ ಸ್ಪರ್ಧಿಸಬಾರದೆಂದು ಅವರ ಮನವೊಲಿಸುತ್ತಾರೆ. ಆಝಾದ್ ತಮ್ಮ ಸ್ಥಾನದಿಂದ ಕೆಳಗಿಳಿಯುತ್ತಾರೆ. ಕಾಂಗ್ರೆಸ್ ಕಾರ್ಯಕಾರಿ ಸಮಿತಿ ನೆಹರೂರವರ ಹೆಸರನ್ನು ಸೂಚಿಸುತ್ತದೆ. ಆಝಾದ್‌ರ ಉತ್ತರಾಧಿಕಾರಿ ಮಧ್ಯಂತರ ಸರ್ಕಾರದ ಉಪಾಧ್ಯಕ್ಷರಾಗುತ್ತಾರೆ, ನಂತರ ಅವರೇ ಮುಂದೆ ನಮ್ಮ ದೇಶದ ಪ್ರಧಾನಿಯಾಗುತ್ತಾರೆ ಎಂಬುದು ತಿಳಿದ ವಿಷಯವೇ ಆಗಿರುತ್ತದೆ. ಪಟೇಲ್‌ರೂ ಈ ವ್ಯವಸ್ಥೆಗೆ ಸಮ್ಮತಿಸುತ್ತಾರೆ. ಏಕೆಂದರೆ ಗಾಂಧೀಜಿ–ಪಟೇಲ್ ನಡುವೆ ಅನ್ಯೋನ್ಯ ಸಂಬಂಧವಿರುತ್ತದೆ. ಗಾಂಧೀಜಿಯವರ ಮೊಮ್ಮಗ ಹಾಗೂ ಜನಪರ ವಿದ್ವಾಂಸ ರಾಜ್‌ಮೋಹನ್ ಗಾಂಧಿ ಬರೆದಿರುವ 'ದಿ ಗುಡ್ ಬೋಟ್‌ಮನ್– ಎ ಪೋರ್‌ಟ್ರೈಟ್ ಆಫ್ ಗಾಂಧಿ' ಪುಸ್ತಕದಲ್ಲಿ ಅವರು ಗಾಂಧೀಜಿಯವರ ಉತ್ತರಾಧಿಕಾರಿ ನೆಹರು ಎಂಬುದು ೧೯೪೬ರ ಮುನ್ನವೇ ನಿಶ್ಚಿತ ವಿಷಯವಾಗಿತ್ತು ಎಂದು ದಾಖಲಿಸಿದ್ದಾರೆ. ಮುಂದುವರೆಸುತ್ತ, ಗಾಂಧೀಜಿಯವರ ದಾರುಣ ಹತ್ಯೆಯ ತರುವಾಯ ೧೯೪೮ರ



ನವೆಂಬರ್‌ನಲ್ಲಿ "ಮಹಾತ್ಮ ಗಾಂಧಿ ಪಂಡಿತ್ ನೆಹರೂರನ್ನು ತಮ್ಮ ಉತ್ತರಾಧಿಕಾರಿಯಾಗಿ ಹೆಸರಿಸಿದರು. ಅವರ (ಗಾಂಧಿ) ಸಾವಿನ ನಂತರ, ನಮ್ಮ ನಾಯಕರ ತೀರ್ಮಾನ ಸರಿಯಾಗಿತ್ತು ಎಂಬುದು ವೇದ್ಯವಾಗಿರುತ್ತದೆ" ಪಟೇಲ್ ನೇರವಾಗಿ ಅರಹುತ್ತಾರೆ ಎಂಬುದಾಗಿ ಅವರು ತಿಳಿಸುತ್ತಾರೆ ಕೂಡ. ಇನ್ನೊಂದು ಅಂಶವನ್ನು ಗಮನಿಸಬೇಕಾದ್ದು ಅವಶ್ಯ. ಅದೇನೆಂದರೆ – ನಮ್ಮ ದೇಶ ಸ್ವಾತಂತ್ರ್ಯದ ಹೊಸ್ತಿಲಿನಲ್ಲಿದ್ದ ಸಮಯದಲ್ಲಿ ಪಟೇಲರಿಗೆ ವಯಸ್ಸಾಗಿತ್ತು. ಅವರು ಅನಾರೋಗ್ಯದಿಂದ ಬಾಧಿತ ರಾಗಿದ್ದರು. ಇದು ಕೂಡ ನೆಹರು ಸ್ವತಂತ್ರ ಭಾರತದ ಪ್ರಥಮ ಪ್ರಧಾನಿ ಆಗಬೇಕೆಂಬ ಗಾಂಧೀಜಿಯ ಆಶಯದ ಹಿಂದಿದ್ದ ಕಾರಣವಾಗಿರುವ ಸಾಧ್ಯತೆಯೇ ಜಾಸ್ತಿ.

ರಾಜ್‌ಮೋಹನ್ ಗಾಂಧಿ ತಮ್ಮ ಒಂದು ಭಾಷಣದಲ್ಲಿ ಅಂದಿನ ಕಾಂಗ್ರೆಸ್ ಪಕ್ಷದಲ್ಲಿದ್ದ ತಮ್ಮ ತಾತ ಮಹಾತ್ಮ ಗಾಂಧೀಜಿಯವರ ಏಕಮೇವಾದ್ವಿತೀಯ ಸ್ಥಾನವನ್ನು ಪ್ರಸ್ತಾಪಿಸುತ್ತ, ಯಾವುದೇ ಸಂದರ್ಭದಲ್ಲೂ ಆ ಪಕ್ಷದ ಇತರ ನಾಯಕರು ಗಾಂಧೀಜಿಯವರ ಅಂತಿಮ ತೀರ್ಮಾನಕ್ಕೆ ಕಾಯುತ್ತಿದ್ದದ್ದು ಹಾಗೂ ಅದಕ್ಕೆ ಬದ್ಧರಾಗುತ್ತಿದ್ದದ್ದು ಅಪ್ರಜಾಸತ್ತಾತ್ಮಕ ನಡೆ ಎಂದು ಪರಿಗಣಿಸ ಬಹುದು ಎಂದು ನಿರ್ಮಮಕಾರವಾಗಿ ತಿಳಿಸುತ್ತಾರೆ. ಆದರೆ ಅದು ಆ ಕಾಲದ ಕಾಂಗ್ರೆಸ್ ಪಕ್ಷದೊಳಗಿನ ವಾಸ್ತವ ಸಂಗತಿಯಾಗಿತ್ತು ಎಂಬುದನ್ನೂ ಕೇಳುಗರ ಗಮನಕ್ಕೆ ತರುತ್ತಾರೆ (ಯೂಟ್ಯೂಬ್‌ನಲ್ಲಿ ಈ ಭಾಷಣದ ಒಂದು ವೀಡಿಯೊ ಇದೆ).

೧೯೩೫ರಲ್ಲಿ ನೆಹರು ಜೈಲಿನಲ್ಲಿ ಇರುತ್ತಾರೆ. ಆ ಸಂದರ್ಭದಲ್ಲಿ ಪಟೇಲ್ ಅಲಹಾಬಾದಿನಲ್ಲಿ ಸಾರ್ವಜನಿಕ ಸಭೆಯಲ್ಲಿ ಮಾತನಾಡುತ್ತ, "ಪಂಡಿತ್ ಜವಹರ್‌ಲಾಲ್‌ಜಿ ಮತ್ತು ಅವರ ಅನಾರೋಗ್ಯ ಪೀಡಿತ ಮಡದಿ ರೈತರಿಗೆ ಸೇವೆ ಮಾಡಿರುವಷ್ಟು ಇನ್ನ್ಯಾರೂ ಮಾಡಿರುವುದಿಲ್ಲ. ನಿಮ್ಮ ಹಿತಾಸಕ್ತಿಗಳಿಗಾಗಿ ಅವರು ತಮ್ಮ ಆರಾಮವಾಗಿರಬಹುದಾಗಿದ್ದ ಬದುಕನ್ನು ಬಲಿದಾನ ಮಾಡಿದ್ದಾರೆ. ನಿಮ್ಮ ಬಡತನ ಅವರನ್ನು ಕ್ರುದ್ಧನನ್ನಾಗಿಸುತ್ತದೆ. ಅವರ ಸಹಾಯವಿಲ್ಲದೆ ನಾವು ಹೇಗೆ ಮುನ್ನಡೆಯಬಲ್ಲೆವು?..." ಎಂದು ಹೇಳುತ್ತಾರೆ! ೧೯೪೮ರ ನವೆಂಬರ್‌ನಲ್ಲಿ ಒಮ್ಮೆ ನೆಹರು ಮತ್ತು ಪಟೇಲರು ಮುಂಬೈಗೆ ಭೇಟಿ ನೀಡುತ್ತಾರೆ. ಆಗ ದೊಡ್ಡ ಸಂಖ್ಯೆಯಲ್ಲಿ ಜನರು ಜಮಾಯಿಸಿರುತ್ತಾರೆ. ಜೊತೆಗಿದ್ದ ಅಮೆರಿಕದ ಪತ್ರಕರ್ತ ವಿನ್ಸೆಂಟ್ ಶೀನ್ ಜೊತೆ ಮಾತನಾಡುತ್ತ " ಜನ ಬಂದಿರುವುದು ಜವಹರ್‌ಗಾಗಿ... ನನಗಾಗಿ ಅಲ್ಲ.." ಎಂದು ತಿಳಿಸುತ್ತಾರೆ ! ಪಟೇಲರದ್ದು ಎಂತಹ ವಿಶಾಲ ಮನಸ್ಸು ! ರಾಜ್‌ಮೋಹನ್ ಗಾಂಧಿ ತಾವು ಬರೆದಿರುವ ಪಟೇಲ್ ಕುರಿತ ಜೀವನಚರಿತ್ರೆಯ ಪುಸ್ತಕದಲ್ಲಿ ಆ ಕಾಲದಲ್ಲಿದ್ದ ಗಾಂಧೀಜಿ – ನೆಹರು – ಪಟೇಲ್ ಸಂಬಂಧಗಳ ಬಗೆಗೆ ಸೂಕ್ಷ್ಮವಾಗಿ ದಾಖಲಿಸಿದ್ದಾರೆ.

ಗಾಂಧೀಜಿ – ನೆಹರು – ಪಟೇಲ್ – ಅಂಬೇಡ್ಕರ್ ನಡುವೆ ತೀವ್ರವಾದ ಭಿನ್ನಾಭಿಪ್ರಾಯಗಳಿದ್ದವು. ಆದರೆ ಪರಸ್ಪರ ಗೌರವಾದರಗಳೂ ಇದ್ದವು. ಅವರೆಲ್ಲರೂ ಕಾಲದ ಕೂಸು ಗಳಾಗಿದ್ದರು (ಅವರ ಸಾರ್ವಜನಿಕ ಜೀವನದ ಆಯಾಮಕ್ಕೆ ಸಂಬಂಧಿಸಿದಂತೆ ಈ ಪದಗಳನ್ನು ಬಳಸಲಾಗಿದೆ. ಏಕೆಂದರೆ ಎಲ್ಲರೂ ಒಂದರ್ಥದಲ್ಲಿ ಕಾಲದ ಕೂಸುಗಳೇ !) ಆಯಾಯ ಕಾಲದ ಸಂದರ್ಭಗಳಿಗೆ ತಕ್ಕಂತೆ ನಿರ್ಧಾರ ಗಳನ್ನು ತೆಗೆದುಕೊಂಡರು. ಸ್ವಾತಂತ್ರ್ಯದ ಹೊಸ್ತಿಲಿನಲ್ಲಿದ್ದ ಭಾರತ ದಿವಾಳಿ ಸ್ಥಿತಿಯಲ್ಲಿತ್ತು. ವಿಭಜನೆಯ ಕರಾಳ ಸನ್ನಿವೇಶ ದೇಶದ ಮುಂದಿತ್ತು. ಅಂತಹ ಆತಂಕದ ಮತ್ತು ದುರಿತದ ಪರಿಸ್ಥಿತಿಯಲ್ಲಿ ತೆಗೆದುಕೊಂಡ ಕೆಲವು ನಿರ್ಧಾರಗಳು ಎಲ್ಲರಿಗೂ ಒಪ್ಪಿಗೆಯಾಗಿರಲಿಲ್ಲ ಎಂಬುದು ವಾಸ್ತವ ವಿಷಯವಾಗಿತ್ತು. ಆದರೆ ಒಂದು ಅಂಶವನ್ನು ಮನಗಾಣಬೇಕು. ನಮ್ಮ ದೇಶದ ಬಲಪಂಥೀಯ ಶಕ್ತಿಗಳಿಗೆ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಭಾಗವಹಿಸಿದ ಚರಿತ್ರೆಯಿಲ್ಲ! ಆದುದರಿಂದ ಅವುಗಳ ಅನುಯಾಯಿಗಳು ಕುತ್ಸಿತ ಮನಸ್ಸಿನಿಂದ ಗಾಂಧೀಜಿ–ನೆಹರು–ಪಟೇಲರ ನಡುವೆ ಇದ್ದ ಭಿನ್ನಾಭಿಪ್ರಾಯಗಳನ್ನು ವಿಜೃಂಭಿಸುತ್ತಾರೆ! ಅವುಗಳನ್ನು ಕೆಟ್ಟ ರೀತಿಯಲ್ಲಿ ಮಾಧ್ಯಮದಲ್ಲಿ ಹಾಗೂ ಸಾಮಾಜಿಕ ಜಾಲತಾಣಗಳಲ್ಲಿ ಚಿತ್ರಿಸುತ್ತಾರೆ! ನೆಹರುರವರ ಅಮೂಲ್ಯ ಕೊಡುಗೆಗಳನ್ನು ಅಳಿಸಿ ಹಾಕಲು ಏನೆಲ್ಲಾ ಮಾಡಬಹುದೋ ಅವುಗಳನ್ನೆಲ್ಲ ಮಾಡಲು ಅವರು ತುದಿಗಾಲಿನಲ್ಲಿ ನಿಂತಿರುತ್ತಾರೆ! ಈ ನಿಟ್ಟಿನಲ್ಲಿ ಅವರು ಪಟೇಲ್‌ರನ್ನು ಉನ್ನತೀಕರಿಸುವ ಕಾರ್ಯಗಳಿಗೆ ಮುಂದಾಗುತ್ತಾರೆ. ಇದರ ಹಿನ್ನೆಲೆಯಲ್ಲೇ ಪ್ರಪಂಚದ ಅತ್ಯಂತ ಎತ್ತರದ ಸರ್ದಾರ್ ಪಟೇಲ್‌ರ ಪ್ರತಿಮೆ ನಿರ್ಮಾಣವಾಗಿದೆ ಎಂದರೆ ಅತಿಶಯೋಕ್ತಿಯಾಗಲಾರದು.

ನಮ್ಮ ದೇಶದ ಇತಿಹಾಸದಲ್ಲಿ ಗಾಂಧೀಜಿ, ನೆಹರು ಮತ್ತು ಪಟೇಲರಿಗೆ ತಮ್ಮದೇ ಆದ ವಿಶಿಷ್ಟ ಸ್ಥಾನವಿದೆ. ಇದನ್ನು ಪ್ರಜ್ಞಾವಂತರು ಅರಿಯುತ್ತಾರೆ !

*(ಆಧಾರ : ಅನೇಕ ಮೂಲಗಳು)*

**ಮ. ಶ್ರೀ. ಮುರಳಿ ಕೃಷ್ಣ**
ನಂ ೩೮, ೩ನೇ ಕ್ರಾಸ್, ರಾಜಾ ಗಾರ್ಡನಿಯಾ ಲೇಔಟ್
ತುರಹಳ್ಳಿ, ಸುಬ್ರಹ್ಮಣ್ಯಪುರ ಅಂಚೆ, ಬೆಂಗಳೂರು – ೫೬೦ ೦೬೧
Email : msmurali1961@gmail.com

## ಮನೆ – ಮನ

ಮನೆಗೆ
ಬಂದವರೆಲ್ಲ
ಮನದೊಳಗೆ ಬರಲಿಲ್ಲ
ಮನದೊಳಗೆ
ಬಂದವರು
ಮನೆಯೊಳಗೇ ಬರಲಿಲ್ಲ !

**ಶಿವಮೊಗ್ಗ ಗೀತಾ ಶಾಸ್ತ್ರಿ**
ಬೆಂಗಳೂರು – ೫೬೦೦೨೮

# ಹೆಗಲು ತೂಗುವ ನಕ್ಷತ್ರ

ಬತ್ತಿದ ಬೆವರು ತೂಗುವ ನಕ್ಷತ್ರದ ನಗು ನನ್ನೊಳಗೆ ಶಾಶ್ವತ
ಒಲೆಯೂದಿ ಕಣ್ಣುಗಳ ತಿಕ್ಕುವ ಅವಳ ಕೆನ್ನೆಗೆ ಬಹಳ ಹಿತ

ಹಾಸಿಗೆಯ ಸುರುಳಿಗೆ ಕಚಕುಳಿ ಇಕ್ಕುವ ನಕ್ಷತ್ರದ ನೋಟ
ಬಳಲಿ ಬಾಯಾರಿದ ತುಟಿಗಳ ತೆಕ್ಕೆಗೆ ಯಾವಾಗಲೂ ಶಾಂತ

ಮುರಿದ ಟೊಂಗೆಯಲಿ ನೇತಾಡುವ ಅವಳ ಚಿಗುರುಗಳು
ನಕ್ಷತ್ರದ ಜೋಳಿಗೆಯಾಗಿ ಹೆಗಲು ಕಾಯುವ ಶಾಂತಿದೂತ

ಕನಸುಗಳ ಕನವರಿಕೆಯಲಿ ಒಂಟಿಯಾದ ಅವಳ ಏಕಾಂತಕೆ
ಮುಂಗೈ ಚಾಚಿದ ನಕ್ಷತ್ರಗಳು ಉಯ್ಯಾಲೆ ತೂಗುವ ಚಿತ್ತ

ಕಾಡೊಳಗೆ ಹೊಕ್ಕು ಜೀವ ತೇಯುವ ಅಲೆಮಾರಿ ನಕ್ಷತ್ರಗಳು
ಹೆಗಲು ನಾಡಿಗೆ ಮುಕ್ಕಿದ ಸುಕ್ಕುಗಳ ಮುಕ್ಕುವ ಅವಧೂತ

ಅಲೆಗಳಿಗೂ ಮಿಗಿಲಾಗಿ ಕೊರಳು ಕಾಯೊ ನಕ್ಷತ್ರಗಳು
ಚದುರಿದ ದೀಪಗಳ ನಿಟ್ಟುಸಿರಿಗೆ ಅನುಗಾಲದ ಅಮೃತ

ಗವ್ವೆನ್ನುವ ರಾತ್ರಿಯ ತಿಕ್ಕಲುಗಳ ಮೆಟ್ಟಿ ನಿಂತ ನಕ್ಷತ್ರಗಳು
ಒಂಟಿ ತೆಕ್ಕೆಗೆ ಜೋಗುಳವಾಗಿ ಹರಡಿಕೊಂಡವು ಸುತ್ತಮುತ್ತ

ನಕ್ಷತ್ರದ ನಕಾಶೆಯಲ್ಲಿ ಅವಿತ ಕಿರಸೂರ ಕನಸುಗಳು
ಎಲ್ಲೆಗೂ ಮಿಗಿಲಾಗಿ ಸಹಚರತೆ ಕಟ್ಟುವ ದಿಟ್ಟ ನೋಟದತ್ತ

**ಕಿರಸೂರ ಗಿರಿಯಪ್ಪ** (ಗಿರಿಯಪ್ಪ ಅಸಂಗಿ) ಕಿರಸೂರ (ಪೋ), ಬಾಗಲಕೋಟ (ತಾ। ಜಿ) – ೫೮೭ ೧೧೧




**ಕಳೆದ ನಾಲ್ಕು ದಶಕಗಳಿಂದ ನಿರಂತರವಾಗಿ ಬರವಣಿಗೆಯಲ್ಲಿ ತೊಡಗಿಕೊಂಡ ಕನ್ನಡದ ಮಹತ್ವಪೂರ್ಣ ಕವಿಗಳಾದ ಮೂಡ್ನಾಕೂಡು ಚಿನ್ನಸ್ವಾಮಿಯವರಿಗೆ ಸೆಪ್ಟೆಂಬರ್ ೨೨ರಂದು ಸಾಹಿತ್ಯಲೋಕದ ಸಹೃದಯ ವೃಂದ ಅವರ ೬೫ನೇ ವಯಸ್ಸಿನ ಸಂಭ್ರಮಾಚರಣೆಯನ್ನು 'ಬಹುತ್ವ ಕಥನ' ಕೃತಿಯ ಸಮರ್ಪಣೆಯ ಮೂಲಕ ಆಚರಿಸಿತು. ಈ ಸಂದರ್ಭಕ್ಕಾಗಿ ಡಾ|| ಸುಭಾಷ್ ರಾಜಮಾನೆಯವರು ಅವರೊಂದಿಗೆ ನಡೆಸಿದ ಸಂದರ್ಶನ ಇಲ್ಲಿದೆ.**

**೧. ನೀವು ಹುಟ್ಟಿ ಬೆಳೆದ ಊರು ಮತ್ತು ನಿಮ್ಮ ಕುಟುಂಬ ಬಗ್ಗೆ ಹೇಳಿರಿ.**

ನಾನು ಹುಟ್ಟಿದ್ದು ಚಾಮರಾಜನಗರ ತಾಲೂಕಿನಲ್ಲಿರುವ ನನ್ನ ತಾಯಿಯ ಊರಾದ ದೊಡ್ಡರಾಯಪೇಟೆಯಲ್ಲಿ. ನನ್ನ ತಂದೆಯ ಊರು ಮೂಡ್ನಾಕೂಡು. ಅದೇ ನನ್ನ ಹೆಸರಿನೊಂದಿಗೆ ಸೇರಿಕೊಂಡಿದೆ. ನನ್ನ ಅಪ್ಪ ಬಸವರಾಜಯ್ಯ ಮತ್ತು ಅಮ್ಮ ಗೌರಮ್ಮ ಇಬ್ಬರೂ ನಾಲ್ಕನೆಯ ತರಗತಿಯವರೆಗೆ ಓದಿದ್ದರು.

ನನ್ನ ಅಮ್ಮ ಮಾತಿಗೊಂದು ಗಾದೆ ಹೇಳುತ್ತಿದ್ದಳು. ನನಗೆ ಕಾವ್ಯದ ಸೆಲೆ ಬಂದದ್ದು ನನ್ನ ತಾಯಿಯಿಂದಲೇ ಎಂದುಕೊಂಡಿದ್ದೇನೆ. ಆಕೆ ರೂಪಕದ ಭಾಷೆಯಲ್ಲಿಯೇ ಮಾತಾಡುತ್ತಿದ್ದಳು. ನನಗೆ ಅದನ್ನು ಕೇಳಿದಾಗಲೆಲ್ಲ ಥ್ರಿಲ್ ಆಗೋದು. ಪುಸ್ತಕ ಏನೂ ಓದ್ತಾ ಇರಲಿಲ್ಲ. ಮನೆಯಲ್ಲಿ ನಮ್ಮನ್ನೆಲ್ಲ ನೋಡಿಕೊಳ್ಳೋದೆ ಕೆಲಸವಾಗಿತ್ತು. ಇಷ್ಟೊಂದು ಗಾದೆಗಳು ಹೇಗೆ ಗೊತ್ತು ಅಂತ ನಾನು ಕೇಳಿದರೆ ಅದು ಹಾಗೇ ಎಂದು ಮಾತು ಹಾರಿಸುತ್ತಿದ್ದಳು. ನಮ್ಮ ಮಹಿಳೆಯರಿಗೆ ಇರುವ ಈ wisdom ಏನಿದೆ ಅದನ್ನೇ ಲೋಕಾನುಭವ ಅನ್ನೋದು. ಹೀಗೆ ನನ್ನ ಬಾಲ್ಯದ ಹೆಚ್ಚಿನ ದಿನಗಳು ಹಳ್ಳಿಗಳಲ್ಲಿಯೇ ಕಳೆದದ್ದರಿಂದ ಆ ನೆಲದ ಮಣ್ಣು, ನೀರು, ಗೊಬ್ಬರಗಳೇ ನನ್ನ ಕಾವ್ಯವನ್ನು ಪೋಷಿಸಿದವು.

ನಮ್ಮ ಕೇರಿಯಲ್ಲಿ ಪ್ರತ್ಯೇಕವಾದ ಏಕೋಪಾಧ್ಯಾಯ ಶಾಲೆ ಇತ್ತು. ನನ್ನ ಅಪ್ಪ ನನ್ನನ್ನು ಕರೆದುಕೊಂಡು ಹೋಗಿ ಶಾಲೆಗೆ ಸೇರಿಸಿದ. ಅಲ್ಲಿ ಅರಸಯ್ಯ ಅಂತ ಮೇಷ್ಟ್ರು ಇದ್ದರು. ಎಲ್ಲ ಒಂದೇ ಜಾತಿಯ ಮಕ್ಕಳು ಇದ್ದಿದ್ದರಿಂದ ಅಲ್ಲಿ ತಾರತಮ್ಯತೆ ಏನೂ ಇರಲಿಲ್ಲ. ಒಂದು ಮತ್ತು ಎರಡನೇ ಕ್ಲಾಸ್ ಅಲ್ಲೇ ಓದಿದೆ. ನನ್ನನ್ನು ಮೂರನೇ ತರಗತಿಗೆ ನನ್ನ ಅಪ್ಪ ಮೈಸೂರಿಗೆ ಕರೆದುಕೊಂಡು ಹೋದರು. ನಾಲ್ಕನೇ ಕ್ಲಾಸ್‌ಗೆ ಮತ್ತೆ ದೊಡ್ಡರಾಯಪೇಟೆಗೆ ಹೋಗಬೇಕಾಯಿತು. ನನ್ನ ಅಪ್ಪ ಪೊಲೀಸ್ ಕಾನ್‌ಸ್ಟೇಬಲ್ ಆಗಿದ್ದರು. ಆ ಕಾಲದಲ್ಲಿ ಪೊಲೀಸಿನವರಿಗೆ ಸಂಬಳ ತುಂಬ ಕಡಿಮೆ. ನಮ್ಮನ್ನೆಲ್ಲ ಸಿಟಿಗೆ ಕರೆದುಕೊಂಡು ಹೋದರೆ ಜೀವನ ನಿರ್ವಹಣೆಯೇ ತುಂಬ ಕಷ್ಟ ಆಗುತ್ತಿತ್ತು. ಅದಕ್ಕೆ ಹಳ್ಳಿಗೇ ಹೋಗಿ ಇದ್ದುಕೊಂಡು ಓದಿ ಎಂದು ಹೇಳುತ್ತಿದ್ದರು. ಹಾಗಾಗಿ ನನಗೆ ಹಳ್ಳಿಯ ಅನುಭವ ಹೆಚ್ಚಾಯಿತು.

**೨. ನಿಮ್ಮ ಕವಿತೆಗಳನ್ನು ಓದುವಾಗಲೆಲ್ಲ ಸಹಜವಾಗಿಯೇ ದಲಿತರು ಅನುಭವಿಸುವ ಜಾತಿ ಅವಮಾನದ ಕೆಂಡದಲ್ಲಿ ತಾವು ಹಾದು ಬಂದವರೆಂಬುದು ಸ್ಪಷ್ಟವಾಗುತ್ತದೆ. ನಿಮ್ಮ ಬಾಲ್ಯದ ದಿನಗಳನ್ನು ಸ್ವಲ್ಪ ವಿವರಿಸಿ.**

ನಾನು ಸಹಜವಾಗಿಯೇ ಅಸ್ಪೃಶ್ಯತೆ, ಅಪಮಾನ, ಅಸಮಾನತೆಯಿಂದ ಕೂಡಿದ್ದ ನನ್ನ ಊರಿನ ಹೊಲಗೇರಿಯಲ್ಲಿಯೇ ನನ್ನ ಬಾಲ್ಯದ ದಿನಗಳನ್ನು ಕಳೆದೆ. ಅಲ್ಲಿ ಓದುವಾಗ ನನಗೆ ಕೇರಿಯ ಅನುಭವಗಳೇ ಹೆಚ್ಚು ಘಾಸಿಗೊಳಿಸುತ್ತಿದ್ದವು. ಬೆಳಗ್ಗೆ ಎದ್ದು ನೋಡಿದಾಗಲೆಲ್ಲ ನಮ್ಮ ಕೇರಿಯಿಂದ ಹೆಂಗಸರು ಒಕ್ಕಲಗೇರಿಗೆ ತಂಗಳು ಇಸಿದುಕೊಂಡು ಬರಲು ಹೋಗುತ್ತಿದ್ದರು. ಸೆರಗಿನ ಮಡಿಲಲ್ಲಿ ಮುದ್ದೆ, ಅನ್ನ, ಪಾತ್ರೆಯಲ್ಲಿ ಸಾರು ಹಿಡಿದುಕೊಂಡು ಬರುತ್ತಿದ್ದರು. ನನ್ನ ಅಮ್ಮನಿಗೆ ಅದು ಯಾಕೆಂದು ಕೇಳಿದಾಗ 'ಅವರೆಲ್ಲ ಜೀತಗಾರರು, ಅವರ ಒಡೆಯರ ಮನೆಯಿಂದ ಹಿಟ್ಟೀಸ್ಗಂಬತ್ತರೆ' ಅಂತ ಹೇಳುತ್ತಿದ್ದಳು. ದಿನವೆಲ್ಲ ದುಡಿದರೂ ತಮ್ಮ ಮನೆಯ ಒಲೆ ಉರಿಸಲಾಗದಿರುವ ನಮ್ಮ ಜನರ ಪಾಡು ನೋಡಿ ನನಗೆ ಸಂಕಟವಾಗುತ್ತಿತ್ತು.

ಸಂದರ್ಶನಕಾರರು
**ಡಾ|| ಸುಭಾಷ್ ರಾಜಮಾನೆ**

# "ದಲಿತರ ನೋವನ್ನು ಹಾಡುವ ಹಕ್ಕಿ"






**ಚಿನ್ನಸ್ವಾಮಿಯವರೊಂದಿಗೆ ಸಿ. ಪಿ. ನಾಗರಾಜ, ಡಾ|| ಸುಭಾಷ್ ರಾಜಮಾನೆ**

ನಮ್ಮನ್ನು ಅವರು ಮನುಷ್ಯರು ಅಂತ ನೋಡುತ್ತಿರಲಿಲ್ಲ. ಗೌರವ ಕೊಡುವ ಪ್ರಶ್ನೆಯೇ ಇರಲಿಲ್ಲ. ನಮ್ಮಲ್ಲಿ ವಯಸ್ಸಾದ ಹಿರಿಯರಿದ್ದರು. ಒಕ್ಕಲಗೇರಿಯಿಂದ ಸಣ್ಣ ಹುಡುಗರು ಕೆಲಸಕ್ಕೆ ಕರೆಯಲು ಬಂದಾಗ ಅವರನ್ನು ಏಕವಚನದಲ್ಲಿಯೇ ಕೂಗುತ್ತಿದ್ದರು. ಇವರೆಲ್ಲ ಆ ಹುಡುಗನ ಫ್ಯೂಡಲ್ ಧ್ವನಿಗೆ ಹೆದರಿಕೊಂಡು ಓಡುತ್ತಿದ್ದರು. ನನಗೆ ಇದು ಯಾವ ಸಂಸ್ಕೃತಿ ಅಂತ ಆಶ್ಚರ್ಯ ಆಗೋದು. ನನಗೂ ಒಳಗೆ ಅವಮಾನ ಅನಿಸೋದು. ನಮ್ಮ ಅಮ್ಮನ ಜೊತೆ ಕೆರೆ, ಬಾವಿ, ಹೊಲದ ಕಡೆ ಸುತ್ತಾಡುವಾಗಲೆಲ್ಲ ಈ ತಾರತಮ್ಯಗಳನ್ನು ಗಮನಿಸುತ್ತಿದ್ದೆ.

**೩. ಇಂತಹ ಅಸಮಾನತೆಯ ವಾತಾವರಣದಲ್ಲಿ ನಿಮ್ಮ ಬಾಲ್ಯದ ಕನಸುಗಳು ಏನಾಗಿದ್ದವು?**

ಬಾಲ್ಯದಲ್ಲಿ ನನಗೆ ಕನಸುಗಳೇ ಇರಲಿಲ್ಲ ಎಂದೇ ಹೇಳಬಹುದು. ನನಗೆ ಆಗ ಬರೀ ಗೊಂದಲಗಳೇ ಇದ್ದವು. ಹಸಿವು ಬಡತನಗಳು ಸಹಜ ಎನ್ನುವಂತೆ ಗೋಚರಿಸುತ್ತಿದ್ದವು. ಆದರೆ ಜಾತಿಮೂಲವಾದ ಅಸಮಾನತೆ ಮತ್ತು ಅವಮಾನವನ್ನು ನನ್ನಿಂದ ಸಹಿಸಿಕೊಳ್ಳಲು ಆಗುತ್ತಿರಲಿಲ್ಲ. ಆಗ ನನ್ನೊಳಗಿನ ಸಿಟ್ಟನ್ನೂ ವ್ಯಕ್ತಪಡಿಸಲಾಗದ ಅಸಹಾಯಕತೆ ಕಾಡುತ್ತಿತ್ತು. ನಾನು ಶಾಲೆಗೆ ಸೇರಿದ ಮೇಲೆ ಎಲ್ಲೂ ಫೇಲ್ ಆಗಲಿಲ್ಲ. ಯಾಕೆಂದರೆ ನನ್ನ ಅಪ್ಪ ನನ್ನನ್ನು ಬಹಳ ಕಟ್ಟುನಿಟ್ಟಾಗಿ ಕೂಡಿಸಿಕೊಂಡು ಓದಿಸುತ್ತಿದ್ದರು. ಎಷ್ಟೋ ಸಲ ಏಟುಗಳನ್ನು ತಿನ್ನಬೇಕಾಗುತ್ತಿತ್ತು. ಆಗ ನನ್ನ ಸರೀಕರು ಹತ್ತನೇ ಕ್ಲಾಸ್ ಓದಿದವರೆಲ್ಲ ಸಾಮಾನ್ಯವಾಗಿ ಟೀಚರ್ ಮತ್ತು ಪೊಲೀಸ್ ಕೆಲಸಕ್ಕೆ ಸೇರಿಕೊಳ್ಳುತ್ತಿದ್ದರು. ಗ್ರ್ಯಾಜ್ಯುಯೇಶನ್ ಓದುವವರ ಸಂಖ್ಯೆ ತೀರ ಕಡಿಮೆಯೇ. ನಾನು ಬಿ.ಕಾಂ. ಆದ ಮೇಲೆ ಇನ್ನೂ ಮುಂದೆ ಓದಬೇಕು ಅಂತ ನನ್ನ ಅಪ್ಪನಿಗೆ ಹೇಳಿದಾಗ ಒಪ್ಪಲಿಲ್ಲ. ಕೆಲಸಕ್ಕೆ ಸೇರಲು ಹೇಳಿದರು.

**೪. ಸಾಹಿತ್ಯದ ಬರವಣಿಗೆಗೆ ಪೂರಕವಾದ ಪರಿಸರವೇ ಇಲ್ಲದಿರುವ ಕುಟುಂಬದಿಂದ ಬಂದ ನಿಮಗೆ ಸಾಹಿತ್ಯದ ಬಗ್ಗೆ ಆಸಕ್ತಿ ಮತ್ತು ಪ್ರೇರಣೆ ಮೂಡಿದ್ದು ಹೇಗೆ?**

ನನ್ನಂಥವರಿಗೆ ಸ್ಥೂಲವಾಗಿ ಹಸಿವು (ಬಡತನ) ಮತ್ತು ಅವಮಾನ (ಅಸ್ಪೃಶ್ಯತೆಯದ್ದು) ಪ್ರೇರಣೆ ಎಂದು ನಾನು ನಂಬಿದ್ದೇನೆ. ನಾನು ಹತ್ತನೇ ಕ್ಲಾಸ್ ಓದುವವರೆಗೂ ನಮ್ಮ ಹಳ್ಳಿಯಲ್ಲಿ ಕರೆಂಟ್ ಇರಲಿಲ್ಲ. ವಿದ್ಯುತ್ ಬಂದ ನಂತರದಲ್ಲಿ ಎಷ್ಟೋ ಸಲ ಆ ವಿದ್ಯುತ್ ಕಂಬದ ಕೆಳಗೆ ಕುಳಿತುಕೊಂಡು ಓದುತ್ತಿದ್ದೆ. ಪಾರ್ಕ್‌ಗಳಿಗೆ ಹೋಗಿ ಓದುತ್ತಿದ್ದೆ. ನಾನು ಪಿಯುಸಿಗೆ ಹೋದ ಮೇಲೆ ಗ್ರಂಥಾಲಯದಲ್ಲಿ ಯಾವ ಯಾವ ಪತ್ರಿಕೆಗಳು ಬರುತ್ತಿದ್ದವೋ ಅವನ್ನೆಲ್ಲ ಓದುವ ಹವ್ಯಾಸ ಬೆಳೆಯಿತು. ನಾನು ಪೊಲೀಸ್ ಕ್ವಾಟರ್ಸ್‌ನಲ್ಲಿದ್ದಾಗ ದೂರದ ಸ್ನೇಹಿತರ ಮನೆಯಲ್ಲಿ ಪ್ರಜಾವಾಣಿ ಪತ್ರಿಕೆ ಬರುತ್ತೆ ಅನ್ನೋ ಕಾರಣಕ್ಕೆ ಅಲ್ಲಿಗೆ ಹೋಗಿ ಅದನ್ನು ಓದುತ್ತಿದ್ದೆ.

ನಾನು ಬಿ.ಕಾಂ. ಓದುವಾಗ ಜಾತಿಯ ಕಾರಣದಿಂದಲೋ ಏನೋ ಯಾರೊಂದಿಗೂ ಹೆಚ್ಚು ಬೆರೆಯಲಾಗುತ್ತಿರಲಿಲ್ಲ. ಆಗ ನನಗೆ ಸಿ. ನಾಗಣ್ಣನವರ ಒಡನಾಟ ಸಿಕ್ಕಿತು. ಅವರಿಗೆ ಸಾಹಿತ್ಯದಲ್ಲಿ ಆಸಕ್ತಿಯಿತ್ತು. ನಾವು ಇಬ್ಬರೂ ಕುವೆಂಪು, ಬೇಂದ್ರೆ, ಅಡಿಗ ಮೊದಲಾದವರ ಬಗ್ಗೆ ಮಾತಾಡುತ್ತಿದ್ದೆವು. ಆಗಲೇ ಕಾದಂಬರಿ, ಕತೆ, ಕವಿತೆಗಳನ್ನು ಓದಲಾರಂಭಿಸಿದೆ. ನನ್ನ ತಂಗಿ ಜಯಾ ತುಂಬ ಓದುತ್ತಿದ್ದಳು. ಅವಳು ಇದು ಚೆನ್ನಾಗಿದೆ ಓದು ಅಂತ ನನಗೆ ಪುಸ್ತಕಗಳನ್ನು ಕೊಡುತ್ತಿದ್ದಳು.

**೫. ಕನ್ನಡ ಸಾಹಿತ್ಯ ಲೋಕದಲ್ಲಿ ಮಾಸ್ತಿ, ಎಚ್.ಎಲ್. ನಾಗೇಗೌಡ, ಸಿದ್ಧಯ್ಯ ಪುರಾಣಿಕ ಅವರಂತೆ ನಿಮ್ಮ ವೃತ್ತಿ ಬದುಕು ಸಾಹಿತ್ಯೇತರ ಕ್ಷೇತ್ರದಲ್ಲಾಯಿತು. ನೀವು ಸಾರಿಗೆ ನಿಗಮದಲ್ಲಿ ಜವಾಬ್ದಾರಿಯುತ ಅಧಿಕಾರಿಯಾಗಿದ್ದುದು ನಿಮ್ಮ ಸೃಜನಶೀಲತೆಗೆ ಎಂದೂ ತೊಡಕಾಗಲಿಲ್ಲವೆ?**

ಅಧಿಕಾರಿಯಾಗಿ ಸಾಹಿತಿಯಾಗುವುದರ ಕಷ್ಟವೇನು ಎನ್ನುವುದನ್ನ ಸ್ವತಃ ನಾನು ಅನುಭವಿಸಿದ್ದೇನೆ. ಸಾಹಿತಿಗಳು ಅಧಿಕಾರಿಗಳಾದರೆ ಅವರು ದಕ್ಷರಾಗಿರುವುದಿಲ್ಲ ಎನ್ನುವ ಧೋರಣೆಯೂ ಇದೆ. ಅದು ನನ್ನ ತಲೆಯೊಳಗೆ ಇತ್ತು. ಅದಕ್ಕೆ ನಾನು ವೃತ್ತಿ ಬದುಕಿನಲ್ಲಿಯೂ ದಕ್ಷತೆ ಹೊಂದಿರಬೇಕು ಎಂದೇ ತೀರ್ಮಾನಿಸಿದ್ದೆ. ನಾನು ವೃತ್ತಿಯ ಕಾರಣಕ್ಕೆ ಹೆಚ್ಚು ಟ್ರಾವೆಲ್ ಮಾಡಬೇಕಿತ್ತು. ಜೊತೆಗೆ ಯಾವಾಗಲೂ ಓದಲು ಪುಸ್ತಕಗಳನ್ನು ಇಟ್ಟುಕೊಂಡಿರುತ್ತಿದ್ದೆ. ನಾನು ಅಲ್ಲಿಯೂ ಹೊಸ ಪ್ರಯೋಗಗಳನ್ನು ಮಾಡಿ ಗೆದ್ದಿದ್ದೇನೆ. ನಾನು ಮೊದಲಿನಿಂದಲೂ ಒಂದು ಶಿಸ್ತುಬದ್ಧ ಜೀವನಶೈಲಿಯನ್ನು ರೂಢಿಸಿಕೊಂಡು ಬಂದವನು. ಇದಕ್ಕೆ ನನ್ನ ತಂದೆಯೂ ಕಾರಣವಾಗಿರಬಹುದು. ಇದರಿಂದಾಗಿ ನನಗೆ ವೃತ್ತಿಯನ್ನು ಮತ್ತು ಪ್ರವೃತ್ತಿಯನ್ನು ಸರಿದೂಗಿಸಿಕೊಂಡು ಹೋಗಲು ಸಾಧ್ಯವಾಯಿತು. ಇದರ ಸಲುವಾಗಿ ಖಾಸಗಿ ಬದುಕಿನಲ್ಲಿ ಕೆಲವು ತ್ಯಾಗಗಳನ್ನು ಮಾಡಬೇಕಾಯಿತು. ಅದರಿಂದ ಅನೇಕ ನಷ್ಟಗಳಾಗಿವೆ. ಸಾಹಿತ್ಯ ಮತ್ತು ಕಲೆಯನ್ನು ಆತುಕೊಂಡವರ ಬದುಕಿನಲ್ಲಿ ಅದು ಅನಿವಾರ್ಯವೇ ಆಗಿರುತ್ತದೆ.

**೬. ನಿಮ್ಮ ಮೊದಲ ಕವನ ಸಂಕಲನ 'ಕೊಂಡಿಗಳು ಮತ್ತು ಮುಳ್ಳುಬೇಲಿಗಳು' ಪ್ರಕಟವಾದಾಗ ಕಾವ್ಯವೇ ನಿಮ್ಮ ಅತ್ಯುತ್ತಮ ಅಭಿವ್ಯಕ್ತಿ ಎಂದೆನಿಸಿತ್ತೆ?**

ನಾನು ಓದಿದ್ದು ಬಿ.ಕಾಂ. ತಕ್ಷಣ ನೌಕರಿ ಹಿಡಿದೆ. ಅಕಡೆಮಿಕ್ ವಲಯದಿಂದ ದೂರ ಇದ್ದು ಓದುವ ಹವ್ಯಾಸವನ್ನು ಬೆಳೆಸಿಕೊಂಡಿದ್ದ ನನಗೆ ಸಾಹಿತ್ಯದಲ್ಲಿ ಆಸಕ್ತಿ ಬೆಳೆಯುತ್ತಾ ಹೋಯಿತು. ಮತ್ತು ಆಗಲೇ ಹೇಳಿದ ಹಾಗೆ ಹಸಿವು ಮತ್ತು ಅವಮಾನಗಳ ನೋವು ಕಾಡುತ್ತಲೇ ಇತ್ತು. ಅದನ್ನು ಅಭಿವ್ಯಕ್ತಿಸಬೇಕಾದ ತುರ್ತು ಇತ್ತು. ನಾನು ಆಗ ನವ್ಯ ಕವಿಗಳನ್ನು ಓದುತ್ತಿದ್ದೆ. ಹೀಗೂ ಬರೆಯಬಹುದು ಅನ್ನಿಸಿತು, ಬರೆದೆ. ಮೇಲಾಗಿ ಚಾಮರಾಜನಗರದ ಪರಿಸರದಲ್ಲಿ ನಾವು ಮಂಟೆಸ್ವಾಮಿ, ಮಲೆ ಮಾದೇಶ್ವರನ ಕಾವ್ಯವನ್ನು ಹಾಡಿಕೊಂಡೇ ಬೆಳೆದವರು. ನನ್ನೊಳಗೆ ಸಹಜವಾಗಿಯೇ ಕಾವ್ಯದ ಸೆಳೆತ ಇತ್ತು ಎಂದು ಕಾಣುತ್ತದೆ.

**೭. ನೀವು ಮೈಸೂರಿನಲ್ಲಿದ್ದಾಗ ೧೯೭೦ರ ದಶಕದಲ್ಲಿ ದಲಿತ ಚಳವಳಿಯು ಪ್ರಖರವಾಗಿತ್ತು. ಆ ಚಳವಳಿಯಲ್ಲಿ ನಿಮ್ಮ ಭಾಗವಹಿಸುವಿಕೆ ಹೇಗಿತ್ತು ಮತ್ತು ನಿಮ್ಮನ್ನು ಪ್ರಭಾವಿಸಿದ ಕವಿಗಳು ಯಾರು?**

ನಾನು ಆಗ ಬನುಮಯ್ಯ ಕಾಲೇಜಿನಲ್ಲಿ ಪದವಿ ವಿದ್ಯಾರ್ಥಿಯಾಗಿದ್ದೆ. ನಾನು ಚಳವಳಿಯನ್ನು ಹೊರಗಿನಿಂದಲೇ ಗಮನಿಸಿದವನು. ಟೌನ್ ಹಾಲ್‌ನಲ್ಲಿ ನಡೆಯುತ್ತಿದ್ದ ಎಲ್ಲ ಕಾರ್ಯಕ್ರಮಗಳಿಗೂ ಹೋಗುತ್ತಿದ್ದೆ. ಆಗ ಬಸವಲಿಂಗಪ್ಪನವರು ಬೂಸ ಸಾಹಿತ್ಯದ ಬಗ್ಗೆ ನೀಡಿದ್ದ ಹೇಳಿಕೆ ದೊಡ್ಡ ವಿವಾದವನ್ನು ಸೃಷ್ಟಿಸಿತ್ತು. ಆ

ಸಂದರ್ಭದಲ್ಲಿ ಕುವೆಂಪು, ಬಸವಲಿಂಗಪ್ಪ, ಅನಂತಮೂರ್ತಿಯವರ ಭಾಷಣಗಳನ್ನು ಕೇಳಿದ್ದೇನೆ. ಅವರ ಪ್ರಭಾವ ನನ್ನ ಮೇಲೆ ಆಗಿದೆ. ನನಗೆ ಆಗ ಸಿದ್ಧಲಿಂಗಯ್ಯನವರ ಪರಿಚಯ ಇರಲಿಲ್ಲ. ಅವರನ್ನು ನಾನು ಓದಿರಲಿಲ್ಲ. ಆಗ ನನಗೆ ಚರಬಂಡರಾಜು ಅವರ 'ಕಟಕಟೆಯ ನಡುವೆ' ಎಂಬ ಕವನ ಸಂಕಲನ ಸಿಕ್ಕಿತು. ಅದು ನನ್ನನ್ನು ತುಂಬ influence ಮಾಡಿತು. ನಾನು ಹೀಗೆ ಈ ಅನ್ಯಾಯ, ಅಸಮಾನತೆ, ಅವಮಾನಗಳ ಕುರಿತು ಬರೆಯಬೇಕು ಎಂದೆನ್ನಿಸಿತು. ಆಮೇಲೆ ಶ್ರೀಶ್ರೀ ಅವರ ಪದ್ಯಗಳನ್ನು ಓದಿದೆ. ತೆಲುಗಿನ ದಿಗಂಬರ ಕಾವ್ಯ ನನ್ನ ಮೇಲೆ ಸ್ವಲ್ಪಮಟ್ಟಿಗೆ influence ಮಾಡಿರಬಹುದು. ಆದರೆ ನಾನು ಅಲ್ಲಿನ ಸಿಟ್ಟು, ಆವೇಶಗಳಿಗೆ ಒಳಗಾಗಲಿಲ್ಲ. ಸ್ವಭಾವತಃ ನಾನು ಅಂತರ್ಮುಖಿ. ಮೆಲು ದನಿಯಲ್ಲಿ ಪ್ರತಿರೋಧದ ಕಾವ್ಯ ಬರೆಯಬೇಕು ಎನ್ನುವ ತುಡಿತ ಇತ್ತು. ನನ್ನ ವ್ಯಕ್ತಿತ್ವವೇ ಹಾಗಿರಬಹುದು. ಅದೇ ಧಾಟಿಯಲ್ಲೇ ನನ್ನ ಕಾವ್ಯವಿದೆ.

**೮. ನೀವು ಮತ್ತೆ ಮತ್ತೆ ಓದಲು ಇಷ್ಟಪಡುವ ಕವಿಗಳು ಯಾರು? ನಿಮಗೆ ಪ್ರಿಯವಾದ ಲೇಖಕ ಯಾರು?**

ನಾನು ಇಷ್ಟಪಟ್ಟು ಓದುವ ಕವಿಗಳದ್ದು ದೊಡ್ಡ ಪಟ್ಟಿಯೇ ಇದೆ. ನಾನು ಆಗಾಗ ಕಣ್ಣಾಡಿಸಲು ನನಗೆ ಇಷ್ಟವಾದ ಕವಿಗಳ ಸಂಕಲನಗಳನ್ನು ಕಪಾಟಿನಲ್ಲಿ ಕೈಗೆಟಕುವ ಹಾಗೆ ಇಟ್ಟುಕೊಂಡಿದ್ದೇನೆ. ನನಗೆ ಸು. ರಂ. ಎಕ್ಕುಂಡಿ ಮತ್ತು ವಿ. ಜಿ. ಭಟ್ಟ ಅವರ ಕವಿತೆಗಳು ಪ್ರಿಯವಾದವು. ನಾನು ಬೇಂದ್ರೆ, ಕುವೆಂಪು, ಅಡಿಗ, ಕಂಬಾರ, ಲಂಕೇಶ್ ಇವರ ಕಾವ್ಯವನ್ನು ಓದುತ್ತೇನೆ. ಇವರ ಜೊತೆಯಲ್ಲಿ ಪ್ಯಾಬ್ಲೋ ನೆರೂಡ, ಬ್ರೆಕ್ಟ್, ಬೋದಿಲೇರ್, ಗುನ್ನಾರ್ ಎಕ್ಲೋಫ್, ರೂಮಿ, ಕಲೀಲ್ ಗಿಬ್ರಾನ್, ಫೈಜ್ ಅಹಮದ್ ಫೈಜ್ ಇನ್ನೂ ಮುಂತಾದವರಿದ್ದಾರೆ.

ವಿ. ಎಸ್. ನೈಪಾಲ್ ನನ್ನ ಇಷ್ಟದ ಲೇಖಕ. ಅವನೊಬ್ಬ ಮಾನವೀಯ ಲೇಖಕ. ಅವನ 'ವೂಂಡೆಡ್ ಸಿವಿಲೈಸೇಷನ್' ಓದಿದ ಮೇಲೆ ಅದು ನನ್ನ ಭಾರತ ಎನ್ನಿಸಿತು. ಲೋಕವನ್ನು ಗ್ರಹಿಸುವ ಕ್ರಮವನ್ನು ಅವನಿಂದ ಕಲಿಯಬೇಕು ಎಂದೆನ್ನಿಸಿದೆ.

**೯. ಮೂಡ್ನಾಕೂಡು ಕಾವ್ಯ ಎಂದ ಕ್ಷಣವೇ 'ನಾನೊಂದು ಮರವಾಗಿದ್ದರೆ' ಮತ್ತು 'ಎಲುಬಿನ ಹಂದರದೊಳಗೆ' 'ಚಪ್ಪಲಿ ಮತ್ತು ನಾನು' 'ರಸ್ತೆ ಬದಿಯ ಮರ' ಕವಿತೆಗಳೇ ನೆನಪಾಗುತ್ತವೆ. ನಿಮ್ಮ ಕವಿತೆಗಳಲ್ಲಿ 'ಮರ' ಮತ್ತು 'ಚಪ್ಪಲಿ'ಗಳು ಮತ್ತೆ ಮತ್ತೆ ರೂಪಕಗಳಾಗಿ ಬರುವುದೇಕೆ?**

ಮರಕ್ಕೆ ಪೊರೆಯುವ ಶಕ್ತಿ ಇದೆ. ನನಗೆ ಅನ್ನಿಸೋದು 'ಮರ' ಎಂದರೆ ಅದು ಸಸ್ಯಲೋಕದ ತಾಯಿ. ಅದು ಕೊಡುತ್ತೆ ಹೊರತು ಏನನ್ನೂ ಪಡೆಯಲ್ಲ. ಹಾಗೆಯೇ 'ಚಪ್ಪಲಿ' ಕೂಡ ಸೇವೆಯ ಆತ್ಯಂತಿಕ ಪ್ರತಿಮೆಯಾಗಿದೆ. ಇವುಗಳಿಗೆ ಕೊಡುವುದಷ್ಟೆ ಗೊತ್ತು, ಪಡೆಯುವುದು ಗೊತ್ತಿಲ್ಲ. ಚಪ್ಪಲಿ ಥರ ಈ ಜಗತ್ತಿನಲ್ಲಿ ಸೇವೆ ಮಾಡುವ ಮತ್ತೊಂದು ವಸ್ತುವನ್ನು ಕಲ್ಪಿಸಿಕೊಳ್ಳಲು ಸಾಧ್ಯವೇ ಇಲ್ಲ. ಅದು ತನ್ನನ್ನು ತಾನು ಸವೆಸಿಕೊಂಡು ಈ ಲೋಕದಿಂದ ಮರೆಯಾಗುತ್ತೆ. ಚಪ್ಪಲಿ ಎನ್ನುವುದು ಸಾಮಾಜಿಕವಾಗಿ ಎಲ್ಲ ಬಗೆಯ ಶೋಷಣೆಗಳಿಗೂ ಸಂಕೇತವಾದದ್ದು. ನಾನು ಇವುಗಳನ್ನು ಭಾಳ ಪ್ರಜ್ಞಾಪೂರ್ವಕವಾಗಿ ಆಲೋಚನೆ ಮಾಡಿ ಸೇರಿಸಿದ್ದಲ್ಲ. ಅದು ಸಹಜವಾಗಿಯೇ ಬಂದಿರೋದು.

ಎಷ್ಟೇ ದೊಡ್ಡ ಕವಿಗಳಾದರೂ ಕಾಲದ ನೆನಪಿನಲ್ಲಿ ಉಳಿಯುವುದು ಅವರ ನಾಲ್ಕಾರು ಕವಿತೆಗಳಷ್ಟೆ. ಕುವೆಂಪು, ಬೇಂದ್ರೆ, ಪುತಿನ, ಅಡಿಗ ಅಂತಹವರನ್ನೂ ನಾವು ನೆನೆಸಿಕೊಳ್ಳೋದು ಅವರ ಕೆಲವು ಕವಿತೆಗಳೊಂದಿಗೆ ಅಲ್ಲವೇ? ನೀವು ಹೆಸರಿಸಿದ ಕವಿತೆಗಳು ಅಸ್ಪೃಶ್ಯತೆಯ ಭೀಕರ ಅವಮಾನಗಳನ್ನು ತಣ್ಣನೆಯ ಧಾಟಿಯಲ್ಲಿ ಸಮರ್ಥವಾಗಿ ಹಿಡಿದಿಟ್ಟಿವೆ. ಹಾಗಾಗಿ ಅವುಗಳೇ ಹೆಚ್ಚು ಪ್ರಚಾರ ಪಡೆದುಕೊಂಡು ಓದುಗರ ಬಾಯಿಯಲ್ಲಿವೆ.

**೧೦. ನಿಮ್ಮ ಕಾವ್ಯ ಬಂದ ಆರಂಭದಲ್ಲಿ ಕನ್ನಡ ವಿಮರ್ಶಾಲೋಕ ಅದನ್ನು ಸ್ವೀಕರಿಸಿದ ಬಗೆ ಹೇಗಿತ್ತು?**

ನಮ್ಮದು ಜಾತಿನಿಷ್ಠ ಸಮಾಜ. ಹಾಗಾಗಿ ಪೂರ್ವಗ್ರಹಗಳಿಂದ ಮುಕ್ತವಾಗಿರಲು ಸಾಧ್ಯವಿಲ್ಲ. ಆದರೂ ನನ್ನ ಕಾವ್ಯವನ್ನ ಕನ್ನಡ ವಿಮರ್ಶೆಯು ಸಕಾರಾತ್ಮಕವಾಗಿಯೇ ನೋಡಿತು. ಆಗ ಯಾವ ಹೊಸ ಕವಿಗಳಿಗೂ ಸಿಗದಿರುವ ಸ್ವಾಗತ ನನಗೆ ಸಿಕ್ಕಿತು. ನನ್ನ ಮೊದಲ ಸಂಕಲನ 'ಕೊಂಡಿಗಳು ಮತ್ತು ಮುಳ್ಳುಬೇಲಿಗಳು' ಅದುವರೆಗೂ ಇದ್ದ ದಲಿತ ಕಾವ್ಯಕ್ಕಿಂತ ಇದು ಬೇರೆಯಾಗಿದೆ ಎಂಬ ಅಭಿಪ್ರಾಯ ಬಂತು. ಅದು ಬೆಂಗಳೂರು ವಿಶ್ವವಿದ್ಯಾಲಯದಲ್ಲಿ ಬಿಡುಗಡೆಯಾದಾಗ ಅಲ್ಲಿ ಪ್ರಾಧ್ಯಾಪಕರಾಗಿದ್ದ ಡಿ. ಆರ್. ನಾಗರಾಜ್, ಸಿದ್ಧಲಿಂಗಯ್ಯ, ಕೆ. ಮರುಳಸಿದ್ದಪ್ಪ, ಸುಮತೀಂದ್ರ ನಾಡಿಗ, ಕೀ. ರಂ. ನಾಗರಾಜ ಮೊದಲಾದವರು ಬಂದಿದ್ದರು. ಅಂದು ನಾನು 'ನನ್ನ ಹತ್ತಿರದ ಬಂಧುಗಳು' ಎಂಬ ಕವಿತೆಯನ್ನು ಓದುತ್ತಿದ್ದಾಗ, ಕೀ. ರಂ. ನಾಗರಾಜ ಅವರು ನನ್ನ ಬಳಿಗೆ ಬಂದು ಪುಸ್ತಕವನ್ನು ಕಿತ್ತುಕೊಂಡು ಪದ್ಯ ಓದೋದು ಹೀಗಲ್ಲ ಎಂದು ತಾವೇ ಅದನ್ನು ಓದಿ ತೋರಿಸಿದರು. ಅವತ್ತು ನಾನು ಪದ್ಯ ಓದುವುದನ್ನ ಕಲಿತೆ.

ನಾನು ಸಾಹಿತ್ಯಲೋಕದ ಹೊರಗೆ ಹೆಚ್ಚು ಪ್ರಚಾರದಲ್ಲಿ ಇಲ್ಲದೇ ಇರಬಹುದು. ಆದರೆ ನನ್ನ ಪದ್ಯಗಳು ಅಕಡೆಮಿಕ್ ವಲಯದಲ್ಲಿ ಹೆಚ್ಚು ಚರ್ಚೆಗೆ ಒಳಗಾಗಿವೆ. ನನಗಿಂತಲೂ ನನ್ನ ಕವಿತೆಗಳೇ ಹೆಚ್ಚು ಪ್ರಚಾರ ಪಡೆದುಕೊಂಡಿವೆ. ನನ್ನ ಅರಿವಿಗೆ ಬಾರದಂತೆಯೇ ಕವಿತೆಗಳು ಶೈಕ್ಷಣಿಕ ಪಠ್ಯಗಳಲ್ಲಿ ಸೇರಿಕೊಂಡವು. ಹಾಗಾಗಿ ಕಾವ್ಯಾಸ್ವಾದನೆಯ ದೃಷ್ಟಿಯಿಂದ ಸಾಂಸ್ಕೃತಿಕ ಲೋಕ ನನ್ನನ್ನು ಗೌರವಿಸಿದೆ. ಜಾತಿ ಕಾರಣದಿಂದಾಗಿ ಲೌಕಿಕವಾಗಿ ವಂಚನೆಗಳೂ ಆಗಿರಬಹುದು. ಅದನ್ನು ಅಲ್ಲಗಳೆಯುವಂತಿಲ್ಲ.

ನನ್ನ ಕವಿತೆಗಳು ಮುಂದೆ ಮುಂದೆ, ನಾನು ಅವುಗಳ ಹಿಂದೆ. ಜನರು ಮೊದಲು ನೆನಪಿಸಿಕೊಳ್ಳುವುದು ನನ್ನ ಕವಿತೆಗಳನ್ನೇ ಹೊರತು ನನ್ನನ್ನಲ್ಲ. ಪ್ರಚಾರ ಮತ್ತು ಜನಪ್ರಿಯತೆ ಬಯಸೋದು ಕೂಡ ನನ್ನ ಜಾಯಮಾನವಲ್ಲ.

**೧೧. ನಿಮ್ಮ ಕವಿತೆಗಳಲ್ಲಿ ಆತ್ಮಾವಲೋಕನದ ಪ್ರಮಾಣ ತುಂಬ ಕಡಿಮೆ ಎಂಬ ಆಕ್ಷೇಪದ ಬಗ್ಗೆ ಏನು ಹೇಳುತ್ತೀರಿ?**

ಆತ್ಮಾವಲೋಕನ ಇಲ್ಲದಿದ್ದರೆ ಕಾವ್ಯದಲ್ಲಿ ಗಟ್ಟಿತನ ಬರುವುದಿಲ್ಲ. ನನ್ನ ಕವಿತೆಗಳ ಬಗ್ಗೆ ಯಾವ ವಿಮರ್ಶಕರೂ ಹೀಗೆ ಹೇಳಿರುವ ನೆನಪಿಲ್ಲ. ನನ್ನೊಳಗೆ ಹುಟ್ಟಿದ ಸಂವೇದನೆ ಮತ್ತೊಬ್ಬರಲ್ಲಿ ವಿಸ್ತಾರ ಪಡೆಯುವುದು ಆತ್ಮಾವಲೋಕನದ ಭಾಗವೇ ಆಗಿರುತ್ತದೆ. ಪರಕಾಯ ಪ್ರವೇಶವೇ ಕವಿಯ ಶಕ್ತಿ.

**೧೨. ಈಗ ಹೊಸ ತಲೆಮಾರಿನ ಕವಿಗಳು/ಕವಿಯತ್ರಿಯರು ಹೆಚ್ಚು ವೇದಿಕೆಗಳಲ್ಲಿ ಕಾಣಿಸಿಕೊಳ್ಳುತ್ತಿದ್ದಾರೆ. ಕವಿತೆಗಳಿಗಿಂತ ಅವುಗಳನ್ನು ಬರೆದ ಕವಿಗಳೇ ವಿಜೃಂಭಿಸುತ್ತಿಲ್ಲವೇ?**

ಈಗಿನ ಕವಿಗಳು ದಿಢೀರ್ ಪ್ರಸಿದ್ಧಿಯನ್ನು ಬಯಸುತ್ತಿದ್ದಾರೆ. ಒಂದು ಕವನ ಸಂಕಲನ ಬಂದ ತಕ್ಷಣವೇ ಪ್ರಶಸ್ತಿಗೆ ಕಳುಹಿಸುತ್ತಾರೆ. ಇವತ್ತು ನೂರಾರು ದತ್ತಿ ಪ್ರಶಸ್ತಿಗಳು ಹುಟ್ಟಿಕೊಂಡಿವೆ. ಈಗಿನ ಲೇಖಕ ಅಥವಾ ಕವಿಗಳಾಗುವವರಿಗೆ ಸಾಮಾಜಿಕ ಮಾಧ್ಯಮಗಳ ಮುಖಾಂತರ ಪ್ರಚಾರ ಸುಲಭವಾಗಿ ಸಿಗುತ್ತದೆ. 'ಕೀರ್ತಿಶನಿ ತೊಲಗಾಚೆ' ಎಂದು ಕುವೆಂಪು ಯಾವತ್ತೋ ಹೇಳಿದ್ದಾರೆ. ಪ್ರತಿಯೊಬ್ಬ ಲೇಖಕರೂ ನೆನಪಿಡಬೇಕಾದ ಮಾತಿದು. ಬಹಳಷ್ಟು ಲೇಖಕರು ಹಾಳಾಗೋದು ತಾವು ಕೀರ್ತಿವಂತರಾಗಿದ್ದೇವೆ ಎಂಬ ಭ್ರಮೆಯಿಂದ. ಅನವಶ್ಯಕವಾಗಿ ಬರುವ ಕೀರ್ತಿ ಮತ್ತು ಹಣವನ್ನು ನಿಭಾಯಿಸೋದು ತುಂಬ ಕಷ್ಟಕರ. ಅದನ್ನು ನಿಭಾಯಿಸೋದನ್ನ ಕಲಿತರೆ ನೆಲದ ಮೇಲೆ ನಿಲ್ಲಲು ಸಾಧ್ಯವಾಗುತ್ತದೆ. ನಾವು ಬರೆದದ್ದು ಗಟ್ಟಿಯಾಗಿದ್ದರೆ ಉಳಿಯುತ್ತದೆ.

**೧೩. ನಿಮ್ಮ ಕವಿತೆಗಳು ಬೇರೆ ಬೇರೆ ಭಾಷೆಗಳಿಗೆ ಅನುವಾದಗೊಂಡಿವೆ. ಅಲ್ಲಿ ಪ್ರತಿಕ್ರಿಯೆ ಹೇಗಿದೆ?**

ನಾನು ಬೇರೆ ದೇಶಗಳಲ್ಲಿ 'ನಾನೊಂದು ಮರವಾಗಿದ್ದರೆ' ಕವಿತೆಯನ್ನು ಓದಿದಾಗಲೂ ಅದು ಅಸ್ಪೃಶ್ಯತೆ ಬಗೆಗಿನ ಪದ್ಯ ಎಂದು ಆ ಜನರಿಗೆ ಅರ್ಥವಾಗಿಬಿಡುತ್ತಿತ್ತು. ನಾನು ಇಸ್ರೇಲ್ ದೇಶದಲ್ಲಿ 'ಚಿಂದಿ ಆಯುವ ಚಿಣ್ಣನಿಗೆ' ಪದ್ಯವನ್ನು ಓದಿದಾಗ ಒಬ್ಬ ಮಹಿಳೆ ಬಂದು 'ಇದು ಹೀಬ್ರೂ ಭಾಷೆಯಲ್ಲಿ ಬರೆದಂತೆ ಇದೆ' ಎಂದಳು. ನಾನು ಬೇರೆ ಭಾಷಿಕರ ಮುಂದೆ ನನ್ನ ಕವಿತೆಯನ್ನು ಮೊದಲು ಕನ್ನಡದಲ್ಲಿ ಓದಿದ ನಂತರವೇ ಇಂಗ್ಲಿಷಿನಲ್ಲಿ ಓದುತ್ತೇನೆ. ಲ್ಯಾಟಿನ್ ಅಮೇರಿಕದಲ್ಲಿ 'ಚಪ್ಪಲಿ ಮತ್ತು ನಾನು' ಕವಿತೆಯನ್ನು ಓದಿದಾಗ ಅನೇಕರು ಬಂದು Can I hug you? ಎಂದಿದ್ದಾರೆ. ವಿಶೇಷವಾಗಿ ಭಾರತೀಯ ಸಂದರ್ಭಕ್ಕೆ ಹೊರತಾದ ಪ್ರದೇಶಗಳಲ್ಲಿ ಅಭೂತಪೂರ್ವವಾದ ಪ್ರತಿಕ್ರಿಯೆ ಸಿಕ್ಕಿದೆ. ರೊವೀನಾ ಹಿಲ್ ಅವರು ಸ್ಪ್ಯಾನಿಷ್ ಭಾಷೆಯಲ್ಲಿ ನನ್ನ ಕಾವ್ಯವನ್ನು ಪ್ರಕಟಿಸಿದ ಮೇಲೆ ನಾನು ವೆನೆಜುಯೇಲಾ ದೇಶದ ಆಂಡಿಸ್ ವಿಶ್ವವಿದ್ಯಾಲಯಕ್ಕೆ ಭೇಟಿ ನೀಡಿದೆ. ನನ್ನ ಕವಿತೆಗಳನ್ನು ಆಲಿಸಿದ ಮೇಲೆ ಅಲ್ಲಿನ ಅಧ್ಯಾಪಕರು ಮತ್ತು ವಿದ್ಯಾರ್ಥಿಗಳು ನನ್ನನ್ನು ಮುಟ್ಟಿಸಿಕೊಳ್ಳಲು ಹಾತೊರೆಯುತ್ತಿದ್ದರು. ಹಾಗೆಯೇ ಕೆಲವು ಅಂತಾರಾಷ್ಟ್ರೀಯ ಕಾವ್ಯ ಸಮ್ಮೇಳನಗಳಲ್ಲಿ ಇಂಥ ಅನುಭವವಾಗಿದೆ. ಜಾತಿಪದ್ಧತಿ, ಅಸ್ಪೃಶ್ಯತೆಯ ಪರಿಚಯವಿಲ್ಲದಿದ್ದರೂ ಅವರ ಪ್ರತಿಕ್ರಿಯೆಯಿಂದ ನನಗನಿಸಿದ್ದು ಮನುಷ್ಯ ಮಾನವೀಯ ಮೌಲ್ಯಗಳಿಗೆ ಕರಗುತ್ತಾನೆ, ಮರುಗುತ್ತಾನೆ ಎಂದು.

ಮರಾಠಿ ಮತ್ತು ತೆಲುಗಿನಲ್ಲಿಯೂ ನನ್ನ ಕವಿತೆಗಳು ಒಳ್ಳೆಯ ವಿಮರ್ಶೆಯನ್ನು ಪಡೆದಿವೆ. ಅಲ್ಲಿನ ಮುಖ್ಯ ಪತ್ರಿಕೆಗಳಲ್ಲಿ ಪ್ರಕಟವಾಗಿವೆ. ನನ್ನ ಕವಿತೆಗಳ ತೆಲುಗು ಅನುವಾದಕ್ಕೆ ಸ. ರಘುನಾಥ ಅವರಿಗೆ ಕುವೆಂಪು ಭಾಷಾ ಭಾರತಿಯಿಂದ ಪ್ರಶಸ್ತಿಯೂ ಲಭಿಸಿದೆ. ಇಂಗ್ಲಿಷ್ ಅನುವಾದಿತ ಕೃತಿ 'ಬಿಫೋರ್ ಇಟ್ ರೇಯಿನ್ಸ್ ಅಗಯ್ನ್' ಇಂಗ್ಲೆಂಡಿನ ನಾಟಿಂಗ್‌ಹ್ಯಾಮ್ ಮತ್ತು ಪಶ್ಚಿಮ ಬಂಗಾಳ ವಿಶ್ವವಿದ್ಯಾಲಯದ ವಿದ್ಯಾರ್ಥಿಗಳಿಗೆ ಪಠ್ಯವಾಗಿದೆ. ಹಿಂದಿ, ಉರ್ದು ಅನುವಾದಗಳು ರಾಷ್ಟ್ರವ್ಯಾಪಿ ಹೆಸರು ಮಾಡಿವೆ.

**೧೪. ಬೇರೆ ಬೇರೆ ಜಾತಿ ಸಮುದಾಯಗಳಿಗೆ ಅವರುಗಳದೇ ಆದ ಶಾಲೆ, ಕಾಲೇಜು, ಆಸ್ಪತ್ರೆ, ಬ್ಯಾಂಕು, ಹಾಸ್ಟೇಲ್ ಮತ್ತು ವಸತಿಗೃಹಗಳಿರುತ್ತವೆ. ಆದರೆ ಇವು ದಲಿತ ಸಮುದಾಯಗಳಿಗೆ ಇರುವುದಿಲ್ಲವೇಕೆ?**

ದಲಿತರಿಗೆ ಮೂಲ ಬಂಡವಾಳವೇ ಇಲ್ಲವಲ್ಲ. ಸಂವಿಧಾನದಲ್ಲಿ ೧೭ನೇ ಆರ್ಟಿಕಲ್‌ನಲ್ಲಿ ಅಸ್ಪೃಶ್ಯತೆಯನ್ನು ನಿಷೇಧಿಸಿದ್ದೇವೆ ಎಂದಿದೆ. ಆದರೆ ದಲಿತರಿಗೆ ಒಂದು ತುಂಡು ಭೂಮಿ ಕೂಡ ಇರಲಿಲ್ಲವಲ್ಲ. ಪ್ರಜಾಪ್ರಭುತ್ವ ಮತ್ತು ಜಾತಿಪದ್ಧತಿ ಎರಡೂ ವಿರುದ್ಧ ದಿಕ್ಕಿನಲ್ಲಿವೆ. ಸಮಾನತೆಯ ಹಕ್ಕುಗಳು ಸಂವಿಧಾನದಲ್ಲಿವೆ. ಈಗ ಸ್ವಾತಂತ್ರ್ಯ ಬಂದು ೭೨ ವರ್ಷಗಳಾದರೂ ಹಳ್ಳಿಗಳಲ್ಲಿ ಅಸ್ಪೃಶ್ಯತೆ ಹೋಗಲಿಲ್ಲ. ಅಂಬೇಡ್ಕರ್ ಅವರು ಕೃಷಿ, ಕೈಗಾರಿಕೆ, ವಿಮೆ ಮುಂತಾದುವು ರಾಷ್ಟ್ರೀಕರಣ ಆಗಬೇಕೆಂದು ಹೇಳಿದ್ದರು. ಆದರೆ ದೇಶ ಬಂಡವಾಳಶಾಹಿ ಪ್ರಜಾಪ್ರಭುತ್ವದೆಡೆಗೆ ಸಾಗುತ್ತಿದೆ. ಬಡವ ಶ್ರೀಮಂತರ ಕಂದಕ ಹೆಚ್ಚುತ್ತಿದೆ. ಈ ದೇಶದ ವಸ್ತುಸ್ಥಿತಿ ಹೀಗಿರುವಾಗ ದಲಿತರ ಶಾಲೆ, ಕಾಲೇಜುಗಳು ಹೇಗೆ ಬರ್ತಾವೆ? ಈ ದೇಶದಲ್ಲಿ ಜಾತಿಯೇ ಪ್ರಧಾನವಾಗಿದೆ. ನಮ್ಮಲ್ಲಿ ಅಭಿವೃದ್ಧಿ ಅಂದರೆ ಅದು ಕೂಡ ಜಾತಿನಿಷ್ಠ ಅಭಿವೃದ್ಧಿ ಎಂದೇ ಅರ್ಥ. ಆಡಳಿತದ ಚುಕ್ಕಾಣಿ ಹಿಡಿದವರಿಗೆ ಇದನ್ನೆಲ್ಲ ಗುರುತಿಸುವ ಮನಸ್ಸಿಲ್ಲ. ಹೊರಗೆ ಮಾತ್ರ ಸಮಾನತೆಯ ಬಗ್ಗೆ ಮಾತಾಡ್ತಾರೆ. ಒಳಗೆ ನಡೆಯೋದೆಲ್ಲ ಜಾತಿಗಳ ಅಭಿವೃದ್ಧಿಯೇ. ಎಷ್ಟೇ ಒಳ್ಳೆಯ ಮತ್ತು ಪ್ರಾಮಾಣಿಕ ಮನುಷ್ಯನನ್ನೂ ಈ ಜಾತಿ ಎಂಬುದು ಭ್ರಷ್ಟನನ್ನಾಗಿ ಮಾಡುತ್ತದೆ.

**೧೫. ಇಂದಿನ ಸಮಾಜದಲ್ಲಿ ದಲಿತರಿಗೆ ಪ್ರತಿಯೊಂದು ಹಂತದಲ್ಲೂ ತೊಡಕಾಗಿ ನಿಂತಿರುವ ಈ ಜಾತಿಯ ಅಡ್ಡಗೋಡೆಯನ್ನು ದಲಿತರು ಮೀರುವುದು ಹೇಗೆ?**

ನಮಗೆ ಸಂವಿಧಾನದಿಂದ ದೊರಕಿರುವ ಲಾಭವೆಂದರೆ ಶಿಕ್ಷಣ. ದಲಿತರೆಲ್ಲರೂ ಶಿಕ್ಷಣವನ್ನು ಪಡೆದುಕೊಳ್ಳಬೇಕು. ಅದರಲ್ಲೂ ಮುಖ್ಯವಾಗಿ ಉನ್ನತ ವ್ಯಾಸಂಗ ಮಾಡಬೇಕು. ಜೀವನ ನಿರ್ವಹಣೆಗಾಗಿ ಅಗತ್ಯವಿರುವ ಸಂಪತ್ತನ್ನು ಗಳಿಸಿಕೊಂಡರೆ ಸಾಲದು. ಇನ್ನೊಬ್ಬರಿಗೆ ಸಹಾಯ ಮಾಡುವ ಶಕ್ತಿ ಗಳಿಸಿಕೊಳ್ಳಬೇಕು. ಇದರಿಂದ ಮಾತ್ರವೇ ದಲಿತರ ಅಭಿವೃದ್ಧಿ ಸಾಧ್ಯವಿದೆ. ತೆಲುಗಿನಲ್ಲಿ 'ಮೈ ಫಾದರ್ ಬಾಲಯ್ಯ' ಅಂತ ಒಂದು ಆತ್ಮಕತೆಯಿದೆ. ಅದರಲ್ಲಿ ಬಾಲಯ್ಯನ ತಾತ ಬಹಳ ಒಳ್ಳೆಯ ಚಪ್ಪಲಿಗಳನ್ನು ಮಾಡುವ ಚಮ್ಮಾರನಾಗಿರುತ್ತಾನೆ. ಆಗ ಮಹಾರಾಜನಾಗಿದ್ದ ನಿಜಾಮ ಅವನ ಹಳ್ಳಿಯ ಮೂಲಕ ಹಾದು ಹೋಗುವಾಗ ನಿಜಾಮನಿಗಾಗಿ ಸುಂದರವಾದ ಚಪ್ಪಲಿಗಳನ್ನು ತಯಾರಿಸಿಕೊಂಡು ಕಾಯುತ್ತಿರುತ್ತಾನೆ. ಆ ಚಪ್ಪಲಿಗಳನ್ನು ತುಂಬ ಮೆಚ್ಚಿಕೊಂಡ ನಿಜಾಮ ಆತನಿಗೆ ಐವತ್ತು ಎಕರೆ ಜಮೀನು ಮಂಜೂರು ಮಾಡಿಕೊಡುತ್ತಾನೆ. ಒಂದು ವಾರದ ನಂತರದಲ್ಲಿ ಆ ಊರಿನ ಚೇರ್‌ಮನ್ ಬಂದು 'ಅಷ್ಟೊಂದು ಜಮೀನು ನಿನಗೇಕೆ?' ಎಂದು ಎರಡು ಎಕರೆ ಮಾತ್ರ ಬರೆದು ಕೊಟ್ಟು ಉಳಿದದ್ದನ್ನೆಲ್ಲ ತನ್ನ ಹೆಸರಿಗೆ ಮಾಡಿಕೊಳ್ಳುತ್ತಾನೆ. ಈ ದೇಶದಲ್ಲಿ ಮೇಲ್ವರ್ಗದವರು ಬಹುತೇಕವಾಗಿ ಹೀಗೆಯೇ ಜಮೀನುಗಳನ್ನು ಪಡೆದುಕೊಂಡದ್ದು. ದಲಿತರಿಗೆ ತಮ್ಮ ಕೇರಿಯಿಂದ ಊರ ಒಳಗೆ ಪ್ರವೇಶವೇ ಇರತಾ ಇರಲಿಲ್ಲ. ಮೊನ್ನೆಯಷ್ಟೇ ತಮಿಳುನಾಡಿನ ಹಳ್ಳಿಯಲ್ಲಿ ದಲಿತ ಹುಡುಗನೊಬ್ಬ ಕೂಲಿಂಗ್ ಗ್ಲಾಸ್ ಹಾಕಿಕೊಂಡಿದ್ದಕ್ಕೆ ಹೊಡೆದಿದ್ದಾರೆ. ಜಾತಿ ಉತ್ಪಾದಿಸುವ ಕ್ರೌರ್ಯ ಇದೆಯಲ್ಲ ಅದು ಅನಂತವಾದದ್ದು ಮತ್ತು ಘೋರವಾದದ್ದು. ಅದನ್ನು ಪ್ರೀತಿಸುವ ಜನರು ಇನ್ನೂ ಕ್ರೂರಿಗಳಾಗಿರುತ್ತಾರೆ ಎಂದು ಹೇಳಬಹುದು.

ಹೀಗೆ ವಿದ್ಯೆಯನ್ನು ಗಳಿಸಿ, ಸ್ವಾವಲಂಬಿಗಳಾದಮೇಲೆ ಧರ್ಮಾಂತರ ವಾಗುವುದರೊಂದಿಗೆ ಜಾತಿಯ ಅಡ್ಡಗೋಡೆಯನ್ನು ಮೀರಲು ಸಾಧ್ಯ.

**೧೬. ಲಂಕೇಶ್ ಅವರ 'ಮುಟ್ಟಿಸಿಕೊಂಡವನು' ಕತೆಯಲ್ಲಿ ಅಸ್ಪೃಶ್ಯನೊಬ್ಬ ಶಿಕ್ಷಣ ಪಡೆದು ವೈದ್ಯನಾದಾಗಲೂ ಸವರ್ಣೀಯನೊಬ್ಬ ಮುಟ್ಟಿಸಿಕೊಂಡು ತೊಳಲಾಡುವ ಅಮಾನುಷವನ್ನು ತೆರೆದಿಟ್ಟಿತ್ತು.**

ಹ್ಞಾಂ... ನೋಡಿ ಅದು ಬರೆದು ಎಷ್ಟು ವರ್ಷಗಳಾದವು. ಇಂದಿಗೂ ತಮಿಳುನಾಡಿನ ಹಳ್ಳಿಗಳಲ್ಲಿ ದಲಿತ ವೈದ್ಯನ ಹತ್ತಿರ ಬೇರೆ ಜಾತಿಯವರು ಹೋಗಲ್ಲ. ಅಸ್ಪೃಶ್ಯತೆಯ ಕರಾಳತೆ ಇಂದಿಗೂ ಜೀವಂತವಾಗಿದೆ.

ಭೂಗೋಳದ ಯಾವುದೇ ಮೂಲೆಯಲ್ಲಿಯು ಅಸ್ಪೃಶ್ಯತೆ ಅಮಾನವೀಯ ಎಂದು ತಿಳಿಯುತ್ತದೆ. ಆದರೆ ನಮ್ಮಲ್ಲಿ ಈ ಕ್ರೌರ್ಯವು ಬಹಳ ಸಹಜ ಅನಿಸಿಬಿಟ್ಟಿದೆ. ನಮಗೆ ನಾಜಿಗಳ ಕ್ರೌರ್ಯದ ಬಗ್ಗೆ ತಿಳಿದುಕೊಳ್ಳುವ ಆಸಕ್ತಿಯಿದೆ. ಆದರೆ ನಮ್ಮಲ್ಲಿಯೇ ಇನ್ನೂ ಜೀವಂತವಾಗಿರುವ ಅಸ್ಪೃಶ್ಯತೆಯನ್ನು ಒಪ್ಪಿಕೊಂಡಿರುತ್ತೇವೆ. ಈ ಮುಟ್ಟಿಸಿಕೊಳ್ಳದಿರುವುದು ಇದೆಯಲ್ಲ ಅದು ಮಹಾ ಕ್ರೌರ್ಯವಾಗಿದೆ. ಇದು ಮನುಷ್ಯನ ಮೇಲೆ ನಡೆಯುವ ಯಾವುದೇ ದಬ್ಬಾಳಿಕೆಗಿಂತ, ಯಾವುದೇ ಹಲ್ಲೆಗಿಂತ, ಕುದಿಯುವ ನೀರಿನಲ್ಲಿ ಮುಳುಗಿಸುವುದಕ್ಕಿಂತ ಹೆಚ್ಚಿನ ನೋವಿನಿಂದ ಕೂಡಿರುತ್ತದೆ. ಹಿಂದೂ ಸವರ್ಣೀಯರು ಜಾತಿ ಹೋಗಿದೆಯಲ್ಲ ಎನ್ನುತ್ತಾರೆ. ಅಸ್ಪೃಶ್ಯತೆಗೆ ಸಹಸ್ರಾರು ಮುಖಗಳಿವೆ. ಅದು ಅವರ ಅರಿವಿಗೆ ಬಾರದು. ಭಾರತದ ಜಾತಿ ಮೀಮಾಂಸೆಯನ್ನು ಅರ್ಥಮಾಡಿಕೊಳ್ಳುವುದೆಂದರೆ ಕುರುಡನೊಬ್ಬ ಆನೆಯನ್ನು ಅರ್ಥಮಾಡಿಕೊಂಡಂತೆಯೆ ಆಗುತ್ತದೆ. ಈ ನನ್ನ ಮಾತು ಅನೇಕರಿಗೆ ಪಥ್ಯವಾಗುವುದಿಲ್ಲ ಎಂಬ ಅರಿವು ನನಗಿದೆ.




*ನವಕರ್ನಾಟಕ ಪ್ರಕಾಶನ ಪ್ರಕಟಿಸಿರುವ "ಶಾಲೆಗೆ ಬಂದ ಚಿರತೆ ಮತ್ತು ಇತರ ಕಥೆಗಳು" ಪುಸ್ತಕ ಲೋಕಾರ್ಪಣೆ ಕಾರ್ಯಕ್ರಮವು ಬೆಂಗಳೂರಿನ ದಿ ಯುನೈಟೆಡ್ ಥಿಯೋಲಾಜಿಕಲ್ ಕಾಲೇಜ್ ಆವರಣದಲ್ಲಿ ದಿನಾಂಕ ೨೫-೦೮-೨೦೧೮ರಂದು ನಡೆಯಿತು. ಇದರೊಂದಿಗೆ ಪ್ರೊ|| ಎಂ. ಕೃಷ್ಣೇಗೌಡ ಅವರು ಲೇಖಕರೊಂದಿಗೆ ಸಂವಾದ ಕಾರ್ಯಕ್ರಮ ನಡೆಸಿದರು. ಚಿತ್ರದಲ್ಲಿ ಸಂಜಯ್ ಗುಬ್ಬಿ, ಪಿ. ಮಣಿವಣ್ಣನ್, ಎ. ಸಿ. ಲಕ್ಷ್ಮಣ್, ಎಂ. ಕೃಷ್ಣೇಗೌಡ.*

**೧೭. ನೀವು ಬುದ್ಧನ ಕಡೆಗೆ ಆಕರ್ಷಿತರಾಗಿದ್ದು ಹೇಗೆ? ದಲಿತರು ದಿನನಿತ್ಯ ಅನುಭವಿಸುತ್ತಿರುವ ಅಸ್ಪೃಶ್ಯತೆ, ಅವಮಾನ, ಹಿಂಸೆ, ದೌರ್ಜನ್ಯಗಳಿಗೆ ಬೌದ್ಧ ಧರ್ಮವು ವಿಮೋಚನೆಯಾಗಿದೆಯೇ?**

ಅದಕ್ಕೆ ಬಾಬಾಸಾಹೇಬ ಅಂಬೇಡ್ಕರ್ ಅವರೇ ಕಾರಣರು. ಬಾಬಾಸಾಹೇಬರನ್ನು ಓದಿದರೆ ಜಾತಿ ಪದ್ಧತಿಯ ಬಗ್ಗೆ ತುಚ್ಛ ಭಾವ ಶುರುವಾಗುತ್ತದೆ, ಬುದ್ಧನ ಬಗ್ಗೆ ಒಲವು ಬೆಳೆಯುತ್ತದೆ. ನಮ್ಮ ಊರಲ್ಲಿ ಅನೇಕರು ಕ್ರೈಸ್ತರಾಗಿದ್ದಾರೆ. ನನ್ನ ತಾತನ ತಮ್ಮನೂ ಆಗಿದ್ದಾನೆ. ಆದರೆ ನನ್ನ ತಾತ ಯಾಕೆ ಕ್ರೈಸ್ತ ಆಗಲಿಲ್ಲ ಅಂತ ನಾನು ಅವನನ್ನು ಬೈದುಕೊಳ್ಳುತ್ತಿದ್ದೆ. ನನ್ನ ಹಲವು ಸಂಬಂಧಿಕರು

ಕ್ರೈಸ್ತರಾಗಿರುವುದರಿಂದ ಅವರೊಂದಿಗೆ ಸಂಪರ್ಕ ಇದೆ. ಬಾಬಾಸಾಹೇಬರಿಂದ ಪ್ರೇರಿತನಾಗಿ ಬುದ್ಧನೆಡೆಗೆ ಆಕರ್ಷಿತನಾದೆ. ಇಲ್ಲಿಗೆ ಬಂದ ಮೇಲೆ ಎಷ್ಟೊಂದು ಉದಾತ್ತವಾದ ಧರ್ಮವನ್ನು ಇದುವರೆಗೆ ಬಿಟ್ಟಿದ್ದೆನಲ್ಲ ಅನ್ನಿಸಿತು. ಜಗತ್ತಿನಲ್ಲಿ ಅತ್ಯಂತ ಮಾನವೀಯ ಧರ್ಮ ಅಂತ ಯಾವುದಾದರು ಇದ್ದರೆ ಅದು ಬೌದ್ಧ ಧರ್ಮವೇ. ದಲಿತರು, ಅಸ್ಪೃಶ್ಯತೆ, ಅವಮಾನ, ಹಿಂಸೆ, ದೌರ್ಜನ್ಯಗಳಿಂದ ವಿಮೋಚಿತರಾಗಬೇಕಾದರೆ ಧರ್ಮಾಂತರ ಅಗತ್ಯ. ದೇವಸ್ಥಾನಕ್ಕೆ ಹೋಗಿ ಹೊರಗೆ ನಿಂತುಕೊಳ್ಳುವುದಕ್ಕಿಂತ ಹೊರಗಿನವನಾಗಿ ದೂರವಿರುವುದು ಅಸ್ಪೃಶ್ಯತೆಯ ಅವಮಾನದಿಂದ ತಪ್ಪಿಸಿಕೊಂಡಂತಲ್ಲವೆ?

**೧೮. ಇವತ್ತಿನ ಬೌದ್ಧ ಧರ್ಮದಲ್ಲಿ ಅಸ್ಪೃಶ್ಯತೆ ಇಲ್ಲವೆ?**

ಬೌದ್ಧ ಧರ್ಮದಲ್ಲಿ ಅಸ್ಪೃಶ್ಯತೆಯೇ ಇಲ್ಲ. ಜೈನರಲ್ಲಿ ಸ್ವಲ್ಪಮಟ್ಟಿಗೆ ಅದು ತಟ್ಟಿದೆ. ಆದರೆ ಬುದ್ಧ ಆ ಕಾಲದಲ್ಲಿಯೇ ಉಪಾಲಿ ಎಂಬ ಕ್ಷೌರಿಕನನ್ನು ಮತ್ತು ಸುನೀತ ಎಂಬ ಜಾಡಮಾಲಿಯನ್ನು ತನ್ನ ಶಿಷ್ಯರನ್ನಾಗಿ ಸ್ವೀಕರಿಸುತ್ತಾನೆ. ಬುದ್ಧ ಆಮ್ರಪಾಲಿ ಎಂಬ ವೇಶ್ಯೆಯನ್ನು ಪರಿವರ್ತಿಸುತ್ತಾನೆ. ಮನುಷ್ಯರನ್ನು ಮನುಷ್ಯರನ್ನಾಗಿ ಮೊದಲು ನೋಡಿದವನೇ ಬುದ್ಧ. ತಾನು ದೇವರೆಂದು ಕರೆದುಕೊಳ್ಳಲಿಲ್ಲ. ಯಾರು ಬೇಕಾದರೂ ತನ್ನಂತೆಯೇ ಬುದ್ಧತ್ವ ಪಡೆಯಬಹುದು ಎಂದು ಹೇಳಿದ ಮಹಾನುಭಾವ ಆತ.




**೧೯. ಬುದ್ಧನ ನಿರ್ವಾಣವಾದ ಐನೂರು ವರ್ಷಗಳಲ್ಲಿ ಬೌದ್ಧ ಧರ್ಮವು ಭಾರತದಿಂದ ಸಂಪೂರ್ಣವಾಗಿ ಕಣ್ಮರೆಯಾಗಿದ್ದೇಕೆ?**

ನೋಡಿ, ಮನೆಯಲ್ಲಿ ಒಂದು ಚೂರು ಕಸ ಇಲ್ಲದಂತೆ ಮಾಡಬೇಕೆಂದರೆ ಪೊರಕೆಯಿಂದ ಗುಡಿಸಿಹಾಕಬೇಕಲ್ಲವೇ? ಹಾಗೆ ಗುಡಿಸಿಹಾಕಲಾಯಿತು. ಅದು ತನ್ನ ದೌರ್ಬಲ್ಯದಿಂದಲೇ ನಶಿಸಿ ಹೋಗಿದ್ದರೆ ಏಷ್ಯಾದಲ್ಲೇ ದೊಡ್ಡ ಧರ್ಮವಾಗಿ ಬೆಳೆಯುತ್ತಿರಲಿಲ್ಲ. ಇಂದಿಗೂ ಮಂಗೋಲಿಯದಿಂದ ಹಿಡಿದು ಚೈನಾ, ಕಾಂಬೋಡಿಯ, ಥೈಲ್ಯಾಂಡ್, ಇಂಡೊನೇಶಿಯಾದವರೆಗೆ ದೊಡ್ಡ ಪ್ರಮಾಣದಲ್ಲಿ ಬೌದ್ಧ ಧರ್ಮೀಯರಿದ್ದಾರೆ. ಅಮೆರಿಕಾ, ಆಸ್ಟ್ರೇಲಿಯಾಗಳಂತಹ ನವ ಕಾಲನಿಗಳಲ್ಲಿ ಧಮ್ಮ ಹರಡುತ್ತಿದೆ. ಅದು ಇಲ್ಲಿಂದ ನಾಮಾವಶೇಷವೂ ಇಲ್ಲದಂತೆ ನಿರ್ನಾಮವಾಗಬೇಕಾದರೆ ಕಾರಣಗಳನ್ನು ಊಹಿಸುವುದು ಕಷ್ಟವೆ?

ಮೌರ್ಯ ಸಾಮ್ರಾಜ್ಯದ ಕೊನೆಯ ದೊರೆ ಬೃಹದ್ರತನನ್ನು ಅವನ ಬ್ರಾಹ್ಮಣ ಸೈನಿಕ ಪುಷ್ಯಮಿತ್ರ ಶುಂಗ ಮೋಸದಿಂದ ಹತ್ಯೆ ಮಾಡಿದ. ಒಬ್ಬ ಬೌದ್ಧ ಭಿಕ್ಕುವಿನ ತಲೆಗೆ ನೂರು ಚಿನ್ನದ ನಾಣ್ಯಗಳನ್ನು ಘೋಷಿಸಿದ. ಬೌದ್ಧಧರ್ಮದ ಜನಪ್ರಿಯತೆಯಿಂದ ತಮಗೆ ಉಳಿಗಾಲ ಇಲ್ಲವೆಂಬುದು ಅವರಿಗೆ ಅರಿವಾಗಿತ್ತು. ಮುಂದೆ ಇದರಲ್ಲಿ ಶಂಕರಾಚಾರ್ಯರ ಪಾತ್ರವು ದೊಡ್ಡದಿದೆ. ಇವರಿಂದಲೇ ವೈದಿಕ ಪುನರುತ್ಥಾನ ಆರಂಭವಾಯ್ತು. ವೈದಿಕರು ಬೌದ್ಧ ಧರ್ಮದಿಂದ ಅನೇಕ ಸಂಗತಿಗಳನ್ನು ತೆಗೆದುಕೊಂಡು ಭಗವದ್ಗೀತೆಯನ್ನು ರಚಿಸಿಕೊಂಡರು. ಈಗ ಗಮನಿಸಿ. ಈ ದೇಶದ ಉದ್ದಗಲಕ್ಕೂ ಎಲ್ಲಿಯೇ ಉತ್ಖನನ ಕೈಗೊಂಡರೂ ಅಲ್ಲಿ ಬುದ್ಧನ ಪಳೆಯುಳಿಕೆಗಳೇ ಸಿಗುತ್ತಿವೆ, ಇದು ಏನನ್ನು ಹೇಳುತ್ತದೆ?

**೨೦. ಕನ್ನಡದಲ್ಲಿ ಜಿ. ಪಿ. ರಾಜರತ್ನಂ ಅವರಂತೆ ತಾವು ಈ ಕಾಲದಲ್ಲಿ ಬುದ್ಧನನ್ನು ಮತ್ತು ಆತನ ತತ್ವಗಳನ್ನು ಜನರಿಗೆ ಪರಿಚಯಿಸುವ ಕೆಲಸ ಮಾಡ್ತಾ ಇದ್ದೀರಿ. ಇತ್ತೀಚೆಗೆ ನಿಮ್ಮ 'ಬಹುತ್ವದ ಭಾರತ ಮತ್ತು ಬೌದ್ಧ ತಾತ್ವಿಕತೆ' ಕೃತಿಯು ಜನಪ್ರಿಯವಾಗಿದೆ. ಆಂಧ್ರದಲ್ಲಿ ಕಾಂಚ ಐಲಯ್ಯ ಬುದ್ಧನನ್ನು ಕುರಿತು ವಿದ್ವತ್‌ಪೂರ್ಣ ಕೃತಿಗಳನ್ನು ಬರೆಯುತ್ತಿದ್ದಾರೆ. ಇಂತಹ ಕೆಲಸ ಮತ್ತೆ ಎಲ್ಲೆಲ್ಲಿ ನಡೆಯುತ್ತಿದೆ?**

ಇದು ಮೊದಲು ಶುರುವಾಗಿದ್ದೇ ಮಹಾರಾಷ್ಟ್ರದಲ್ಲಿ. ಅಲ್ಲಿ ಬಾಬಾ ಸಾಹೇಬರೊಟ್ಟಿಗೆ ಲಕ್ಷಾಂತರ ದಲಿತರು ಬೌದ್ಧರಾದರು. ನಂತರದಲ್ಲಿ ಕಾನ್ಶಿರಾಮ ಅವರ 'ಬಹುಜನ ಸಮಾಜ' ಅಲೆಯಿಂದಾಗಿ ಉತ್ತರ ಪ್ರದೇಶದಲ್ಲಿ ಕಾಣಿಸಿಕೊಂಡಿತು. ಎಲ್ಲ ರಾಜ್ಯಗಳಲ್ಲಿ ಪ್ರಜ್ಞಾವಂತರು ಬೌದ್ಧ ಧರ್ಮವನ್ನು ಬೆಳಸ್ತಾ ಇದ್ದಾರೆ. ನನಗೆ ತಿಳಿದಂತೆ ಕನ್ನಡದಲ್ಲಿ ದಲಿತ ಲೇಖಕರು ಬುದ್ಧನ ಬಗ್ಗೆ ಯಾರೂ ಬರೀತಾ ಇಲ್ಲ. ಸಾಹಿತ್ಯೇತರ ವಲಯದ ಕೆಲವು ಲೇಖಕರು ಬರೆದಿದ್ದಾರೆ, ಸ್ಪಷ್ಟತೆ ಇಲ್ಲ. ಧರ್ಮದ ಹಸಿವು ಇರುವವರು ತುಂಬ ಜನರಿದ್ದಾರೆ. ಆದ್ದರಿಂದ ಈಗ 'ಸಂವಾದ' ಪತ್ರಿಕೆಯಲ್ಲಿ 'ಧಮ್ಮಯಾನ' ಎಂಬ ಅಂಕಣದಲ್ಲಿ ಇಂತಹ ಅನೇಕ ಗೊಂದಲ, ಸಮಸ್ಯೆಗಳನ್ನು ಕುರಿತು ಸರಳವಾಗಿ ಬರೆಯುತ್ತಿದ್ದೇನೆ.

**೨೧. ಇಂದಿನ ಜಾತಿ ರಾಜಕಾರಣದಲ್ಲಿ ದಮನಿತ, ದಲಿತ, ಆದಿವಾಸಿ, ಶ್ರಮಿಕ ಸಮುದಾಯಗಳ ಅಸ್ಮಿತೆಯನ್ನು ಹೇಗೆ ಗುರುತಿಸುತ್ತೀರಿ?**

ನನ್ನ 'ಚಲಾವಣೆಯ ನಾಣ್ಯಗಳು' ಎಂಬ ಪದ್ಯವಿದೆ. ಅದನ್ನು ಗಮನಿಸಿ. ಇಂದು ರಾಜಕಾರಣ ಇವರನ್ನೆಲ್ಲ ತನ್ನ ಲಾಭಕ್ಕೆ ಬಳಸಿಕೊಳ್ಳುತ್ತಿದೆ. ಇತ್ತೀಚಿನ ಸರ್ವೇ ಒಂದರಲ್ಲಿ ರಾಜ್ಯದ ಜನಸಂಖ್ಯೆಯಲ್ಲಿ ದಲಿತರಿಗೆ ಮೊದಲ ಸ್ಥಾನ ಇದೆ. ಆದರೂ ದಲಿತರಲ್ಲಿ ಸಮರ್ಥರಿದ್ದರೂ ಕೂಡ ಮುಖ್ಯಮಂತ್ರಿಯನ್ನಾಗಿ ಮಾಡಲ್ಲ. ಮೇಲ್ವರ್ಗದವರು ತಮಗೇ ಅಧಿಕಾರ ಬೇಕೆನ್ನುತ್ತಾರೆ. ಹಾಗಾಗಿ ಈ ಸಮುದಾಯದ ಜನರು 'ಒಂದರ ಮುಂದಿನ ಸೊನ್ನೆ ಜನಗಳು' ಆಗಿದ್ದಾರೆ. ಇದು ನನ್ನ ಒಂದು ಪದ್ಯದ ಸಾಲು. ದಲಿತರು ತಮ್ಮ ಸ್ಥಾನಮಾನಕ್ಕಾಗಿ ಇನ್ನೂ ಹೋರಾಟ ನಡೆಸಬೇಕಾಗಿದೆ.

**೨೨. ನಿಮ್ಮ ಸಾಹಿತ್ಯ ಅಂತರರಾಷ್ಟ್ರೀಯ ಮಟ್ಟದಲ್ಲಿ ಹೆಸರು ಗಳಿಸಿದ್ದರೂ ಸರಿಯಾದ ಮಾನ್ಯತೆ ಪಡೆದಿಲ್ಲ ಅಥವಾ ಯಾವುದಾದರೂ ಪ್ರಶಸ್ತಿ ಸಿಗಲಿಲ್ಲ ಎಂಬ ಕೊರಗು ನಿಮಗಿದೆಯೇ?**

ನಾನು ಕಳೆದ ನಾಲ್ಕು ದಶಕಗಳಿಂದ ಕಾವ್ಯ, ಕತೆ, ನಾಟಕ, ವೈಚಾರಿಕ ಲೇಖನಗಳನ್ನು ಬರೆಯುತ್ತ ಬಂದಿದ್ದೇನೆ. ಈಚೆಗೆ ಪುಸ್ತಕ ಪ್ರಾಧಿಕಾರದಿಂದ ನನ್ನ ಒಟ್ಟು ಸಾಹಿತ್ಯ ನಾಲ್ಕು ಸಂಪುಟಗಳಲ್ಲಿ ಪ್ರಕಟವಾಗಿದೆ. ಜನರು ನನ್ನ ಕಾವ್ಯವನ್ನು ಅದ್ಭುತವಾಗಿ ರಿಸೀವ್ ಮಾಡಿದ್ದಾರೆ. ಆದರೆ ಬರಬೇಕಾದ ಪ್ರಶಸ್ತಿಗಳು ಯಾಕೆ ಬಂದಿಲ್ಲ ಎಂದು ಕೆಲವೊಮ್ಮೆ ಅನ್ನಿಸುತ್ತೆ. (ನಗು) ನಾನು ಪ್ರಶಸ್ತಿಗಾಗಿ ರಾಜಕೀಯ ಮಾಡಲು ಹೋದವನಲ್ಲ. ಕರ್ನಾಟಕ ರಾಜ್ಯ ಸಾಹಿತ್ಯ ಅಕಾಡೆಮಿಯ ಗೌರವ ಪುರಸ್ಕಾರ ಬಂದಿದೆ. ರಾಜ್ಯೋತ್ಸವ ಪ್ರಶಸ್ತಿಯೂ ಬಂದಿದೆ. ನಾನು ಗ್ರೆನೆಡಾ ಅಂತಾರಾಷ್ಟ್ರೀಯ ಸಾಹಿತ್ಯೋತ್ಸವಕ್ಕೆ ಹೋಗಿದ್ದೆ. ಅಲ್ಲಿ ಎಂಬತ್ತು ದೇಶಗಳ ನೂರಾ ನಲವತ್ತು ಕವಿಗಳು ಬಂದಿದ್ದರು. ಅಲ್ಲಿ ಅರ್ಜೆಂಟೀನಾದ ಕವಿಯೊಬ್ಬ ನನ್ನನ್ನು 'ಹಿ ಈಸ್ ದಿ ಪೊಯೆಟ್ಸ್ ಪೊಯೆಟ್' ಎಂದು ಎಲ್ಲರಿಗೂ ಹೇಳುತ್ತಿದ್ದ. ಈ ಥರದ ಅನುಭವಗಳು ತುಂಬ ಆಗಿವೆ. ಇವೆಲ್ಲ ಪ್ರಶಸ್ತಿಗಳಿಗಿಂತ ದೊಡ್ಡದು ಅಂತ ಅನ್ನಿಸಿದೆ.

ಪ್ರಭುಶಂಕರ ಅವರು ಒಂದು ಕಡೆ ಹೀಗೆ ಬರೆದಿದ್ದಾರೆ. "ನಾನು ಅಮೆರಿಕಾ ಪ್ರವಾಸದಲ್ಲಿದ್ದಾಗ ಹೋದಲ್ಲೆಲ್ಲಾ ದಲಿತ ಬಂಡಾಯದ ಪ್ರಾತಿನಿಧಿಕ ಕವಿತೆಯೆಂದು ಚೆನ್ನಸ್ವಾಮಿಯವರ 'ನಾನೊಂದು ಮರ' ಕವಿತೆಯನ್ನು ಓದುತ್ತಿದ್ದೆ. ಶ್ರೋತೃಗಳು ನನ್ನಂತೆಯೆ ಕಣ್ಣೀರು ಹಾಕುವುದನ್ನು ನೋಡಿದೆ." ಇದಕ್ಕಿಂತ ಯಾವ ಪ್ರಶಸ್ತಿ ದೊಡ್ಡದು ಹೇಳಿ.

**೨೩. ನೀವು ಆತ್ಮಕತೆಯನ್ನು ಬರೆಯುತ್ತಿದ್ದೀರಿ ಎಂದು ಕೇಳಿದ್ದೇನೆ.**

ಈಗಾಗಲೇ ನನ್ನ ಪದ್ಯಗಳಲ್ಲಿ ಮತ್ತು ಬರಹಗಳಲ್ಲಿ ಆತ್ಮಕಥಾನಕದ ಅನೇಕ ಅಂಶಗಳಿವೆ. ಆದರೆ ನನ್ನ ಕೆಲವು ಸ್ನೇಹಿತರು ಆತ್ಮಕತೆ ಬರೆಯಬೇಕು ಎಂದು ಒತ್ತಾಯ ಮಾಡಿದ್ದರಿಂದ ಮತ್ತು ನನಗೂ ಇನ್ನೂ ಹೇಳಬೇಕಾಗಿರುವುದು ಇದೆ ಅಂತ ಅನಿಸಿದ್ದರಿಂದ ಬರೀತಾ ಇದ್ದೇನೆ. ಇನ್ನು ಕೆಲವೇ ತಿಂಗಳುಗಳಲ್ಲಿ 'ನೆನಪಿನ ಹಕ್ಕಿಯ ಹಾರಲು ಬಿಟ್ಟು' ಎಂಬ ನನ್ನ ಆತ್ಮಕತೆ ಓದುಗರ ಮುಂದೆ ಬರಲಿದೆ.

*(ಫೋಟೋಗಳು ಮತ್ತು ನೆರವು : ನೂರ್ ಅಹಮದ್ ಎ.ಎಸ್. ಮತ್ತು ಸಿ.ಪಿ. ನಾಗರಾಜ್)*

**ಡಾ|| ಸುಭಾಷ್ ರಾಜಮಾನೆ**
ನಂ.೫೪೩, ಎಂ.ಸಿ.ಎಕ್ಸ್‌ಟೆನ್ಷನ್, ೯ನೇ ಮುಖ್ಯರಸ್ತೆ, ವಿಜಯನಗರ, ಬೆಂಗಳೂರು–೫೬೦ ೦೪೦
Email : rajamanesubash98@gmail.com



ಡೋನಾಲ್ಡ್ ಟ್ರಂಪ್



ಬೋರಿಸ್ ಜಾನ್ಸನ್

## ಬ್ರೆಕ್ಸಿಟ್ – ಕವಲುದಾರಿಯಲ್ಲಿ ಬ್ರಿಟನ್

**ಮೂ**ರು ವರ್ಷಗಳಾಗುತ್ತ ಬಂದರೂ 'ಬ್ರೆಕ್ಸಿಟ್' ಇನ್ನೂ ಅನಿಶ್ಚಿತ. ೨೦೧೬ರಲ್ಲಿ ಜನಮತಗಣನೆ ನಡೆದು ಅಲ್ಪಮತದಿಂದ ಯೂರೋಪಿಯನ್ ಯೂನಿಯನ್ನಿನಿಂದ ಹೊರಬರಲು ನಿಶ್ಚಿಯವಾಯಿತು. ಆದರೆ ಬ್ರಿಟನ್ನಿನ ಪಾಲಿಗೆ ಅದು ಇನ್ನೂ ದೂರದ ಬೆಟ್ಟ. ಒಪ್ಪಂದವಾಗಲಿ ಬಿಡಲಿ ಅಕ್ಟೋಬರ್ ೩೧ರಂದು ಯೂನಿಯನ್ನಿನಲ್ಲಿರಲು ಕೊನೆಯದಿನ. ಮೂರು ತಿಂಗಳು ಮುಂದೆ ಹಾಕಲು ಪಾರ್ಲಿಮೆಂಟ್ ನಿರ್ಧರಿಸಿದೆ. ಆದರೆ ಪ್ರಧಾನಿ ಬೋರಿಸ್ ಜಾನ್ಸನ್ ಈ ತಿಂಗಳ ೩೧ರ ಗಡುವಿಗೆ ಸಿದ್ಧರಾಗಿದ್ದಾರೆ. 'ಬ್ರೆಕ್ಸಿಟ್' ಬ್ರಿಟನ್ನಿನ ಐಕ್ಯತೆಗೆ ಸವಾಲಾಗಿದೆ. ಸ್ಕಾಟ್ಲೆಂಡ್ ಮತ್ತು ಉತ್ತರ ಐರ್ಲೆಂಡ್ ಎರಡೂ 'ಬ್ರೆಕ್ಸಿಟ್'ಗೆ ವಿರೋಧವಿದೆ.

ಪಾರ್ಲಿಮೆಂಟ್ ಅಡ್ಡಿ ನಿವಾರಣೆಗೆ ಸರಕಾರ ಪಾರ್ಲಿಮೆಂಟನ್ನೇ ಅಮಾನತಿನಲ್ಲಿರಿಸುವ ಮಾರ್ಗ ಅನುಸರಿಸಿದೆ. ಸ್ಕಾಟಿಷ್ ನ್ಯಾಯಾಲಯವೊಂದು ಪಾರ್ಲಿಮೆಂಟನ್ನು ಅಮಾನತುಗೊಳಿಸುವ ಸರಕಾರದ ನಿರ್ಧಾರ ಅಕ್ರಮ ಎಂದು ಸಾರಿದೆ. ಈ ತೀರ್ಪನ್ನು ಬ್ರಿಟನ್ನಿನ ಸುಪ್ರೀಮ್ ಕೋರ್ಟಿನಲ್ಲಿ ಪ್ರಶ್ನಿಸಲು ಬ್ರಿಟಿಷ್ ಸರಕಾರ ನಿರ್ಧರಿಸಿದೆ. ತೀರ್ಪು ಏನೇ ಬರಲಿ ಬ್ರಿಟನ್ ನಿಗದಿಯಾಗಿರುವಂತೆ ಅಕ್ಟೋಬರ್ ಅಂತ್ಯದಲ್ಲಿ ಯೂನಿಯನ್‌ನಿಂದ ಹೊರ ಬೀಳುವುದು ನಿಶ್ಚಿತ ಪ್ರಧಾನಿಯವರ ಪ್ರಕಾರ. ಈಗಾಗಲೆ ಬ್ರಿಟನ್ನಿನ ಎರಡು ಸರಕಾರಗಳನ್ನು ಆಹುತಿ ತೆಗೆದುಕೊಂಡಿರುವ 'ಬ್ರೆಕ್ಸಿಟ್' ಬೋರಿಸ್ ಜಾನ್ಸನ್ ಸರಕಾರವನ್ನು ಪದಚ್ಯುತಗೊಳಿಸುವುದೇ ನೋಡಬೇಕು. ಈಗಾಗಲೇ ಬ್ರಿಟಿಷ್ ಪಾರ್ಲಿಮೆಂಟಿಗೆ ಚುನಾವಣೆ ನಡೆಯುವ ಸೂಚನೆಗಳಿವೆ. ಒಂದು ವಿಶಿಷ್ಟ ಪರಿಸ್ಥಿತಿಯಲ್ಲಿ ಅಂದರೆ ಎರಡನೆ ಮಹಾಯುದ್ಧದ ನಂತರ ಶೀತಯುದ್ಧದ ಕಾಲದಲ್ಲಿ ಅಸ್ತಿತ್ವಕ್ಕೆ ಬಂದದ್ದೇ ಯೂರೋಪಿಯನ್ ಯೂನಿಯನ್. ಈ ಮಧ್ಯೆ ಅನೇಕ ಬದಲಾವಣೆಗಳು ಸಂಭವಿಸಿವೆ. ಯೂರೋಪಿನ ಹೊರಗಿರುವ ಬ್ರಿಟನ್ ಯೂನಿಯನ್ನಿನಿಂದ ಪ್ರತ್ಯೇಕವಾಗಿತ್ತು. ಯೂರೋ ಕರೆನ್ಸಿ ಸೇರಲಿಲ್ಲ. ಸಾಮಾನ್ಯ ಮಾರುಕಟ್ಟೆಯ ವ್ಯವಹಾರಗಳಲ್ಲಿ ಒಪ್ಪಂದಗಳನ್ನು ಮಾಡಿಕೊಂಡಿತ್ತು. ಹಿಂದಿನ ಬ್ರಿಟಿಷ್ ಸರಕಾರ ಯೂನಿಯನ್ನಿನಿಂದ ಹೊರಬೀಳಲು ಒಪ್ಪಂದವೊಂದನ್ನು ಸಿದ್ಧಗೊಳಿಸಿತ್ತು. ಆದರೆ ಅದಕ್ಕೆ ಬ್ರಿಟಿಷ್ ಪಾರ್ಲಿಮೆಂಟಿನ ಸಮ್ಮತಿ ದೊರೆತಿರಲಿಲ್ಲ. ಈಗಲೂ ಪರಿಸ್ಥಿತಿ ಹಾಗೆಯೇ ಇದೆ. ಪ್ರಧಾನಿ ಬೋರಿಸ್ ಜಾನ್ಸನ್ ಭವಿಷ್ಯ ಕೂಡ ಅದರಿಂದ ನಿರ್ಧಾರವಾಗುತ್ತದೆ.

* * *

## ಆಫ್ಘಾನಿಸ್ತಾನದಿಂದ ಕಾಲ್ತೆಗೆಯಲು ದಾರಿಕಾಣದ ಅಮೆರಿಕ

**ಸು**ಮಾರು ಅರ್ಧಶತಮಾನಕ್ಕೂ ಹೆಚ್ಚು ಕಾಲದಿಂದ ಶಾಂತಿಯನ್ನೇ ಕಾಣದ ದೇಶ ಆಫ್ಘಾನಿಸ್ತಾನ. ಸೋವಿಯತ್ ಒಕ್ಕೂಟದ ವಿಘಟನೆಗೆ ಕಾರಣವಾಯಿತು ಎಂಬ ಪ್ರತೀತಿಯೂ ಇದೆ. ಚುನಾಯಿತ ಸರಕಾರವನ್ನು ಉಳಿಸಲು ಆಫ್ಘಾನಿಸ್ತಾನ ಪ್ರವೇಶಿಸಿದ ಸೋವಿಯತ್ ಸೇನೆಗೆ ಅಲ್ಲಿಂದ ಕಾಲ್ತೆಗೆಯಲು ಹದಿನೆಂಟು ವರ್ಷಗಳು ಬೇಕಾಯಿತು. ಈಗ ಇಪ್ಪತ್ತೊಂದನೆ ಶತಮಾನದ ಪ್ರಾರಂಭದಲ್ಲಿ ಭಯೋತ್ಪಾದನೆಯ ವಿರುದ್ಧ ಸಮರ ಸಾರಿದ ಅಮೆರಿಕ ಆ ದೇಶಕ್ಕೆ ಸೇನೆ ನುಗ್ಗಿಸಿ ಹದಿನೆಂಟು ವರ್ಷಗಳ ಮೇಲಾಯಿತು. ಇನ್ನೂ ಸೇನೆಯನ್ನು ಹಿಂತೆಗೆದುಕೊಳ್ಳಲಾಗಿಲ್ಲ. ಅಮೆರಿಕದ ೪೦,೦೦೦ ಸೈನಿಕರು ನೆಲೆಯೂರಿದ್ದಾರೆ ಅಲ್ಲಿ.

ಭಯೋತ್ಪಾದನೆಗೆ ಕೇಂದ್ರ ಎಂದು ಆರೋಪಿಸಿ ಅಂದು ಅಧಿಕಾರದಲ್ಲಿದ್ದ ತಾಲಿಬಾನ್ ಸರಕಾರದ ಮೇಲೆ ದಾಳಿ ನಡೆಸಿದ ಅಮೆರಿಕದ ಸೇನೆ ತಾಲಿಬಾನ್ ಸರಕಾರವನ್ನು ಪದಚ್ಯುತಗೊಳಿಸುವುದರಲ್ಲಿ ಸಫಲವಾಯಿತು. ಕಾಬೂಲಿನಲ್ಲಿ ಕೈಗೊಂಬೆ ಸರಕಾರವನ್ನು ಸ್ಥಾಪಿಸಿದ್ದೂ ಆಯಿತು. ಆದರೆ ತಾಲಿಬಾನ್‌ಗಳ ಹಾವಳಿಯನ್ನು ತಡೆಗಟ್ಟಲು ಮಾತ್ರ ಸಾಧ್ಯವಾಗಲಿಲ್ಲ. ಆಫ್ಘಾನಿಸ್ತಾನವನ್ನು ಪೂರ್ಣವಾಗಿ ಆಕ್ರಮಿಸಿಕೊಳ್ಳಲಾಗಲಿಲ್ಲ. ಸೋವಿಯತ್ ಸೇನೆಗೂ ಕೂಡ ಆ ದಿನಗಳಲ್ಲಿ ಅಂತರ್ಯುದ್ಧವನ್ನು ತಡೆದು ಪೂರ್ಣವಾಗಿ ಆಫ್ಘಾನಿಸ್ತಾನವನ್ನು ಆಕ್ರಮಿಸಿಕೊಳ್ಳಲಾಗಲಿಲ್ಲ. ಭಾರತ ಉಪಖಂಡವನ್ನು ಆಕ್ರಮಿಸಿಕೊಂಡ ಬ್ರಿಟನ್ ಅಪೇಕ್ಷಿಸಿದರೂ ಆಫ್ಘಾನಿಸ್ತಾನವನ್ನು ಆಕ್ರಮಿಸಿಕೊಳ್ಳಲಾಗಲಿಲ್ಲ. ಹಿಮಾಲಯ ಪರ್ವತ ಪ್ರದೇಶದಲ್ಲಿರುವ ಈ ರಾಜ್ಯ ಹಲವು ಪಾಳೆಯ ಪಟ್ಟುಗಳ ಹಿಡಿತದಲ್ಲಿದೆ. ಈಗಲೂ ಪರಿಸ್ಥಿತಿ ಹಾಗೇ ಇದೆ.

ಅಮೆರಿಕದಲ್ಲಿ ಟ್ರಂಪ್ ಅಧ್ಯಕ್ಷರಾದ ಮೇಲೆ ಆಫ್ಘಾನಿಸ್ತಾನದಿಂದ ಸೇನೆಯನ್ನು ಹಿಂತೆಗೆದುಕೊಳ್ಳಲು ಪರದಾಡುತ್ತಿದ್ದಾರೆ. ಆ ಪ್ರಯತ್ನದ ಸಲುವಾಗಿಯೇ ಅಮೆರಿಕ ಕೆಲ ಸಮಯದಿಂದ ತಾಲಿಬಾನ್‌ಗಳ ಜೊತೆ ರಹಸ್ಯವಾಗಿ ಶಾಂತಿ ಒಪ್ಪಂದ ಮಾಡಿಕೊಳ್ಳಲು ಮಾತುಕತೆಯಲ್ಲಿ ತೊಡಗಿಕೊಂಡಿತ್ತು. ಆದರೆ ಈ ಮಾತುಕತೆಗಳೂ ಮುರಿದು ಬಿದ್ದಿವೆ. ಏಕಪಕ್ಷೀಯವಾಗಿ ಟ್ರಂಪ್ ನಡೆಸುತ್ತಿದ್ದ ಸಂಧಾನದಿಂದ ಹಿಂದೆ ಸರಿದಿದ್ದಾರೆ. ಅಮೆರಿಕ ಸೇನೆಯ ಉಪಸ್ಥಿತಿ ಇದ್ದರೂ ರಾಜಧಾನಿ ಕಾಬೂಲಿನಿಂದ ಹೊರಗೆ ಕೈಗೊಂಬೆ ಸರಕಾರವನ್ನು ಕೇಳುವವರಿಲ್ಲ. ಇಸ್ಲಾಮಿಕ್ ಮೂಲಭೂತವಾದಿಗಳು ಎಂದು ಹೆಸರುವಾಸಿಯಾಗಿರುವ ತಾಲಿಬಾನ್‌ಗಳು ದೇಶದ ಮೂರನೇ ಎರಡು ಭಾಗವನ್ನು ತಮ್ಮ ನಿಯಂತ್ರಣದಲ್ಲಿರಿಸಿಕೊಂಡಿದ್ದಾರೆ. ತಾಲಿಬಾನ್ ಸರಕಾರ ಆಡಳಿತದಲ್ಲಿದ್ದಾಗ ಹಲವು ಇಸ್ಲಾಮಿಕ್ ಮೂಲಭೂತವಾದಿ ಕಾನೂನುಗಳು ಜಾರಿಯಲ್ಲಿದ್ದುವು. ಅಲ್‌ಖೈದಾ ಉಗ್ರರಿಗೆ ಬೆಂಬಲ ನೀಡುತ್ತಿತ್ತು. ಈಗಲೂ ತಾಲಿಬಾನ್ ಇಸ್ಲಾಮಿಕ್ ಸ್ಟೇಟ್ ಉಗ್ರರ ಸಂಪರ್ಕದಲ್ಲಿದೆ. ರಹಸ್ಯ ಮಾತುಕತೆಗಳು ಟ್ರಂಪ್ ಆಡಳಿತದೊಂದಿಗೆ



ಶಾಂತಿಯನ್ನೇ ಕಾಣದದೇಶ ಆಫ್ಘಾನಿಸ್ತಾನ

ನಡೆಯುತ್ತಿರುವಾಗಲೇ ಆಫ್ಘಾನಿಸ್ತಾನದಲ್ಲಿ ತಾಲಿಬಾನ್ ಉಗ್ರರ ಉಪಟಳ, ಹಾವಳಿ ನಡೆಯಿತು. ಹಲವು ಮಂದಿ ಅಮಾಯಕರು ಸಾವಿಗೀಡಾದರು. ರಹಸ್ಯ ಮಾತುಕತೆಗಳು ಸ್ಥಗಿತಗೊಳ್ಳಲು ಇದೂ ಒಂದು ಕಾರಣ. ಗೊಂದಲದ ಗೂಡಾಗಿರುವ ಟ್ರಂಪ್ ಆಡಳಿತ ಮತ್ತೆ ತಾಲಿಬಾನ್‌ಗಳ ಜೊತೆ ಸಂಧಾನ ನಡೆಸಿದರೆ ಅಚ್ಚರಿಪಡಬೇಕಿಲ್ಲ. ಅದುವರೆಗೆ ಆಫ್ಘಾನಿಸ್ತಾನದಲ್ಲಿ ಬೀಡುಬಿಟ್ಟಿರುವ ಅಮೆರಿಕದ ಸೇನೆಗೆ ಸ್ವದೇಶಕ್ಕೆ ಮರಳಲು ಮುಕ್ತಿ ಇಲ್ಲ.

**ಸೀಯಾರ್ಕೆ**
'ಸೂರ್ಯ ರೆಸಿಡೆನ್ಸಿ', ಫ್ಲಾಟ್ ೧, ನಂ. ೩೧೩೩
೩ನೇ ಅಡ್ಡರಸ್ತೆ, ಗಿರಿನಗರ ೪ನೇ ಫೇಸ್, ಬೆಂಗಳೂರು – ೫೬೦ ೦೮೫




# ಎದೆ ತುಂಬ ನಕ್ಷತ್ರ

ಲೇಖಕರು : ಕೆ. ಎಸ್. ನರಸಿಂಹಸ್ವಾಮಿ

ಪುಟ : ೮೨ ಬೆಲೆ : ರೂ. ೫೦.೦೦/–

ಪ್ರಕಾಶಕರು
**ವಿ. ಸೀ. ಸಂಪದ**
ಬನಶಂಕರಿ, ೩ನೇ ಹಂತ
ಬೆಂಗಳೂರು– ೫೬೦ ೦೮೫




**"ಕಂ**ಬನಿ ಬದುಕು; ಕರವಸ್ತ್ರ ಕವಿತೆ"

ಮನುಷ್ಯ ಜೀವನದ ಬಗ್ಗೆ, ಅದರ ಬಗೆಬಗೆಯ ಗೋಜಲುಗಳ ಬಗ್ಗೆ, ಜತೆಜತೆಗೆ ಅಲ್ಲಲ್ಲೇ ಸುತ್ತಿ ಸುಳಿವ ರಸಬಿಂದುಗಳ ಬಗ್ಗೆ, ಎಷ್ಟೆಲ್ಲ ತರ್ಕ– ಜಿಜ್ಞಾಸೆಗಳು, ಮೀಮಾಂಸೆಗಳು, ನಮ್ಮಲ್ಲಿ ತುಂಬಿಹೋಗಿವೆ ! ಆದರಿಲ್ಲಿ ನೋಡಿ... ಒಂದು ಸರಳ ಸಂಕ್ಷಿಪ್ತ ಹೆಣಿಗೆಯಲ್ಲಿ ಕವಿ ಅದನ್ನು ಕಟ್ಟಿ ಪೂರೈಸಿದ್ದಾರೆ. ಒಲವಿನ ಕವಿ ಕೆ. ಎಸ್. ನರಸಿಂಹಸ್ವಾಮಿ ಅವರ ಈ ಪಕ್ವ ಕವಿ ಭಾವ ಅವರ ಸುದೀರ್ಘ ಸಾಹಿತ್ಯಾನುಭವದ ಕೆನೆ ಭಾಗ.

ಕೆ.ಎಸ್.ನ. ಅವರು ತಮ್ಮ ಇಳಿವಯಸ್ಸಿನಲ್ಲಿಯೂ ಬೆಚ್ಚಗೆ ಕೂತು ಬೆಳಕಿನ ಹಾಡುಗಳನ್ನು ಬರೆಯ ಬಲ್ಲವರಾಗಿದ್ದರು. ನಮ್ಮ ನಡುವಿನ ಒಂದು ಜೀವಂತ ಸಂತೋಷ ಅವರ ಈ ಕಮನೀಯ ಕವಿತ್ವ. ವಯಸ್ಸು, ವೃದ್ಧಾಪ್ಯ, ಆಯಾಸಗಳೆಲ್ಲ ಕವಿಯ ಹೊರಗಿನ ಆಕಾರಕ್ಕೆ! ಆದರೆ ಅವರಂತರಂಗದ ಭಾವದೊರತೆಗೆ ಎಂದೂ ಮುಪ್ಪಿಲ್ಲ... ಅಭಾವವೂ ಇಲ್ಲ.

ಈ ಮಾತಿಗೆ ಸಾಕ್ಷಿಯಾಗಿ ನಿಲ್ಲುತ್ತದೆ, ಅವರ ಕಡೆಕಡೆಯ ದಿನಗಳಲ್ಲಿ ಬರೆದ ಚೇತೋಹಾರಿ ಕವನ ಸಂಕಲನ 'ಎದೆ ತುಂಬ ನಕ್ಷತ್ರ' ಈ ಶೀರ್ಷಿಕೆಯೇ ಒಂದು ರೀತಿಯಲ್ಲಿ ಕವಿಯ ಉತ್ಕಟ ಜೀವನೋತ್ಸಾಹದ ಪ್ರತಿಬಿಂಬವೂ ಆಗಿದೆ. ಈ ಸಂದರ್ಭದಲ್ಲಿ ಕೆ.ಎಸ್.ನ. ಹೇಳಿರುವ ಮಾತುಗಳು :

"ಈ ಇಳಿವಯಸ್ಸಿನಲ್ಲೂ ನನ್ನ ಆಲೋಚನೆಗಳು ಯಾವ ಸ್ವರೂಪದವು ಎಂಬುದನ್ನು ಕವನಗಳ ರೂಪದಲ್ಲಿ ಬರೆದಿದ್ದೇನೆ."

ಈ ಆಲೋಚನೆಗಳ ಹೊಳಪು ಎಂಥದ್ದು ಅನ್ನುವುದನ್ನು ತಿಳಿಯಬೇಕಾದರೆ ನಾವೊಮ್ಮೆ ಈ ನಕ್ಷತ್ರಲೋಕದೊಳಗೆ ಹೊಕ್ಕು ಬರಬೇಕು. ಮುಖ್ಯವಾಗಿ ಇದು, ಕವಿ ಯಾವಾಗಲೂ ನೆಚ್ಚಿಕೊಂಡೇ ಬಂದಿರುವ ಒಲವು – ಚೆಲುವುಗಳ ತತ್ವದರ್ಶನ. ಹಾಗೆಂದು ಪ್ರಾಮುಖ್ಯತೆ ಕೇವಲ ಒಲವು–ಚೆಲುವುಗಳಿಗೆ ಮಾತ್ರ ಮೀಸಲೆಂದು ತಿಳಿಯಬೇಕಾಗಿಲ್ಲ. ಈ ಮಾನವ ಸೌಂದರ್ಯಗಳನ್ನು ನಂಬಿ, ನಡೆದು, ಕವಿ ಪಡೆದುಕೊಂಡ ಧನ್ಯತೆಯ ಗೆಲುವು ಕೂಡ ಈ ಕವನಗಳಲ್ಲಿ ಹೊರಹೊಮ್ಮಿದೆ.

'ಬಾಯಿ ಬೀಗ' ಒಂದು ತಾತ್ವಿಕ ಹಿನ್ನೆಲೆ ಉಳ್ಳ ವಿಶಿಷ್ಟಕವನ. ಬಹುಶಃ ಕವಿ ತಾನೇ ಈ ಮುನ್ನ ಹೇಳಿರುವ "ಕವಿತೆಗೆ ಅಸ್ಪಷ್ಟತೆಯು ಒಂದು ಚೆಲುವು" ಅನ್ನುವ ಮಾತನ್ನು ಇಲ್ಲಿ ಪ್ರತಿಪಾದಿಸಿದ್ದಾರೆ. ಹಗ್ಗವಿರದ ತೊಟ್ಟಿಲು ವಿಳಾಸವಿಲ್ಲದ ಪಯಣ, ತಳವಿರದ ಪಾತ್ರೆ ತಂತಿಯಿಲ್ಲದ ವೀಣೆ" ಈ ರೀತಿಯ ಅಸ್ಪಷ್ಟತೆಗಳು ಹಾಗೂ ಅಪೂರ್ಣತೆಗಳು ಕವಿಯನ್ನು ಗಾಢವಾಗಿ ಕಾಡುತ್ತವೆ. ಮಧ್ಯದಲ್ಲೆಲ್ಲೋ ಅವರಿಗೆ,

*"ನಾನು ಹುಟ್ಟಿದ ಮನೆಯ ನೆನಪು ಬರುತಿದೆ ಜತೆಗೆ*
*ಹಿಂತಿರುಗುವಂತಿಲ್ಲ ನಾನಂತು ಅದರ ಬಳಿಗೆ"*

– ಅನ್ನುವಂಥ ವಿಷಾದ ಭಾವವೂ ಬಾಧಿಸಿದೆ.

'ಪ್ರಶ್ನೆ' ಎಂಬ ಕವನ ಇಂದಿನ ನಮ್ಮೆಲ್ಲರ ತಬ್ಬಿಬ್ಬು ತಲ್ಲಣಗಳಿಗೆ ಒಂದು ಸಮರ್ಪಕ ಉತ್ತರ!

ನದಿದಂಡೆಯ ಬಳಿ ಕವಿ ಏಕಾಂಗಿಯಾಗಿ ನಿಂತಿದ್ದಾರೆ. "ಮೊಸಳೆಗಳಿವೆ" ಅನ್ನುವ ಫಲಕ ಎದ್ದು ಕಾಣುತ್ತಿದೆ. ಆದರದನ್ನು ಲೆಕ್ಕಿಸದೆ, ತಿಳಿನೀರ ಮೇಲೆ ಬಳುಕುವ ಮೀನುಗಳು, ಮಿನುಗುವ ಹೂವುಗಳ ಅಂದಕ್ಕೆ ಮರುಳಾಗಿ ನೀರಿಗಿಳಿದೇಬಿಡುತ್ತಾರೆ ! ಹಾಗವರು ಈಜುತ್ತಾ ಮುಂದೆ ಸಾಗಿದಾಗ... "ಕೆಂದಾವರೆ ತನ್ನಷ್ಟಕ್ಕೆ ತಾನರಳಿ ಚೆಲುವ ಮೆರೆದಿತ್ತು!" ಮೈಮರೆತ ಕವಿ ಮೆಲ್ಲಗೆ ಉದ್ಗರಿಸುತ್ತಾರೆ – "ಬದುಕಿನುದ್ದಕ್ಕೂ ಎಚ್ಚರಿಕೆಗಳ ಬರೆದವರು। ಇರುವಷ್ಟು ಚೆಲುವನೂ ಏಕೆ ಬಣ್ಣಿಸಲಿಲ್ಲ?" ಕವಿಯ ಈ ತಾತ್ವಿಕ ವಿಸ್ಮಯ ತನ್ನ ಅಪಾರ ಧ್ವನಿಶಕ್ತಿಯಿಂದ ಗಮನ ಸೆಳೆಯುತ್ತದೆ, ಮುಂದಿನ ಭಾಗದಲ್ಲಿ ಮತ್ತಷ್ಟು ಉಜ್ವಲವಾಗಿದೆ.

*"ಮುಳ್ಳ ಹಾಡುವಿರೇಕೆ ಚೆಂಗುಲಾಬಿಯ ಹಾಡಿ*
*ಮಾಮರದ ಕೊಂಬೆಯಲಿ ಕೋಗಿಲೆಯು ಹಾಡುತಿದೆ.*
*ಮನೆಮನೆಯ ಹಿತ್ತಲಲಿ ಮಲ್ಲಿಗೆಯು ಅರಳುತಿದೆ."*

**ಭಾರತೀ ಕಾಸರಗೋಡು**

–ನೋವು ಬದುಕಿನಲ್ಲಿ ಸಹಜ. ಅದರ ಪಕ್ಕದಲ್ಲೇ ಇರುವ ಚೆಲುವಿನಿಂದ ಸಂತೈಸಿಬಿಡೋಣ ಅನ್ನುತ್ತಾರೆ ಕವಿ. ಇದು ನಲ್ಲನ ಸುಡುಹಣೆಯನ್ನು ನಲ್ಲೆ ತನ್ನ ಶೀತಲ ಕರಸ್ಪರ್ಶದಿಂದ ನೇವರಿಸಿದ ಹಾಗೆ ! "ಲೋಕಾನುಭವವು ಕಾಮನಬಿಲ್ಲ ಭಾಷೆಯಲಿ ಕವಿತೆಯನು ಬರೆದಿಡಲಿ" ಎಂಬುದು ಕವಿಯ ಆಗ್ರಹ.

ಪ್ರೀತಿ – ಸೌಂದರ್ಯಗಳ ಜತೆ ಜತೆಗೆ ತಾವು ಕಂಡುಂಡ ವಿಷಾದದ ಎಳೆಗಳನ್ನು ಕೂಡ ಅಲ್ಲಲ್ಲೇ ಕವಿ ಚಿತ್ರಿಸುತ್ತಾರೆ.

"ನಿಂತಿದ್ದೇವೆ ನಾವು ಉರುಳುವ ಭೂಮಿಯ ಮೇಲೆ ಹಿಂದಿನದ ನೆನೆಯುತ್ತ ಮುಂದೇನೋ ತಿಳಿಯದೆಯೆ ॥" (ಆಷಾಢದಲ್ಲಿ)

ಪ್ರಕೃತಿಯ ಅನಿವಾರ್ಯ ಅಚ್ಚರಿಗಳ ಮುಂದೆ ಮನುಷ್ಯ ಮಾಡಬಹುದಾದ್ದು ಇಷ್ಟೇ ತಾನೇ? ಆದರೂ...

"ಇಂದಿನಂತೆಯೆ ನಾಳೆ ಇನ್ನೊಂದು ತೆರೆದ ಪುಟ ರಾತ್ರಿಯುದ್ದಕೂ ಚಂದಿರನ ಆಳ್ವಿಕೆ ದಿಟ"

(ಪೂರ್ಣಿಮಾ)

ನಮ್ಮ ಬದುಕೆಂಬುದೇ ಒಂದು ಸಮಗ್ರ ಕಾವ್ಯ. ಅವರವರು ಅರ್ಥೈಸಿದ ಹಾಗೆ ಅದರದರ ಭಾಸ; ಅವರವರು ಬರೆದ ಹಾಗೆ ಅದರ ಚೆಲುವು. ಈ ಕವಿಭಾಷ್ಯವನ್ನು ಕೇಳಿ–

*"ಒಡಲ ಬಡತನದಲ್ಲಿ ಚೆಲುವ ಕಂಡೆನೆ ನಾನು*
*ಅತ್ತಿತ್ತ ಹಾಡುಗಳ ಚೆಲ್ಲಿ...*
*ಕೆಲವು ನೋವಿನ ಹಾಡು ಹಲವು ನಲಿವಿನ ಹಾಡು*
*ಕಂಡು ಬಂದವು ನನ್ನ ಬದುಕಿನಲ್ಲಿ ॥"*

ಪದ್ಯದ ಉತ್ತರಾರ್ಧ ಎಲ್ಲರ ಬದುಕಿನ ಸತ್ಯ. ಇನ್ನು ಪೂರ್ವಾರ್ಧದ ಬಗ್ಗೆ ಹೇಳುವುದಾದರೆ, ಒಡಲ ಬಡತನದಲ್ಲಿ ಚೆಲುವನ್ನು ಕಾಣುವ ಹೃದಯ ಎಲ್ಲರಿಗೂ ಇರಬಹುದೇ? ಇರಬೇಕು ಅನ್ನುವುದು ಕವಿಯ ದರ್ಶನ. ಇಂಥ ತಾತ್ವಿಕ– ದೃಷ್ಟಿಯೇ ನಿಜವಾದ ಬಾಳ ಚೆಲುವು... ಇರುಳ ನಂತರದ ಹೊಂಬೆಳಗು ! ಇಷ್ಟಕ್ಕೂ ಕವಿಯ ಪ್ರಕಾರ, ಹಾಡುಗಳಿರುವುದೇ ಸುತ್ತ ಚೆಲ್ಲಿ ಮುದವೂಡಿಸಲು ! ಹಾಗಾಗಿ ಪದ್ಯದ ಹೆಸರು

"ಬೇಕು ಒಲವಿನ ಹಾಡು". ಜೇನು – ಕಾನು – ಸತ್ಯ ಸೌಂದರ್ಯ – ಮಗುನಗು – ಹೀಗೆ ಮನಸ್ಸನ್ನು ಮಿಂಚಾಗಿಸುವ ಎಲ್ಲ ಸಂತೋಷಗಳು ಹಾಡಾಗಿ ಕವಿಮನದಲ್ಲಿ ಸೊಂಪಾಗಿ ಸುಳಿಯುತ್ತವೆ.

ಒಂದು ಪಕ್ವ ಮನಸ್ಸಿನಿಂದ, ಹಾಗೆಯೇ ಉಜ್ವಲ ವಾದೊಂದು ಬೆಳಕಿನ ನಿರೀಕ್ಷೆಯಲ್ಲಿ, ನೋವು – ನಲಿವು ಗಳನ್ನು ಸರಿಸಮಾನವಾಗಿ ಅನ್ವಯಿಸುತ್ತಾ ಹೋದರೂ...

"ಗುಣವಿರದ ಕವಿತೆ
ಸಿಂಹಾಸನದಿ ಮೆರೆಯುತಿದೆ" (ಸಹಜ)

ಅನ್ನುವಂಥ ವಿಷಾದ ಭಾವ ಕೂಡ ಅಂತರಾಳದಲ್ಲೆಲ್ಲೋ ಒಳಗೊಳಗೆ ಮಿಡಿಯುತ್ತಿದೆ. ಆದರೆ ಮರುಕ್ಷಣವೇ "ಇದು ಕ್ಷಣಿಕವೆಂದವರ ಮಾತು ಸಹಜ" ಎಂದು ತಮ್ಮನ್ನು ತಾವು ಸಮಾಧಾನಪಡಿಸಿ ಕೊಳ್ಳುತ್ತಾರೆ. ಜೀವನದ ಪಥದಲ್ಲಿ ಬಲುದೂರ ಸಾಗಿ ಬಂದ ಅವರಿಗೆ "ಕನಸು ನನಸಾಗುವುದು ಸಹಜ" ಎಂಬ ಆಶಾವಾದವೂ ಸಹಜ! ಉಲ್ಲಾಸದ ಅನ್ವೇಷಣೆಯೇ ಎಲ್ಲ ಕವಿಭಾವದ ಮೂಲ ಅನ್ನುವುದು ಈ ಕವನದ ಧ್ವನಿ. ನಮ್ಮ ಕೆ.ಎಸ್.ನ. ಅವರಂತೂ ಕನಸುಗಳ ಜಾಡನ್ನೇ ಹಿಡಿದು ಹೊರಟವರು!

ಬದುಕು ಮತ್ತು ಹಾಡು, ಇವೆರಡರ ಬೆರಗು ಹಾಗೂ ಪರಸ್ಪರ ಸಂಬಂಧ, ಇವೆಲ್ಲದರ ಸುತ್ತ ಚೆಲುವಾಗಿ ಹೆಣೆದ ಒಂದು ಮಾರ್ದವ ಕವನ... "ಹಾಡಿನ ಅರ್ಥ."

*"ದೀಪ ಹೋಗಿತ್ತು ಒಳ ಮನೆಯಲ್ಲಿ
ಚೆಲುವೆಯರು ಹಾಡ ತೆರೆದರು
ತುಂಬುಕತ್ತಲೆಯ ಮಡಿಲಲ್ಲಿ
ಹೊಳೆಯಿತು ಹಾಡು. ದೀಪ ಬರಲೇ ಇಲ್ಲ
ಹಾಡು ಮುಗಿಯಲೇ ಇಲ್ಲ.
ಮುಗಿದರದು ಹಾಡಲ್ಲ."*

ಈ ಸಂಕಲನದ ಮತ್ತೊಂದು ಹೃದಯಸ್ಪರ್ಶಿ ಕವನ "ಆಯ್ಕೆ" ಬಾನುಲಿಯಲ್ಲಿ ಚೆಲು ಹಾಡೊಂದನ್ನು ಕೇಳುತ್ತಾರೆ ಕವಿ. ಹಾಡಿನ ಮಾಧುರ್ಯಕ್ಕೆ ಅವರ ಸಹೃದಯತೆ ಸ್ಪಂದಿಸುತ್ತದೆ –

*"ಮಲ್ಲಿಗೆಯ ಮುಡಿದವಳು
ಹಾಡು ಹೇಗಿತ್ತೆಂದು ನನ್ನ ಕೇಳಿದ ಹಾಗೆ
ನನಗೆ ತೋರಿತು."* (ಆಯ್ಕೆ)

ರಸಿಕ ಕವಿ ಹೃದಯಕ್ಕೆ ಹಾಗೆ ತೋರಿತಷ್ಟೆ! ಹಾಡು ತುಂಬ ಚೆಲುವಾಗಿತ್ತೆಂದು ಆ ಅಮೂರ್ತ ಸುಂದರಿಗೆ ಕವಿ ಉತ್ತರವನ್ನೂ ಕೊಟ್ಟರಂತೆ! ಈ ಸ್ವಕಲ್ಪಿತ ಶೃಂಗಾರಸಂವಾದದಿಂದ ಅವರಿಗೆ ಮನಸ್ಸು ತುಂಬಿ ಬಂದಿದೆ. ಆ ಭಾವಾನಂದದಲ್ಲಿ ಉಲ್ಲಸಿತರಾಗಿ ಉಲಿಯುತ್ತಾರೆ.

"ಚೆಲುವು–ಒಲವುಗಳಿಂದ ತುಂಬಿಹೋಗಿದೆ ಲೋಕ"

ಈ ಹರ್ಷಭಾವ ಅವರ ಸೃಜನಶೀಲತೆಯನ್ನು ಗರಿಗೆದರಿಸಿದೆ. ಸಾಲುಸಾಲಾಗಿ ಕವನ ತನ್ನಿಂದ ತಾನೇ ಸುಂದರವಾಗಿ ಹೊರ ಹೊಮ್ಮಿದೆ.

*"ಇರುಳಾದ ಮೇಲೆ ಮೂಡುವುದು
ಬೆಳಕು ಸರದಿಯಲಿ
ಬಂದು ಬಿಡುವುದು ಎಂದೂ
ಎದೆಯಲರಳಿ ಕವಿತೆ."*

ಹೀಗೆ ಬಾಳ ಬಳ್ಳಿಗಳಲ್ಲಿ ಮೊಗ್ಗರಳಿ ಹೂವಾಗಿ ಪರಿಮಳ ಚೆಲ್ಲುವುದನ್ನೇ ಕಂಡರಸಿ ಸಂಭ್ರಮಿಸಿ ನಲಿಯುವ ಕವಿ,

"ಸಾವು ಸಾಯಲಿ ಎಂದು ಹಾಡಬೇಕು ಇಂಪಾಗಿ"

ಎಂದು ಸಾವಿಗೇ ಮರಣದಂಡನೆ ವಿಧಿಸುತ್ತಾರೆ!

ಕವಿತೆ ಸತ್ಯ – ಸೌಂದರ್ಯಗಳ ಸಾಕಾರವೇ ಹೌದಾದರೂ, ಅದು ಭಾವ ಸುಲಭ ಅಲ್ಲ. ಬಾಳಿನ ನೋವು – ನಲಿವುಗಳು ಮಾತಿಗೊಲಿಯಬೇಕು. ಒಲವು ಅಲ್ಲಿ ತಾನಾಗಿ ಅರಳಿರಬೇಕು. ಆಗ ಅದು ಅರ್ಥಪೂರ್ಣ.

– ಕವಿತೆಯ ಸ್ವಭಾವ ಎಂಥದ್ದು? ಕವಿ ಹೇಳುವುದು ಹೀಗೆ–

*"ಕವಿತೆ ಆಲೋಚನಾಮೃತ; ರಸಿಕರೆದೆಯಲ್ಲಿ
ಹುಣ್ಣಿಮೆಯ ಹೊಂಬೆಳಕು. ಹನಿಯಲ್ಲಿ
ಒಂದುಹೊಳೆ."*

–ಭಾವದಲೆಗಳನ್ನು ನವಿರಾಗಿ ಚಿಮ್ಮಿಸುವ ಈ ಹೊನ್ನಹೊಳೆ ನೆನೆದಾಗ ಅಂಗೈ ಮೇಲೆ ಎಟುಕಿಬಿಡುವುದೇನು? ಅದು ಅಷ್ಟೊಂದು ಸರಾಗ ಅಲ್ಲ. ಕವಿ ಮೃದುವಾಗಿ ಎಚ್ಚರಿಸುತ್ತಾರೆ –

"ಕವಿತೆ ಮೂಡುವ ತನಕ
ನಾವು ಕಾದಿರಬೇಕು."

ಸೌಂದರ್ಯದ ಅನ್ವೇಷಕರು ಅಂದ ಮಾತ್ರಕ್ಕೆ ಜಗತ್ತನ್ನೆಲ್ಲ ನಕ್ಷತ್ರಗಳೇ ಆವರಿಸಿವೆ ಅನ್ನುವ ಭ್ರಮೆಯೇನೂ ಕವಿಗಿಲ್ಲ. ಕಾರಿರುಳಿನ ಕಪ್ಪುಕತ್ತಲೆಯನ್ನೂ ಅನುಭವಿಸಿದ್ದಾರೆ. ಆದರದನ್ನೇ ವೈಭವೀಕರಿಸಿ ಗೋಳು ಕರೆಯುವುದು ಅವರಿಗೆ ಬೇಡ. ಕತ್ತಲಿನಾಚೆಯ ಹೊಸ ಬೆಳಕನ್ನು ಕಾಣಲು ಕಾತರಿಸುವ ಮನಸ್ಸು ಅವರದು.

*"ಕತ್ತಲೆಯ ಆಳ ತಿಳಿಯದು ನಮಗೆ
ಹುಡುಕುವೆವು ಎಲ್ಲ ಬೆಳಕಿನ
ಬೇರ ಮೂಲಗಳನು."*

ತಮ್ಮ ಹುಡುಕಾಟದ ಬಗ್ಗೆ ನಿಶ್ಚಯವಿದ್ದರೂ, ಅಂತಿಮವಾಗಿ ನಮ್ಮ ಜತೆಗೆ ಬರುವುದಾದರೂ ಏನು ಎಂಬ ವಿಸ್ಮಯವೂ ಅವರನ್ನಾವರಿಸಿದೆ. ಈ ಸಂಶಯಕ್ಕೆ ಮಧುರ ಉತ್ತರವೂ ಅವರಲ್ಲಿದೆ.

*"ತುದಿ ಗೊಂಬೆಯಲಿ ಹಕ್ಕಿ
ತೆರೆದ ಸಾವಿರ ಹಾಡು..
ಹೂವು ಹಾಸಿದ ಕಾಡು."* (ಉತ್ತರ ಇಷ್ಟೇ)

ಈ ಕವನ ಸಂಕಲನದ ಕಡೆಯಲ್ಲಿ ಬೆಳದಿಂಗಳಿ ನಂತಹ ಚೆಲು ಕವನವೊಂದಿದೆ. ಇದೊಂದು ಅನಂತ ಶಾಂತಿಧಾಮ!

ಊಹೆಯೋ... ವಾಸ್ತವವೋ, ಕವಿಯಂತು ಅಲ್ಲಿಗೆ ಹೋಗಬೇಕಂತೆ!

*"ಎಲ್ಲಿ ನಕ್ಷತ್ರಲೋಕ ಕನಸಾಗಿ ಹೊಳೆದು
ಕೈಬೀಸಿ ಕರೆಯುತಿಹುದೋ
ಗುರಿಯಿರದ ಪಯಣ
ಕೊನೆಯಿರದ ದಾರಿ
ನಾ ಪಡೆದ ಭಾಗ್ಯವೆಂದು
ಹೆಜ್ಜೆ ನೊಂದರೂ
ಎಲ್ಲಿ ಹರುಷ ಬೆನ್ನಟ್ಟಿ ನಡೆಸುತಿಹುದೋ
ಹೋಗಬೇಕು ನಾನಲ್ಲಿಗೆ"*

ಇದುವೆ ಹೊನ್ನಾದ ಬದುಕು. ಕೋಗಿಲೆಯ ಹಾಡು.

**ಭಾರತೀ ಕಾಸರಗೋಡು**
ಫ್ಲಾಟ್ ನಂ. ಕೆ–೧೦೦೩, ಪೂರ್ವ ಹೈ ಲ್ಯಾಂಡ್ಸ್
೯ನೇ ಮೈಲ್ ರೋಡ್, ಮಲ್ಲಸಂದ್ರ, ಕನಕಪುರ ರೋಡ್
ಬೆಂಗಳೂರು – ೫೬೦ ೦೬೨
Email : bharathikasargod@gmail.com

# ಗಜಲ್

ಏಳು ದಶಕಗಳೇ ಕಳೆದವು ಹೊಸ ಮಳೆಯು ಸುರಿಯಲಿಲ್ಲ ನೋಡು ಸಾಕಿ
ಭೂತಾಯಿಯ ಬಂಜೆತನ ಹಿಂಗಲೇಯಿಲ್ಲ ನೋಡು ಸಾಕಿ

ನೊಂದವರ ಮುಖದಲ್ಲಿ ನಗೆಯು ಅರಳಲಿಲ್ಲ
ಜಗಕೆ ಅನ್ನಹಾಕುವವನ ಬಾಯಿ ಇಂದಿಗೂ ಸಿಹಿಯಾಗಲಿಲ್ಲ ನೋಡು ಸಾಕಿ

ಗಾಂಧಿ ಕಂಡ ಗ್ರಾಮೀಣ ಭಾರತದ ಕನಸುಗಳೆಲ್ಲ ಜಾರಿ ಕಡಲ ಪಾಲಾದವು ಈ ಮಣ್ಣಲಿ
ಹಳ್ಳಿಗಳೆಲ್ಲ ಗುಳೇ ಎದ್ದು ಸುಖವೆಂಬುದೇ ಸುಳಿಯಲಿಲ್ಲ ನೋಡು ಸಾಕಿ

ಕುರ್ಚಿಯ ಕನಸಿನಲಿ, ಸ್ವಾರ್ಥದ ಸೆಳವಿನಲಿ ದೇಶ ನಮ್ಮ ನಮ್ಮವರಲ್ಲಿಯೇ ಹರಾಜಾಯಿತು
ಅಧಿಕಾರದ ಮೋಹದಲಿ ದೇಶಿಗರಿಗೆ ನೆಮ್ಮದಿ ಸಿಗಲಿಲ್ಲ ನೋಡು ಸಾಕಿ

'ಹೊನ್ನಸಿರಿ' ಜನರ ಆಶೋತ್ತರಗಳಿಗೆ ಉತ್ತರ ಎಲ್ಲಿಹುದು
ಸ್ವಾರ್ಥದ ಈ ಪಡಿಪಾಟಲಿಗೆ ಬಂಡೇಳದೇ ಈ ದೇಶಿಗರಿಗೆ ಫಲ ದೊರಕುವದಿಲ್ಲ ನೋಡು ಸಾಕಿ

**ಸಿದ್ಧರಾಮ ಹೊನ್ಕಲ್,** ಸಮಾಜಶಾಸ್ತ್ರ ಬೋಧಕರು, ಶಹಾಪುರ, ಯಾದಗಿರಿ ಜಿಲ್ಲೆ

# ಬೇಂದ್ರೆಯವರ 'ಬೆಳಗು' ಕವಿತೆಗೆ ಈಗ ನೂರು ವರುಷ



೧೯೧೮ರ ಸುಮಾರಿಗೆ ಕನ್ನಡದಲ್ಲಿ ಸಾಹಿತ್ಯಕೃಷಿ ಪ್ರಾರಂಭಿಸಿದ ಬೇಂದ್ರೆಯವರು ೧೯೩೨ರಲ್ಲಿ ಪ್ರಕಟವಾದ 'ಗರಿ' ಎಂಬ ತಮ್ಮ ಕವನ ಸಂಗ್ರಹದಿಂದಲೇ 'ವರಕವಿ' ಎಂದು ಪ್ರಸಿದ್ಧರಾದರು. ಜೊತೆಗೆ ವಿಮರ್ಶೆ, ಚಿಂತನೆ, ಸಂಶೋಧನೆ, ಪ್ರಬಂಧ, ನಾಟಕ ಮುಂತಾದ ಸಾಹಿತ್ಯ ಪ್ರಕಾರಗಳಲ್ಲಿ ಹಲವಾರು ಪ್ರಭಾವಿ ಕೃತಿಗಳನ್ನು ರಚಿಸಿದ ಬೇಂದ್ರೆ ಸವ್ಯಸಾಚಿಯಾಗಿದ್ದರೂ ಅವರ ಮುಖ್ಯ ಮತ್ತು ಬಹುಕಾಲ ನಿಲ್ಲಬಲ್ಲ ಸಾಹಿತ್ಯದ ಕೆಲಸ ನಡೆದದ್ದು ಕಾವ್ಯಕ್ಷೇತ್ರದಲ್ಲಿಯೇ – ಅದರಲ್ಲೂ ಭಾವಗೀತಗಳಲ್ಲಿಯೇ ಎಂಬುದು ನಿರ್ವಿವಾದ. ಅವರು ನಮ್ಮ ಕಾಲದ ಮತ್ತು ನಮ್ಮ ದೇಶದ ಅತ್ಯಂತ ಉಚ್ಚ ಮತ್ತು ಸೂಕ್ಷ್ಮ ಭಾವಗೀತಕಾರರಾಗಿದ್ದರಷ್ಟೇ ಅಲ್ಲದೆ, ಕೆಲವು ಪರಿಣತ ಕಾವ್ಯವಿಮರ್ಶಕರ ಪ್ರಕಾರ ಇಡೀ ಪ್ರಪಂಚದ ಉಚ್ಚತಮ ಭಾವಗೀತಕಾರರಲ್ಲಿ ಒಬ್ಬರೆನಿಸಿದ್ದಾರೆ. ಸೂರ್ಯನಿಗೆ ಬೆಳಕು ಹೇಗೆ ಸಹಜ, ಚಂದ್ರನಿಗೆ ಬೆಳದಿಂಗಳು ಹೇಗೆ ಸಹಜ, ಬೇಂದ್ರೆಯವರಿಗೆ ಕಾವ್ಯ ಎಂದರೆ ಅಷ್ಟೇ ಸಹಜ.

'ಬೆಳಗು' ಕವಿತೆ ೧೯೩೨ರಲ್ಲಿ ಪ್ರಕಟವಾದ ಅವರ ಪ್ರಥಮ ಸಂಗ್ರಹ 'ಗರಿ'ಯಲ್ಲಿದೆ. ಇಲ್ಲಿಯ ಕವನಗಳು ೧೯೧೮ರಿಂದ ೧೯೩೨ರವರೆಗೆ ಬರೆದವು ಎಂದು ಬೇಂದ್ರೆಯವರೇ ಅದರ ಮುನ್ನುಡಿಯಲ್ಲಿ ಬರೆದಿದ್ದಾರೆ. ಈ ಕವಿತೆಯ ಭಾವ–ಸಂದರ್ಭ–ಸೂಚನೆಯಲ್ಲಿ ಬೇಂದ್ರೆಯವರು ಈ ರೀತಿ ಹೇಳಿದ್ದಾರೆ : "ಧಾರವಾಡದ ಅತ್ತಿಕೊಳ್ಳದ ಚೆಲುವಿನ ನೋಟದಿಂದ ಪ್ರೇರಿತವಾದದ್ದು. ಸದಾನಂದಿಯಾದ ಜಂಗಮನೊಬ್ಬನು ಹಾಡಿದನೆಂಬಂತೆ ಬರೆದುದು". ೧೯೧೯ರಲ್ಲಿ ಧಾರವಾಡದ 'ಸ್ವಧರ್ಮ' ಪತ್ರಿಕೆಯಲ್ಲಿ ಪ್ರಕಟವಾಯಿತು. ಇಷ್ಟೇ ಅಲ್ಲ, ಈ ಕವಿತೆ ಪ್ರಕಟವಾದಾಗ ಹೊಸ ಕವಿತೆಯನ್ನು ಜನ ಹೇಗೆ ಸ್ವೀಕರಿಸುತ್ತಾರೋ ಎಂಬ ಸಂಶಯದಿಂದ 'ಅಂಬಿಕಾತನಯದತ್ತ' ಎಂಬ ತಮ್ಮ ಕಾವ್ಯನಾಮದ ಬದಲು 'ಸದಾನಂದಿ ಜಂಗಮ' ಎಂಬ ಹೆಸರಿನಿಂದಲೇ ಅವರು ಪ್ರಕಟಿಸಿದ್ದರು.

ಸಹೃದಯರು ಅದನ್ನು ಮನಸಾ ಸ್ವೀಕರಿಸಿದರಷ್ಟೇ ಅಲ್ಲ, ಬೇಂದ್ರೆಯವರು ಬೇರೆ ಬೇರೆ ಸಭೆ–ಸಮಾರಂಭಗಳಲ್ಲಿ ಆ ಕವಿತೆಯನ್ನು ತಮ್ಮದೇ ಆದ ವಿಶಿಷ್ಟ ಧಾಟಿಯಲ್ಲಿ ಹಾಡಿ ತೋರಿಸಿದಾಗ, ಅದರಂತೆಯೇ ಸಹೃದಯ ಗಾಯಕರು ಹಾಡಿ ತಮ್ಮದನ್ನಾಗಿ ಮಾಡಿಕೊಂಡದ್ದು ಈಗ ಇತಿಹಾಸ. 'ಗರಿ'ಯ ಮುನ್ನುಡಿಯಲ್ಲಿ ಬೇಂದ್ರೆಯವರೇ ಹೇಳಿದ್ದಾರೆ : "ಇಲ್ಲಿ ತುಂಗಭದ್ರೆಯ ಉತ್ತರಾಪಥದ "ದೇಶಿ"ಯ ಮಾರ್ಗವನ್ನು ಹುಡುಕುವ ಹಾಗೆಯೆ, ಹುಟ್ಟಿಸುವ ಕುರುಹಿದೆ. ಕನ್ನಡ ಜೀವಾಳವು ಕನ್ನಡಿಗರಿಗಾಗಿ ಕನ್ನಡಿಸಲ್ಪಡಬೇಕಾಗಿದೆ." ಕನ್ನಡಿಗರಿಗೆ ಭಾಷಾ ಪ್ರಜ್ಞೆಯ ಅರಿವು ಮೂಡಿಸಬೇಕಾಗಿದೆ ಎಂಬ ಮಾತು ಇಲ್ಲಿ ಸ್ಪಷ್ಟವಾಗಿದೆ.

'ಬೆಳಗು' ಕವಿತೆಯ ಮೊದಲ ನುಡಿ ನಾದಮಯವಾಗಿ, ಅರ್ಥಪೂರ್ಣವಾಗಿ ಹೀಗೆ ಹೊರಹೊಮ್ಮುತ್ತದೆ :

*ಮೂಡಲ ಮನೆಯಾ ಮುತ್ತಿನ ನೀರಿನ*
*ಎರಕಽವ ಹೊಯ್ದಾ*
*ನುಣ್ಣನ್ನೆರಕವ ಹೊಯ್ದಾ.*
*ಬಾಗಿಲ ತೆರೆದೂ ಬೆಳಕೂ ಹರಿದೂ*
*ಜಗವೆಲ್ಲಾ ತೊಯ್ದಾ*
*ಹೋಯ್ತೊ – ಜಗವೆಲ್ಲಾ ತೊಯ್ದಾ.*

ಕೊನೆಯ ನುಡಿ ಹೀಗೆ ಮುಕ್ತಾಯವಾಗುತ್ತದೆ :

*ಅರಿಯದು ಅಳವು, ತಿಳಿಯದು ಮನವು*
*ಕಾಣಽದೋ ಬಣ್ಣಾ*
*ಕಣ್ಣಿಗೆ ಕಾಣದೋ ಬಣ್ಣಾ*
*ಶಾಂತಿರಸವೇ ಪ್ರೀತಿಯಿಂದಾ*
ಮೈದೋರಿತಣ್ಣಾ
ಇದು *ಬರಿ–ಬೆಳಗಲ್ಲೋ ಅಣ್ಣಾ*

– ಹೊಸ ಪ್ರತೀಕದಿಂದಲೇ ಕವನ ಪ್ರಾರಂಭವಾಗಿ ಕೊನೆಯವರೆಗೂ – ಅಂದರೆ ಏಳು ನುಡಿ ಮುಗಿಯುವವರೆಗೂ ಒಂದು ಹೊಸತಾದ ರಸಾನುಭೂತಿಯನ್ನು ಒದಗಿಸುತ್ತದೆ. 'ಬಣ್ಣಾ' ಎಂಬ ಪದಕ್ಕೆ 'ಅಣ್ಣಾ' ಎಂಬ ಪದ ಕೇವಲ ಪ್ರಾಸಕ್ಕಾಗಿ ಬರದೆ, ಸಲಿಗೆಯ ಮಾತಿನಲ್ಲಿ ಕವಿಗಾದ ಬೆರಗನ್ನು ಸೂಚಿಸುತ್ತದೆ.

ಮಾಸ್ತಿಯವರು 'ನಾದಲೀಲೆ'ಯ ಮುನ್ನುಡಿ (೧೯೩೮)ಯಲ್ಲಿ ಈ ಕವಿತೆಯನ್ನು ಉದಾಹರಿಸಿ, "ಉದಯದ ವರ್ಣನೆಯ 'ಗಿಡಗಂಟಿಯ ಕೊರಳು' ಎಂಬ ಮಾತಿನಿಂದಲೇ ಇದನ್ನು ಉದಾಹರಿಸಬಹುದು. ಗಿಡದ ಆನಂದ, ತನ್ನ ಆನಂದ, ಗಿಡದಲ್ಲಿ ಕುಳಿತ ಹಕ್ಕಿಯ ಆನಂದ, ಬೀಸುವ ಗಾಳಿಯ ಆನಂದ ಇವು ಬೇರೆ ಬೇರೆ ಎಂದು ತಿಳಿದವನು ಅದನ್ನು ಬಿಡಿಸಿ ಬಿಡಿಸಿ ಹೇಳುತ್ತಾನೆ. ಇವುಗಳೆಲ್ಲ ಒಂದು ಆನಂದ, ನಾಲ್ಕು ಕಡೆ ಕಂಡಿರತಕ್ಕದ್ದು ಎಂದು ಬುದ್ಧಿಯಿಂದ ತಿಳಿಯುವವನು ಇದೊಂದು ವಿಚಾರ ಎಂಬಂತೆ ಹೇಳುತ್ತಾನೆ. ಇದಕ್ಕೂ ಮುಂದಿನ ಒಮ್ಮೈಯನ್ನು ಅರಿತವನು 'ಗಿಡಗಂಟಿಯ ಕೊರಳು' ಆನಂದದಿಂದ ಹಾಡಿತು ಎನ್ನುತ್ತಾನೆ. ಬಾಳೆಲ್ಲ ಒಂದು ಎನ್ನುವದು ತಿಳಿವಿಗೆ ಮಾತ್ರ ಕಂಡಾಗ ಅಲ್ಲ, ಅನುಭವದಿಂದ ಕಂಡಾಗ ಮಾತ್ರ ಈ ಮಾತು ಪ್ರಯತ್ನವಿಲ್ಲದೆ ಬರುತ್ತದೆ. ಇದು ಬರುವ ರೀತಿಯಲ್ಲಿ ಕವಿಗೆ ತನ್ನ ಮಾತು ಎಂಥ ಸಿದ್ಧಿಯ ಮಾತು ಎಂದು ತಿಳಿದಿದೆಯೇ ಇಲ್ಲವೇ ಎನ್ನುವಂಥ ಸಹಜತೆ ಬರುತ್ತದೆ. ...ಇಂಥ ಮಾತಿನಲ್ಲಿ ಮಿಗಿಲಾದ ಚಾತುರ್ಯ ಮಾತ್ರ ಇಲ್ಲ, ಪ್ರಕೃತಿಯನ್ನು ಕುರಿತು ವಿಲಕ್ಷಣ ಭಾವನೆಯಿದೆ. ವರ್ಣನೆಯ ಚಾತುರ್ಯವೆಂದು ಕಾಣುವ ಈ ಉಕ್ತಿಭಂಗಿ ಭಾವನೆಯ ಫಲ. ಈ ಭಾವನೆಯೇ ಬೇಂದ್ರೆಯವರ ಎಲ್ಲ ಕವಿತೆಯ ಬಲದ ಬೇರು" ಎಂದು ವ್ಯಾಖ್ಯಾನಿಸಿದ್ದಾರೆ. ಬೇಂದ್ರೆಯವರ ಅನುಭವದ ತೀವ್ರತೆಗೆ ತಕ್ಕಂತೆ ನಿಶಿತವಾದ ವಿಚಾರಶಕ್ತಿಯೂ ಇದೆ ಎಂಬುದನ್ನು ಈ ವ್ಯಾಖ್ಯಾನ ಪ್ರತಿಬಿಂಬಿಸಿದೆ.

"ಶ್ರೀ ಅರವಿಂದರ ಹಾಗೂ ಶ್ರೀಮಾತೆಯವರನ್ನು ಗುರುವಾಗಿ ಸ್ವೀಕರಿಸಿದನಂತರ, ಬೇಂದ್ರೆಯವರಲ್ಲಿ ಬೆಳಕಿನ ಹಂಬಲ ತೀವ್ರತೆಯನ್ನು ತಲುಪಿತು ಎನ್ನುವುದು ನಿಜವಾದರೂ ಈ ಹಂಬಲ ಅವರಲ್ಲಿ ಮೊದಲಿನಿಂದಲೂ ಜಾಗೃತವಾಗಿತ್ತು ಎನ್ನುವುದಕ್ಕೆ ಹಲವಾರು ನಿದರ್ಶನಗಳಿವೆ. ಉದಾಹರಣೆಗೆ 'ಗರಿ' ಸಂಗ್ರಹದ 'ಬೆಳಗು' ಕವಿತೆಯನ್ನೇ ನೋಡಬಹುದು" ಎನ್ನುತ್ತಾರೆ ಡಾ॥ ಜಿ. ಎಸ್. ಆಮೂರ ಅವರು. ಈ ಕವಿತೆಯ ಕೊನೆಯ ಸಾಲುಗಳಲ್ಲಿ ಪರಿವರ್ತನೆಯ ಪ್ರಕ್ರಿಯೆಯ ಸಂಕೇತವನ್ನು ಗುರುತಿಸಬಹುದು :

*ಶಾಂತೀರಸವೇ ಪ್ರೀತಿಯಿಂದಾ*
ಮೈದೋರಿತಣ್ಣಾ
ಇದು *ಬರಿ–ಬೆಳಗಲ್ಲೊ ಅಣ್ಣಾ*

ಇಲ್ಲಿ ರಸ ಹಾಗೂ ಬೆಳಕು ಇವುಗಳ ನಡುವೆ ಏರ್ಪಡುವ ಸಂಬಂಧ ಮಹತ್ವದ್ದಾಗಿದೆ. ಬೇಂದ್ರೆ ಕಾವ್ಯದಲ್ಲಿ ರಸಕ್ಕೊಂದು ಪ್ರತೀಕ ಪ್ರಪಂಚವಿದ್ದಂತೆ, ಬೆಳಕಿಗೂ ತನ್ನದೇ ಆದ ಪ್ರತಿಭಾ ಪುಂಜವಿದೆ – ಎನ್ನುತ್ತಾರೆ ಡಾ॥ ಆಮೂರ ಅವರು.

ವೈವಿಧ್ಯದಲ್ಲಿ, ಸತ್ವದಲ್ಲಿ, ಗುಣದಲ್ಲಿ, ತೇಜಸ್ಸಿನಲ್ಲಿ ಬೇಂದ್ರೆ ಕಾವ್ಯಕ್ಕೆ ಎಟುಕದ ವಸ್ತು ವಿಶೇಷವೇ ಉಳಿಯಲಿಲ್ಲವೆಂದರೂ ನಡೆಯುತ್ತದೆ. ವಸ್ತು ಎಷ್ಟೇ ಸಾಮಾನ್ಯವೆನಿಸಿದರೂ ಅದು ತನ್ನ ವಿಶೇಷತೆಯನ್ನು ಬಿಟ್ಟುಕೊಡದೆ ಭಾವ ಸಂಪತ್ತನ್ನು ಗಳಿಸಿಕೊಂಡೇ ಬರುತ್ತದೆ. ಯಾವ ವಾಗಾಡಂಬರಕ್ಕೂ ಎಡೆಗೊಡದೆ ಕಿರಿದರಲ್ಲಿ ಭಾವಗರ್ಭಿತವಾಗಿ ನಾದ ಮಾಧುರ್ಯದಿಂದ ಧ್ವನಿಪೂರ್ಣವಾಗಿ ಓದುಗರನ್ನು ಅವರ ಕಾವ್ಯ

**ನಾಡೋಜ ಡಾ॥ ಚೆನ್ನವೀರ ಕಣವಿ**



## ತಿರುಗುಣಿ

**ಪೆ**ದ್ದನೊಳಗೊಬ್ಬ ಬುದ್ಧಿವಂತ
ಮುಗ್ಧ ಮುಖದೊಳಗೊಂದು ಜಾಣತನ
ಪ್ರೀತಿ ಸ್ನೇಹದೊಳಗೆ ಸಂಚಿನ ಹೊಂಚು
ಪ್ರಜಾಸೇವೆಯಲ್ಲ ಸ್ವಾರ್ಥದ ಗೊಂಚಲು ಮಿಂಚು!

ಇಂತೀ ಬಣ್ಣಗಳ ಬೆಳಕಿನೊಳಗಣ ಕತ್ತಲ–
ನಾಟದಲ್ಲ ಸಂಬಂಧಗಳ ಜೀವತಂತು;
ದೇವ ರಾಕ್ಷಸ ಭೂತ ಮುಖವಾಡಗಳಗೇನು ಬರ,
ಅವರದೇ ಆಟ ಅವರವರ ಬದುಕಿನೆಚ್ಚರಕೆ!

ನಂಬಿದಂತಿರು ನಂಬದೆ ತೋರು ಮುಖವ
ರಕ್ಷಿಸಲು ತೊಡು ಮುಖವಾಡವನೊಂದನಾದರೂ,
ಸಿಲುಕದೆ ಜೇಡಜಾಲದಲ ನೆಲೆಯೂರು
ಮರೆಯದಿರು ನಿನ್ನೆಚ್ಚರಕೊಂದು ಆಟವ!

ಕಳುವಾಗದಂತೆ ನೆಲೆ ಕಾವಲರಿಸು
ಅವ ನಿನ್ನೊಳಗಿನ ಮುಗ್ಧನಲ್ಲ ಪೆದ್ದನೂ ಅಲ್ಲ
ಜಾಣಕ್ಕೆ ಜಾಣ, ಬುದ್ಧಿಗೆ ಬುದ್ಧಿವಂತ, ಜಾಲಕ್ಕೆ
ಪ್ರತಿಜಾಲ; ಕೈಯ ಲಾಠಿದೊಣ್ಣೆ ತಿರುಗುಣಿ ಸದಾ!

**ಡಾ॥ ಬೋರೇಗೌಡ ಚಿಕ್ಕಮರಳಿ**
'ಸಿದ್ಧಿ', ನಂ. ೫೮/೭, ಶಾಂತಿನಗರ ೨ನೇ ಹಂತ
ಪಾಂಡವಪುರ – ೫೭೧೪೩೪

ರಸಪರವಶರನ್ನಾಗಿ ಮಾಡುತ್ತದೆ. ಸೃಷ್ಟಿಯಲ್ಲಿ ಬಿಡಿಬಿಡಿಯಾಗಿ ಕಾಣುವ ಸೌಂದರ್ಯವನ್ನು ಇಡಿಯಾಗಿ ಅನುಭವಿಸಿ ಆನಂದಿಸುವ ಹಿರಿಯ ಪ್ರವೃತ್ತಿ ಇಲ್ಲಿದೆ. ಬೇಂದ್ರೆಯವರ ಅತ್ಯುಚ್ಚ ಕಲ್ಪನೆ ವಿಶ್ವರೂಪಕಗಳನ್ನು ಬಳಸಿದಾಗ ಅದರ ಭವ್ಯತೆಯ ಅರಿವೂ ನಮಗಾಗುತ್ತದೆ.

ಕವಿತೆಯಲ್ಲಿ ಭಾಷೆಯನ್ನು ಒಂದು ಸೂತ್ರಕ್ಕನುಸರಿಸಿ ಪ್ರಯೋಗಿಸಲಾಗಿದೆ ಎಂದು ಅನಿಸಿದರೂ ನಿಜವಾದ ಕವಿತೆ ಇಂಥ ಪ್ರಯೋಗವನ್ನು ಉಲ್ಲಂಘಿಸಿರುತ್ತದೆ. ಅದರ ವಿಧಾನವನ್ನು ವಿವರಿಸಲೂ ಎಷ್ಟೋ ಸಲ ಸಾಧ್ಯವಾಗುವುದಿಲ್ಲ. ಭಾಷೆಯ ವ್ಯಂಜಕ ಸಾಮರ್ಥ್ಯವನ್ನು ಸೂರೆಗೊಂಡ ಪದಗಳನ್ನು ತಮಗೆ ಬೇಕಾದಂತೆ ಮಾರ್ಪಡಿಸಿಕೊಂಡ ಬೇಂದ್ರೆ ಕಾವ್ಯದ ವಿಷಯದಲ್ಲಂತೂ ಈ ಬಗೆಯ ಉಲ್ಲಂಘನೆ ಇನ್ನೂ ಹೆಚ್ಚಿನ ಪ್ರಮಾಣದಲ್ಲಿ ಕಂಡುಬರುತ್ತದೆ.

ಹೊಸಗನ್ನಡ ಕಾವ್ಯಕ್ಕೆ ಯಾವುದೇ ಸಿದ್ಧಭಾಷೆ ಇನ್ನೂ ರೂಪುಗೊಂಡಿರದ ಸಂದರ್ಭದಲ್ಲಿ, ಭಾಷೆಯ ಮಡಿವಂತಿಕೆಯಿಂದ ಹೊರಬಂದು, ಆಡುನುಡಿಯನ್ನು, ಜನಪದ ಭಾಷೆಯನ್ನು ಕಾವ್ಯಕ್ಕೆ ಒಗ್ಗಿಸಿಕೊಂಡ, ಬಗ್ಗಿಸಿಕೊಂಡ ನಿರ್ಧಾರ ಹಾಗೂ ಅದರಲ್ಲಿ ಪಡೆದ ಕಣ್ಣು ಕುಕ್ಕುವಂಥ ಯಶಸ್ಸು ಕನ್ನಡ ಸಾಹಿತ್ಯದ ದೃಷ್ಟಿಯಿಂದ ಒಂದು ಐತಿಹಾಸಿಕವಾದ ಮಹತ್ವದ ಸಂಗತಿಯಾಗಿದೆ. ಬೇಂದ್ರೆಯವರು ಆಡುಭಾಷೆಯ ಮೂಲಕ್ಕಿರುವ ಕಾವ್ಯಪ್ರಜ್ಞೆಯನ್ನು ಉಪಯೋಗಿಸಿಕೊಂಡು, ಹೊಸ ಕಾವ್ಯವನ್ನು ಸೃಷ್ಟಿಸಿರುವುದು ಅಪೂರ್ವವಾದದ್ದು ಎಂದಿರುವ ಕೀರ್ತಿನಾಥ ಕುರ್ತಕೋಟಿಯವರು ಶಬ್ದ, ಛಂದ, ನಾದ, ಧ್ವನಿ – ಇವು ನಾಲ್ಕೂ ಕೂಡಿಕೊಂಡು ಒಂದು ಸ್ವತಂತ್ರ ರಚನೆಯಾಗಿ ಅವರ ಭಾವಗೀತದ ಶಿಲ್ಪ ರೂಪುಗೊಂಡಿರುವುದನ್ನು ಸರಿಯಾಗಿಯೇ ಗುರುತಿಸಿದ್ದಾರೆ. ಈ ಶಿಲ್ಪ ಕೌಶಲ್ಯದಿಂದ ಕಾವ್ಯರೂಪದ ಸಾಧ್ಯತೆಗಳನ್ನು ಬೇಂದ್ರೆಯವರು ವಿಸ್ತರಿಸಿದ್ದಲ್ಲದೆ ಅದರಲ್ಲಿ ತಮ್ಮ ವೈಯಕ್ತಿಕತೆಯನ್ನು ಅನನ್ಯವಾಗಿ ಉಳಿಸಿಕೊಂಡುದನ್ನು 'ಬೆಳಗು' ಕವಿತೆಯಲ್ಲಿಯೂ ನಾವು ಕಾಣಬಹುದು.

ಕಾವ್ಯದಲ್ಲಿ ನಾರಿಕೇಳಪಾಕ, ಕದಳೀಪಾಕ, ದ್ರಾಕ್ಷಾಪಾಕ ಮೊದಲಾದವುಗಳನ್ನು ನಮ್ಮ ಪ್ರಾಚೀನ ಕಾವ್ಯಮೀಮಾಂಸಕರು ಗುರುತಿಸಿದ್ದಾರೆ. ಆಧುನಿಕ ಕನ್ನಡ ಕಾವ್ಯದಲ್ಲಿ ತಮ್ಮದೇ ಆದ ವಿಶಿಷ್ಟ ಗುಣಗಳಿಂದ ಕೂಡಿದ ಒಂದು ಹೊಸ ರುಚಿಯನ್ನು ಒದಗಿಸಬಲ್ಲ 'ಬೇಂದ್ರೆ ಪಾಕ' ಎಂಬುದನ್ನು ಇಲ್ಲಿ ಎತ್ತಿ ಹೇಳಬಹುದಾಗಿದೆ. ಅವರ ಕಾವ್ಯದ ಪದಾರ್ಥವನ್ನು ಅವರ ಅನುಭವದ ರೊಟ್ಟಿಯ ಜೊತೆಗೆ ಸವಿಯಬೇಕಾದದ್ದು. ನಾವು ನುರಿಸಿದಂತೆ ಅದರ ರುಚಿ ಹೆಚ್ಚುತ್ತ ಹೋಗುತ್ತದೆ. ನಮ್ಮ ಪಾಚಕಶಕ್ತಿಯನ್ನು ಹೆಚ್ಚಿಸುವ ರೋಚಕತೆಯೂ ಅದಕ್ಕಿದೆ. ನಮ್ಮ ಹಸಿವನ್ನು ಹಿಂಗಿಸಿಕೊಂಡೆವೆಂದರೂ ಬೇಂದ್ರೆ ಪಾಕ ಬೇರೊಂದು ಹಸಿವನ್ನು ಹುಟ್ಟಿಸುತ್ತದೆ. ಹೀಗೆ ನೂರು ವರುಷಗಳ ಹಿಂದೆಯೇ 'ಬೆಳಗು' ಕವಿತೆಯನ್ನು ಬರೆದು, ನವೋದಯಕ್ಕೆ ಬೆಳಕಾಗಿಸಿದ ಬೇಂದ್ರೆಯವರಿಗೆ ಸಾವಿರದ ನಮನಗಳು.

ಈ 'ಬೆಳಗು' ಕವಿತೆಗೆ ಪ್ರೇರಣೆ ನೀಡಿದ್ದು ಧಾರವಾಡದ ಅತ್ತಿಕೊಳ್ಳದ ಚೆಲುವಿನ ನೋಟ. ನೂರು ವರುಷದ ಮೇಲೆ ಈಗ ಅತ್ತಿಕೊಳ್ಳ ಹೇಗೆ ಕಾಣಿಸುತ್ತದೆ ಎಂಬುದನ್ನು 'ಅತ್ತಿಕೊಳ್ಳದಲ್ಲಿ ಸೂರ್ಯ' ಎಂಬ ನನ್ನ ಸಾನೆಟ್ಟಿನಲ್ಲಿ ಅದಕ್ಕೆ ಸೃಜನಶೀಲ ಪ್ರತಿಕ್ರಿಯೆಯಾಗಿ ಚಿತ್ರಿಸಿದ್ದೇನೆ. ಈ ಕವಿತೆ ನನ್ನ 'ಬರೆದು ತೀರದ ಬದುಕು' ಎಂಬ ಸಂಗ್ರಹದಲ್ಲಿ (೨೦೦೦) ಪ್ರಕಟವಾಗಿದೆ:

### ಅತ್ತಿಕೊಳ್ಳದಲ್ಲಿ ಸೂರ್ಯ

*ಬೇಂದ್ರೆ 'ಬೆಳಗಿ'ನ ಅತ್ತಿಕೊಳ್ಳದಲ್ಲಿ ಸಾವಿರ*
*ಮಂದಿ ಬಡಬಗ್ಗರು ಮನೆಕಟ್ಟಿ, ಅಲ್ಲಲ್ಲಿ*
*ಗುಡಿಕಟ್ಟಿ, ಸುತ್ತುಗುಡ್ಡಗಳ ಇಳಿಜಾರಿನಲ್ಲಿ*
*ಸಂಸಾರ ಹೂಡಿ, ದಸದಸ ತೇಕಿ ಮೇಲೇರ*
*ಬಯಸುವ ಬಸ್ಸಿನೊಡನೆ ಸೆಣಸಾಡಿ–ಸಂಚಾರ,*
*ಮೂಡಲ ಮನೆಯ ಬಾಗಿಲ ತೆರೆದು, ಸೂರ್ಯ ಹಣಕಿ–*
*ದರೆ, ನಳದಲ್ಲಿ ಮುತ್ತಿನ ಹನಿಗೆ ಕೊಡಗಳು ಬಾಕಿ.*
*ಗಡಬಡಿಸಿ ಶ್ರಾವಣದ ಮೋಡಗಳ ಸಮಾಚಾರ*
*ಕೇಳಿ, ನಡುನೆತ್ತಿಗೈತಂದು, ಕೊಳಚೆ–ಕೊಂಪೆಗೆ*
*ಮುಖವ ಸಿಂಡರಿಸಿ, ಹಿಂದಿನ ಗಂಧರ್ವ ಸೀಮೆ*
*ನೆನೆದು, ಗಿಡಗಂಟಿಗಳ ಕೊರಳ ಹಾಡಿನ ಭ್ರಮೆ–*
*ಯಲ್ಲಿ, ಸಂಜೆಗೆ ಬಳಿದ ರಾಗ ಮುಗಿಲ ಮಾರಿಗೆ*
*ಕಾಂಕ್ರೀಟು ಕಾಡಿನಲಿ, ಕಣ್ಗೆ ಬಡಿಯುವ ಬಣ್ಣ*
*ಅರಿಯದಳವಿಗೆ ಟೀವಿಯಲಿ ಮೈದೋರಿತಣ್ಣ.*

**ನಾಡೋಜ ಡಾ॥ ಚೆನ್ನವೀರ ಕಣವಿ**
'ಚೆಂಬೆಳಕು', ೯ನೆಯ ಅಡ್ಡರಸ್ತೆ, ಕಲ್ಯಾಣ ನಗರ, ಧಾರವಾಡ – ೫೮೦ ೦೦೭

# ಇನ್ಮೇಲೆ ನಾನೂ ನೀನೂ ದೂರ ಇರೋಣ

**ಡಾ॥ ಎಚ್. ಎಸ್. ಅನುಪಮಾ**

**ಅ**ಧ್ಯಾತ್ಮ, ಆಹಾರ, ಬ್ರಹ್ಮಚರ್ಯ ಈ ಮೂರರ ಬಗೆಗೆ ನನ್ನ ಗಂಡ ಸದಾ ಪ್ರಯೋಗ ಮಾಡಿದರು. ಉಪವಾಸದ ರುಚಿಯನ್ನು ನಾಲಿಗೆಗಷ್ಟೇ ಅಲ್ಲ, ದೇಹಕ್ಕೂ ತೋರಿಸಿದರು. ಆದರೆ ಆಗಲೂ, ಈಗಲೂ, ಬ್ರಹ್ಮಚರ್ಯ ಎಂಬ ಒಂದು ವಿಷಯ ಕುರಿತು ಅವರನ್ನು ಅರ್ಥ ಮಾಡಿಕೊಳ್ಳಲು ತುಂಬ ಜನರಿಗೆ ಕಷ್ಟವಾಗಿದೆ. ಅದೇ ವಿಷಯಕ್ಕಾಗಿ ಕೆಲವರು ಬೈಯುತ್ತಾರೆ, ಕೆಲವರು ಪೂಜಿಸುತ್ತಾರೆ. ಕಾಮವೂ ಒಂದು ಪುರುಷಾರ್ಥ, ಈ ಭೂಮಿ ತಿರುಗುವಂತೆ ಮಾಡಿರುವುದು ಅದೇ ಎಂದು ಇಡೀ ಲೋಕ ನಂಬಿರುವಾಗ ಬ್ರಹ್ಮಚರ್ಯ ಕುರಿತ ಅವರ ವಿಚಾರಗಳು, ಅದೂ ಒಬ್ಬ ರಾಜಕಾರಣಿಯ ಬಾಯಿಯಿಂದ ಬಂದಾಗ ಸಂಪೂರ್ಣ ವಿರುದ್ಧ ಪ್ರತಿಕ್ರಿಯೆ ಹುಟ್ಟುವುದು ಸಹಜವೇ. ಅಲ್ಲವೇ ಮಗೂ?

ಹೌದಪ್ಪನ ಚಾವಡೀಲಿ ಹೌದಪ್ಪ, ಅಲ್ಲಪ್ಪನ ಚಾವಡೀಲಿ ಅಲ್ಲಪ್ಪನ ತರಹ ಅಲ್ಲ ನನ್ನ ಗಂಡ. ಅವರಿಗೆ ಹೇಗೆ ಆಗಬೇಕೋ ಹಾಗೇ ಆಗಬೇಕು. ಅದೂ ನಿಯಮಪ್ರಕಾರ ಸರಿಯಾಗಿ ಆಗಬೇಕು. ಆಗುವ ದಾರಿಗಳೇನು ಸುಲಭದವೇ? ಕಡುಕಠಿಣ ದಾರಿಯನ್ನೇ ಆಯುತ್ತಿದ್ದರು. ದಾರಿ ಮೇಲಿನ ಬಂಡೆಕಲ್ಲುಗಳನ್ನು ಬೆಣಚುಕಲ್ಲೋ ಅನ್ನುವಂತೆ ಸರಿಸುತ್ತಿದ್ದರು. ಸತ್ಯಾಗ್ರಹದ ಹಾದಿಯಲ್ಲಿ ಬಾಪು ಹಾಗೆ ಎತ್ತಿ ಅತ್ತ ಸರಿಸಿ ಇಟ್ಟ ಬೃಹತ್ ಶಿಲೆ ಬ್ರಹ್ಮಚರ್ಯದ್ದು.

ದೇವದಾಸನಿಗೆ ಐದೋ ಆರೋ ವರ್ಷ. ೧೯೦೬ ಇರಬೇಕು. ಆಗ ನಾವು ಜೋಹಾನ್ಸ್‌ಬರ್ಗಿನಲ್ಲಿದ್ವಿ. ಫೀನಿಕ್ಸ್ ಆಶ್ರಮ ಶುರುವಾಗಿದ್ದರೂ ನಾವಿನ್ನೂ ಅಲ್ಲಿಗೆ ಹೋಗಿರಲಿಲ್ಲ. ಭಾಯಿ ಆಶ್ರಮಕ್ಕೂ, ಮನೆಗೂ ಓಡಾಡೋರು. ಸತ್ಯಾಗ್ರಹ, ಪತ್ರಿಕೆ, ಪತ್ರ ವ್ಯವಹಾರ, ಹೋರಾಟ, ಕೋರ್ಟುಕಟ್ಲೆ ಅಂತ ತುಂಬ ಕೆಲಸ. ಪುರುಸೊತ್ತೇ ಇಲ್ಲ ಅವರಿಗೆ. ಇನ್ನು ಮಕ್ಕಳು ಸಾಕು ಅಂತ ನಿರ್ಧಾರ ಮಾಡಿದ್ದೆವು. ನನ್ನ ಮುಟ್ಟಿನ ದಿನದ ಲೆಕ್ಕವಿಟ್ಟು ಗರ್ಭ ಕಟ್ಟದ ಸುರಕ್ಷಿತ ದಿನಗಳಲ್ಲಿ ದೇಹ ಸಂಬಂಧ ನಡೆಯುತ್ತಿತ್ತು. ಆದರೆ ಅದಕ್ಕೂ ತೊಂದರೆಯಾಗುತ್ತಿತ್ತು. ಅಂಥ ದಿನಗಳಲ್ಲಿ ಒಂದೋ ನನಗೆ ರಕ್ತಸ್ರಾವ, ದಮ್ಮು, ನಿತ್ರಾಣ ಮುಂತಾಗಿ ಆರಾಮ ತಪ್ಪುತ್ತಿತ್ತು. ಅಥವಾ ನಾನು ಆರಾಮವಿರುವಾಗ ಅವರು ಊರಲ್ಲಿರುತ್ತಿರಲಿಲ್ಲ.

ಅದೇ ಹೊತ್ತಿಗೆ ದಕ್ಷಿಣ ಆಫ್ರಿಕೆಗೆ ಬಂದಿದ್ದ ನಮ್ಮ ಮೊದಲ ಮಗ ಹರಿ, ತನ್ನ ಅಪ್ಪ ಅಮ್ಮನಿಗೂ ಕಾಯದೇ, ಹೇಳದೇ, ಭಾರತಕ್ಕೆ ಹೋಗಿ ದೊಡ್ಡಪ್ಪನ ಬಳಿ ಮದುವೆ ಮಾಡಿಸಿಕೊಂಡುಬಿಟ್ಟಿದ್ದ. ಅವನು ಪ್ರೀತಿಸಿದ್ದ ಗುಲಾಬ್ ಅಥವಾ ಚಂಚಲಳ ಜೊತೆಗೆ. ಅದು ಅವನ ಅಪ್ಪನನ್ನು ಎಷ್ಟು ಬೇಜಾರು ಮಾಡಿತು ಎಂದು ಹೇಳಲು ಸಾಧ್ಯವಿಲ್ಲ. ಸತ್ಯಾಗ್ರಹದ ಇಷ್ಟು ಕೆಲಸಗಳಿರುವಾಗ ತಮ್ಮ ಮಗ ಹಿಂದೂಸ್ತಾನಕ್ಕೆ ಹೋಗಿ ಅವಸರದಲ್ಲಿ ಮದುವೆ ಆದನಲ್ಲ? ತಮ್ಮ ಮಗನಾಗಿ ಅಷ್ಟು ದೇಹಲಾಲಸೆ ಅವನಿಗೆ ಹೇಗೆ ಬೆಳೆಯಿತು? ಅನ್ನುವ ಕೊನೆ ಮೊದಲಿರದ ಜಿಜ್ಞಾಸೆ ಅವರದು. ಕೋಪವೋ, ಬೇಸರವೋ, ತಿರಸ್ಕಾರವೋ, ವೈರಾಗ್ಯವೋ ಎಂಥದು ಅಂತ ಸರಿಯಾಗಿ ಹೇಳಲಾಗದ ಭಾವವೊಂದು ಅವರನ್ನು ಆವರಿಸಿಕೊಂಡುಬಿಟ್ಟಿತು. ಅವರ ಜೊತೆ ಮಾತನಾಡಲಿಕ್ಕೇ ನನಗೆ ಭಯ, ಮುಜುಗರ. ಅದನ್ನು ಮರೆಯಲೋ ಅನ್ನುವಂತೆ ಹೆಚ್ಚೆಚ್ಚು ಕೆಲಸದಲ್ಲಿ ತೊಡಗಿದರು. ಕಲೆನ್‌ಬಾಕ್, ಹೆನ್ರಿ ಪೊಲಾಕ್ ಅವರ ಜೊತೆ ನಡುರಾತ್ರಿಯವರೆಗೂ ಮಾತುಕತೆ, ಸತ್ಯಾಗ್ರಹದ ರೂಪುರೇಷೆ ಸಿದ್ಧಗೊಳಿಸುತ್ತಿದ್ದರು. ಬರವಣಿಗೆ ಮಾಡುತ್ತಿದ್ದರು. ಒಮ್ಮೊಮ್ಮೆ ಇದ್ದಕ್ಕಿದ್ದಂತೆ ಮೌನಕ್ಕೆ ಜಾರುತ್ತಿದ್ದರು.

ಹೀಗಿರುತ್ತ ಒಂದು ದಿನ, ಕಲೆನ ಫೀನಿಕ್ಸಿಗೆ ಹೋಗಿದ್ದ. ಮಿಲಿ, ಹೆನ್ರಿ ತಮ್ಮ ಮನೆಗೆ ಹೋಗಿದ್ದರು. ಮಕ್ಕಳು ಮಲಗಿದ್ದರು. ರಾತ್ರಿಯ ವೇಳೆ. ಗಾಂಧಿ ಭಾಯಿ ಕೋಣೆಯೊಳ ಬಂದವರೇ ಬಾಗಿಲಲ್ಲಿ ನಿಂತು, 'ಕಸ್ತೂರ್, ಒಂದು ಮಾತು ಕೇಳಲಾ?' ಅಂದರು. ಏನೋ ಬಂತಲ್ಲಪ್ಪ, ಹರಿಯ ವಿಷಯ ಏನಾದರೂ ಇರಬಹುದೆ ಅಥವಾ ನಾನೇನಾದರೂ ತಪ್ಪು ಮಾಡಿದೆನೆ ಅಂತ ಹುಡುಕಿಕೊಳ್ಳುತ್ತ ಅವರ ಕಡೆಗೆ ನೋಡಿದೆ. 'ಇನ್ಮೇಲೆ ನಾನೂ ನೀನು ಬೇರೆಬೇರೆ ಮಲಗುವಾ, ಬ್ರಹ್ಮಚರ್ಯ ಸ್ವೀಕರಿಸುವಾ ಅಂತ ಅನಿಸುತ್ತ ಇದೆ, ಆಗಬೋದಾ?' ಅಂದರು. ನನಗೆ ಒಂದುಸಲ ನಾನು ಕೇಳಿದ್ದು ಏನು ಅಂತ ತಲೆಯೊಳಗೇ ಹೋಗಲಿಲ್ಲ, ಕಣ್ಣುಕಣ್ಣು ಬಿಟ್ಟು ಆಂ ಅಂದೆ. ಮತ್ತೆ ಹೇಳಿದರು. ಎದೆ ಧಸಕ್ ಅಂದು ಒಡೆದ ಹಾಗೆ ಆಯಿತು. ರಾತ್ರಿ ಎಷ್ಟೊತ್ತಿಗೆ ಆದೀತೋ ಅಂತ ಕಾಯ್ತಿದ್ದ ನನ ಗಂಡ, 'ಸಾಕಪ್ಪ ಸಾಕು, ಇವನು ಎಲ್ಲಾದ್ರು ಹೋದ್ರೆ ಹೋಗ್ಲಿ' ಅಂತ ನನಗನಿಸುವಂತೆ ಮಾಡಿದ ಗಂಡ ಈಗ ಹೀಗೆನ್ನುತ್ತ ಇದಾನೆ! ಅದೂ ಐದು ಮಕ್ಕಳು ಹುಟ್ಟಿದ ಮೇಲೆ ಬ್ರಹ್ಮಚರ್ಯ ಅಂತಿದಾನೆ.

'ಏನಾಯ್ತು ಇದ್ದಕ್ಕಿದ್ದಂಗೆ, ನಾ ಏನಾದರೂ ತಪ್ಪು ಮಾಡಿದ್ನಾ' ಅನ್ನುವುದೇ ಮೊದಲು ತಲೆಯೊಳಗೆ ಬಂದದ್ದು. ಒಂದು ಚಣ ನನ್ನನ್ನೇ ನಾನು ಕಣ್ಮುಂದೆ ತಂದು ಪರೀಕ್ಷೆ ಮಾಡಿಕೊಂಡೆ. ನನ್ನ ಕಾಯಿಲೆ, ಕಸಾಲೆ, ಕಿರಿಕಿರಿಯಿಂದ ಬೇಸತ್ತು ಇವನೇನಾದರೂ ಬೇರೆ ಯಾರ ಮೇಲಾದರೂ ಮನಸ್ಸು ಇಟ್ಟಿದಾನಾ ಅನಿಸಿತು. ಅದಕ್ಕೆ ಸರಿಯಾಗಿ ಭಾಯಿಯ ಸುತ್ತಮುತ್ತ ತುಂಬ ಹೆಣ್ಣುಮಕ್ಕಳಿದ್ದರು. ಆದರೆ ಹೀಗೆ ಯೋಚನೆ ಬಂದ ಮರುಕ್ಷಣವೇ ನನ್ನ ಮೇಲೇ ನನಗೆ ನಾಚಿಕೆಯಾಯಿತು. ಆ ಹೆಣ್ಣುಜೀವಗಳಾರೂ ಅಂಥವರಲ್ಲ, ನೋಡಿದರೇ ಗೊತ್ತಾಗುತ್ತಿತ್ತು. ನಮ್ಮ ಮಿಲಿ, ಸೊನ್ಯಾ, ದೇವಿ ಅವರೆಲ್ಲ ಹೆಂಡತಿಯನ್ನು ಹೀಗೆ ನಡೆಸಿಕೊಳ್ತೀಯಲ್ಲ ಅಂತ ಭಾಯಿಗೇ ತಿವಿಯೋರು. ಭಾಯಿ ಕೂತಲ್ಲಿಂದ ನನಗೇನಾದರೂ ಕೆಲಸ ಹೇಳಿದರೆ, ಮಾಡಿದ್ದು ಏನೋ



ಸರಿಯಾಗಲಿಲ್ಲ ಅಂದರೆ ಸಾಕು, ಶುರು ಮಾಡೋರು. ಛೆ, ಅವರ್‍ಯಾರೂ ಭಾಯಿಯನ್ನು ಮರುಳು ಮಾಡಿರಲಿಕ್ಕಿಲ್ಲ. ಮತ್ತೆ ನನ್ನ ಗಂಡನೂ ಅಂಥವನಲ್ಲ. ಅಥವಾ ನನ್ನ ಮೇಲೇನಾದರೂ ಅನುಮಾನ ಬಂದು ಹೀಗೆ ಹೇಳ್ತಿರಬಹುದೇ? ಆದರೆ ಅನುಮಾನ ಬರಲಿಕ್ಕೆ ಇರುವುದಾದರೂ ಏನು ಈ ಭಾಷೆ ಬರದ ಊರಿನಲ್ಲಿ? ಮೊದಲೊಂದು ಕಾಲವಿತ್ತು. ಬೇರೆ ಗಂಡಸರ ನೋಡಬೇಡ, ಅವರ ಬಳಿ ಮಾತನಾಡಬೇಡ, ನಗಬೇಡ ಅಂತೆಲ್ಲ ನನ್ನ ಗಂಡ ಬೇಲಿ ಕಟ್ಟುತ್ತಿದ್ದರು. ಈಗವರು ತುಂಬ ಬದಲಾದ ವ್ಯಕ್ತಿ. ಹಾಗೂ ಇರಲಿಕ್ಕಿಲ್ಲ. ಮತ್ತೇಕೆ ಈಗ ಬ್ರಹ್ಮಚರ್ಯದ ಮಾತು?

ಏನು ಮಾತನಾಡುವುದು ಅಂತಲೇ ತೋಚಲಿಲ್ಲ, ಸುಮ್ಮನಿದ್ದುಬಿಟ್ಟೆ. ಅವರಿಗೆ ಏನನಿಸಿತೋ, ಅಲ್ಲೇ ಕಾಟಿನ ಕೆಳಗೆ ಒಂದು ಚಾಪೆಯೆಳೆದು ಹಾಸಿಕೊಂಡು ಮಲಗಿ ಬಿಟ್ಟರು. ಅವತ್ತು ರಾತ್ರಿಯಿಡೀ ನಾನು ನಿದ್ದೆ ಮಾಡಲಿಲ್ಲ. ಅವರಿಗೂ ಬಂದ ಹಾಗಿಲ್ಲ.



ಒಂದು ಕ್ಷಣದ ಏರಿಕೆಗೆ ಹೀಗೆ ಹೇಳಿರಬಹುದು ಎಂದುಕೊಂಡೆ. ಆದರೆ ಇಲ್ಲ, ನನ್ನ ಗಂಡನ ಬಾಯಿಂದ ಏನಾದರೂ ಒಂದು ಹೊರಬಂತು ಅಂದರೆ ಮುಗಿಯಿತು. ಅದು ಪಕ್ಕಾ. ಒಂದೇ ಕೋಣೆಯಲ್ಲೇ ನಾನು ಮಂಚದ ಮೇಲೆ ಹಾಸಿಗೆಯಲ್ಲಿ ಮಲಗುವುದು, ಅವರು ಕೆಳಗೆ ನೆಲದ ಮೇಲೆ ಚಾಪೆ ಹಾಸಿ ಮಲಗುವುದು ಮುಂದುವರೆಯಿತು. ಸ್ವಲ್ಪ ದಿವಸಕ್ಕೆ ನಮ್ಮನ್ನೆಲ್ಲ ಫೀನಿಕ್ಸ್ ಆಶ್ರಮಕ್ಕೆ ಕರೆದುಕೊಂಡು ಹೋಗುವುದಾಗಿ, ಇನ್ನು ಆಶ್ರಮದಲ್ಲಿರಬೇಕಾಗುವುದಾಗಿ ತಿಳಿಸಿದರು. ಫೀನಿಕ್ಸಿಗೆ ಹೊರಡುವ ಮುಂಚಿನ ರಾತ್ರಿ, ಭಾಯಿ ಜಗಲಿಯಲ್ಲಿ ಏನೋ ಬರೆಯುತ್ತ ಕೂತಿದ್ದರು. ಅವರ ಬಳಿ ಹೋದೆ. ನನ್ನ ಕಡೆ ಒಮ್ಮೆ ನೋಡಿ ನಸುನಕ್ಕು ತಮ್ಮ ಕೆಲಸ ಮುಂದುವರೆಸಿದರು. ಹತ್ತಾರು ನಿಮಿಷ ಕಳೆಯಿತು. ಬರವಣಿಗೆ ಮುಗಿಸಿ, ದವತಿ–ಕುಡಿಕೆ ಆಚೆ ಎತ್ತಿಟ್ಟು, ನೆಲದ ಮೇಲೆ ತಮ್ಮ ಚಾಪೆ ಹಾಸಿ, ಮಲಗಲು ಸಿದ್ಧ ಮಾಡಿಕೊಳ್ಳತೊಡಗಿದರು. ಯಾವ ಹೆಂಡತಿಯಾದರೂ ಇಂಥ ಪರಿಸ್ಥಿತಿ ಎದುರಿಸಿದ್ದಾಳೋ ಇಲ್ಲವೋ, ಇಂಥ ವಿಷಯ ಗಂಡನೊಡನೆ ಮಾತಾಡುತ್ತಾಳೋ ಇಲ್ಲವೋ ಗೊತ್ತಿಲ್ಲ. ನಾನು ಲಜ್ಜೆ ಬಿಟ್ಟು ಕೇಳೇಬಿಟ್ಟೆ:

'ಇನ್ನುಮೇಲೆ ಬ್ರಹ್ಮಚರ್ಯ ಪಾಲಿಸೋಣ ಎಂದಿರಿ, ಆದರೆ ಪತ್ನಿಯಾಗಿ ನಿಮ್ಮ ದೈಹಿಕ ಬಯಕೆ ತೀರಿಸುವುದು ನನ್ನ ಕರ್ತವ್ಯವಲ್ಲವೆ?'

'ಪತಿಯಾಗಿ ನಿನ್ನ ದೇಹದ ಬಯಕೆ ತೀರಿಸುವುದೂ ನನ್ನ ಕರ್ತವ್ಯ ಅಲ್ಲವೆ?'

'ಹೌದು, ಆದರೆ ನನಗೇನೂ ಅಂತಹ ದೇಹದ ಬಯಕೆಯಿಲ್ಲ. ಆಗಲೂ, ಈಗಲೂ ಅಷ್ಟಕ್ಕಷ್ಟೇ, ನೀವೇ ನೋಡಿದ್ದೀರಿ ನನ್ನ ಸ್ವಭಾವ. ಆದರೆ ನೀವು ಹೇಗಿದ್ದಿರಿ ಅಂತ ನೆನಪಿಸಿಕೊಳ್ಳಿ.'

'ಹೌದು ಕಸ್ತೂರ್. ಪ್ರಾಯದ ಅಜ್ಞಾನದ ದಿನಗಳವು. ಅದಕ್ಕೇ ಪ್ರಾಯಶ್ಚಿತ್ತ ರೂಪವಾಗಿ ನಿನ್ನ ಸೇವೆ ಎಷ್ಟು ಮಾಡಿದರೂ ತೀರುವುದಿಲ್ಲ. ಹಾಗಾಗಿಯೇ ನನ್ನ ದೇಹದ ಬಯಕೆ ನಿಗ್ರಹಿಸುವ ನಿರ್ಧಾರ ಮಾಡಿದ್ದು. ಹೇಗೆ ನಿನ್ನೊಡನೆ ಕಳೆಯಲು ಖಾಸಗಿ ಸಮಯ ಹೊಂದಿಸಿಕೊಳ್ಳಲಿ ಎನ್ನುವುದರಲ್ಲೇ ನನ್ನ ಗಮನ, ಶ್ರಮ, ಸಮಯ ಎಲ್ಲ ಕಳೆದರೆ ಸತ್ಯಾಗ್ರಹಕ್ಕೆ ಅರ್ಥವಿಲ್ಲ. ಹಾಗಾಗಿ ಇಬ್ಬರೂ ಪರಸ್ಪರ ಒಪ್ಪಿಗೆಯಿಂದ ಬ್ರಹ್ಮಚರ್ಯ ಸ್ವೀಕರಿಸೋಣ ಅನಿಸಿತು.'

'ದೇಹ ದೂರವಾದರೆ ಮನಸ್ಸೂ ದೂರವಾದಂತೆ ಅಲ್ಲವೆ? ದೇಹಕ್ಕಿಂತ ಹೆಚ್ಚು ಈ ದೇಹದಿಂದ ಹೊರಬಂದ ಮಕ್ಕಳಿಂದ, ಕುಟುಂಬದಿಂದ ದೂರವಾಗುತ್ತೀರಿ ಎಂಬ ಭಯ ನನಗೆ.'

'ಹುಚ್ಚಿ, ದೂರವಾಗಿ ಎಲ್ಲಿ ಹೋಗಲಿ? ನೀನೆಲ್ಲೋ, ನಾನಲ್ಲೇ. ನಾನೆಲ್ಲೋ, ನೀನಲ್ಲೇ. ಮದುವೆ, ಪತಿಪತ್ನಿ ಸಂಬಂಧ ಎಂದರೆ ಆಟವಲ್ಲ, ಬರಿಯ ದೇಹ ಕೂಡುವಿಕೆಯ ನಿಭಾವಣೆಯೂ ಅಲ್ಲ. ಮದುವೆಗಳು ಸ್ವರ್ಗದಲ್ಲಿ ಆಗುತ್ತವೆ ಎಂಬ ಮಾತು ಕೇಳಿಲ್ಲವಾ ನೀನು?'

'ಆದರೆ ಇದ್ದಕ್ಕಿದ್ದ ಹಾಗೆ ಯಾಕೆ ಈ ತೀರ್ಮಾನಕ್ಕೆ ಬಂದಿರಿ?'

'ಇದು ಇದ್ದಕ್ಕಿದ್ದ ಹಾಗೆ ಬಂದ ತೀರ್ಮಾನವಲ್ಲ ಕಸ್ತೂರ್. ಒಂದು ದೇಹದೊಡನೆ ಸಮಾಗಮ ಸಾಧಿಸಬೇಕಾದರೆ ಅದೆಷ್ಟು ಸಾಧನೆ ಮಾಡಬೇಕೋ ಬ್ರಹ್ಮಚರ್ಯ ಸಾಧನೆಗೆ ಅದರ ನೂರುಪಟ್ಟು ದೃಢವಿರಬೇಕು! ಇಲ್ಲಿ ನೋಡು, ನಿನ್ನೊಡನೆ ಕಳೆಯುವ ಆ ಒಂದು ಗಳಿಗೆಗೆ ಎಷ್ಟು ಕಾಯಬೇಕಿತ್ತು? ಅದಕ್ಕಾಗಿ ಸಮಯ, ನಿನ್ನ ಆರೋಗ್ಯ ಕೂಡಿ ಬರಬೇಕು. ಮಕ್ಕಳಿಗೆ ನಿದ್ರೆ ಹತ್ತಿರಬೇಕು. ಏಕಾಂತ ಅನುಭವಕ್ಕೆ ಸಿಗಬೇಕು. ಮನದಿಚ್ಛೆ ಕೆರಳಿಸಬೇಕು. ಎಷ್ಟೊಂದು ವಿಷಯಗಳ ಕಡೆಗೆ ಗಮನ ಹರಿಸಬೇಕು ನೋಡಿದೆಯಾ? ಆದರೆ ಇವೆಲ್ಲ ಯಾತಕ್ಕೆ? ಕೇವಲ ದೇಹದ ಉದ್ರೇಕದ ಶಮನಕ್ಕೆ. ಶಮನ ಎಷ್ಟು ಗಳಿಗೆಯದು? ಎರಡು ಕ್ಷಣ. ಕಾಯ ಸುಖದ ಅಮಲಿಗೆ ಮತ್ತೆಮತ್ತೆ ಎಚ್ಚೆತ್ತುಕೊಳ್ಳುತ್ತದೆ. ಮತ್ತೂ ಬೇಕೆನ್ನುತ್ತದೆ. ಮಕ್ಕಳು ಸಾಕು ಎಂದು ನಿರ್ಧರಿಸಿದ ಮೇಲೆ ಲೈಂಗಿಕತೆ ಕೇವಲ ಮೋಜಿಗಲ್ಲದೆ ಇನ್ನೇನಕ್ಕೆ? ಆದರೆ ಕಸ್ತೂರ್, ಅದು ತಪ್ಪು.'

'ಗಂಡು–ಹೆಣ್ಣು ಎರಡು ಜಣ ಪರಸ್ಪರ ಆಪ್ತವಾಗಿ ಕಾಲ ಕಳೆದು ಖುಷಿ ಪಟ್ಟರೆ ತಪ್ಪೇನಿದೆ?'

'ಕಾಮದಲ್ಲಿ ಮುಳುಗಿಹೋದ ಲೋಕ ಹೀಗೇ ನಂಬಿದೆ ಕಸ್ತೂರ್. ಆದರೆ ಮಕ್ಕಳ ಹುಟ್ಟಿಸುವ ಅವಶ್ಯಕತೆಯಿಲ್ಲದ ಲೈಂಗಿಕತೆ ಪಾಪ. ನಾನೀಗ ಅಹಿಂಸೆ ಕುರಿತು ಮಾತನಾಡುತ್ತೇನಲ್ಲ, ಅಹಿಂಸೆಯಲ್ಲಿ ಬ್ರಹ್ಮಚರ್ಯವೂ ಸೇರಿದೆ. ಅದನ್ನು ಒಮ್ಮೆಗೇ ಸಾಧಿಸುವುದು ನನ್ನಂತಹ ಸಂಸಾರಿಗೆ ಕಷ್ಟ. ನೀನು ಗಮನಿಸಿರಬಹುದು, ಇದಕ್ಕೆ ಹಲವು ದಿನಗಳಿಂದ ತಯಾರಿ ನಡೆದಿದೆ. ಮೊದಲು ಹಗಲಿನ ಸಂಭೋಗ ಬಿಡುವುದು. ನಂತರ ಇರುಳಿನ ಸಂಭೋಗ ನಿಲ್ಲಿಸುವುದು. ಅದನ್ನು ಸಾಧ್ಯ ಮಾಡಲು ಸರಳ ಉಡುಪು, ಸರಳ ಆಹಾರ ಬಳಸಬೇಕು. ಒಡವೆ, ಪರಿಮಳಗಳನ್ನು ಬಿಡಬೇಕು. ದೈಹಿಕ ಆಕರ್ಷಣೀಯತೆ ಕಡಿಮೆ ಮಾಡಿಕೊಳ್ಳಬೇಕು. ಚೆನ್ನಾಗಿ ಕಾಣಬಾರದು. ಇವು ನೈತಿಕವಾಗಿ ನಮ್ಮನ್ನು ಒಂದು ಮೆಟ್ಟಿಲು ಮೇಲೆ ಏರಿಸುವಂಥವು ಕಸ್ತೂರ್. ನನ್ನ ಕೆಲಸ ನಾನೇ ಮಾಡಿಕೊಳ್ಳುವುದು, ಸಪ್ಪೆ ಮಿತ ಆಹಾರ ತಿನ್ನುವುದು ಸಾಕಷ್ಟು ದಿನಗಳಿಂದ ನಡೆದಿದೆ, ನಿನಗೆ ಗೊತ್ತಲ್ಲ.'

'ಹೌದು, ನಿಜ. ಆದರೆ ನೀವು ಈ ನಿರ್ಧಾರಕ್ಕೆ ಬರಲು ಹಾಗೆ ಮಾಡಿದಿರಿ ಅಂತ ಗೊತ್ತಿರಲಿಲ್ಲ. ನನಗೆ ಹೇಳಲೇ ಇಲ್ಲ ನೀವು.'

'ನಿನಗೂ ವಸ್ತ್ರ, ಒಡವೆ ಬಿಡಲು ಹೇಳಿದೆ. ಉಪ್ಪು ಬಿಡಲು ಹೇಳಿದೆ, ಬೇಳೆ ಬಿಡಲು ಹೇಳಿದೆ. ಸಕ್ಕರೆ ಬೇಡವೆಂದೆ. ಒಡವೆ, ರೇಶ್ಮೆ ಬಿಡಲು ಹೇಳಿದೆ. ಇಲ್ಲವೇ?'

ಹೌದು. ಭಾಯಿ ನನಗೂ ಏನೇನನ್ನೋ ನಿಧಾನವಾಗಿ ಬಿಡಿಸಿದ್ದರು. ಅವರು ನಡೆಯುತ್ತಿದ್ದ ದಾರಿಯಲ್ಲಿ ನನಗರಿವಿಲ್ಲದಂತೆ ನನ್ನನ್ನೂ ಕರೆದೊಯ್ದಿದ್ದರು. ಆದರೆ ಅವರಿಗೇಕೆ ಈ ಅಭಿಪ್ರಾಯ ಹುಟ್ಟಿತು ಅಂತ ಆಶ್ಚರ್ಯವಾಗಿ ಕೇಳಿದೆ. ಅದಕ್ಕೆ ಅವರು ಒಂದು ಘಟನೆ ಹೇಳಿದರು.

ಪ್ರಾಣಜೀವನ ಮೆಹ್ತಾ ಭಾಯಿಯ ಹಳೆಯ, ಆಪ್ತ ಸ್ನೇಹಿತ. ಬ್ಯಾರಿಸ್ಟರ್ ಓದಿ ಲಂಡನ್ನಿನಿಂದ ಮುಂಬಯಿಗೆ ಬಂದಿಳಿದ ಭಾಯಿ ಮೊದಲು ಮೆಹ್ತಾರ ಮನೆಗೆ ಹೋಗಿ, ನಂತರ ರಾಜಕೋಟೆಗೆ ಬಂದಿದ್ದು. ಅವರ ಮನೆಯಲ್ಲಿ ಭಾಯಿ ತಮ್ಮಷ್ಟೇ



ದೊಡ್ಡವರಾದ ರಾಯಚಂದ ಭಾಯಿ ಎಂಬ ಜೈನ ಸಂತನನ್ನು ಭೇಟಿ ಮಾಡಿದ್ದರು. ಭಾಯಿಯ ಮೇಲೆ ಕೊನೆತನಕ ಆತನ ಪ್ರಭಾವ ಬಹಳ ಇತ್ತು. ರಾಯಚಂದ ಭಾಯಿ ನಾವು ದಕ್ಷಿಣ ಆಫ್ರಿಕಾದಿಂದ ಬರುವ ಹೊತ್ತಿಗೆ ತೀರಿಕೊಂಡುಬಿಟ್ಟರು. ಸುಮಾರು ೧೦ ವರ್ಷ ಇಬ್ಬರೂ ಬಹಳ ಆಪ್ತರಾಗಿದ್ದರು. ಒಂದೇ ಸಮ ಪತ್ರ ಸಂವಾದ ನಡೆಸಿದ್ದರು.

ಮೆಹ್ತಾರ ಮನೆಯಲ್ಲಿ ಒಂದು ಸುದ್ದಿ ಭಾಯಿಯ ಗಮನ ಸೆಳೆಯಿತಂತೆ. ಒಬ್ಬ ಇಂಗ್ಲಿಷ್ ಸಂಸದ (ಗ್ಲಾಡ್‌ಸ್ಟೋನ್)ನಿಗೆ ಅವನ ಹೆಂಡತಿ ಹೌಸ್ ಆಫ್ ಕಾಮನ್ಸ್‌ನಲ್ಲು ಚಹ ತಂದುಕೊಟ್ಟಿದ್ದಳು. ಆಕೆಯ ಪ್ರೇಮ, ತ್ಯಾಗಗಳು ದಾಂಪತ್ಯದ ಅತಿವಿಶಿಷ್ಟ ಲಕ್ಷಣ ಎಂದು ಗಾಂಧಿ ಭಾಯಿ ಹೊಗಳಿದ್ದರು. ಆಗ ರಾಯಚಂದ ಭಾಯಿ, ಯಾವುದು ವಿಶಿಷ್ಟ? ಗಂಡನಿಗೆಂದು ಅವಳು ಮಾಡಿದ ಸೇವೆಯೋ? ಯಾರಿಗೇ ಆದರೂ ಅವಳು ಮಾಡುವ ಸೇವೆಯೋ? ಅವಳೇನಾದರೂ ಹೆಂಡತಿಯಲ್ಲದೆ ತಂಗಿಯೋ, ಸೇವಕಿಯೋ ಆಗಿ ಅಷ್ಟೇ ಸೇವಾಭಾವದಿಂದ ಮಾಡಿದ್ದರೆ ನಿನಗಿಷ್ಟು ಮನಸೆಳೆಯುತ್ತಿತ್ತೆ? ಅಥವಾ ಅವಳಿಗೆ ಒಬ್ಬ ಪುರುಷ ಚಹ ನೀಡಿದ್ದರೆ ಇಷ್ಟು ಮನ ಸೆಳೆಯುತ್ತಿತ್ತೆ? ಲೈಂಗಿಕ-ರಕ್ತ ಸಂಬಂಧ ಹೊಂದಿದವರು ಮಾಡಿದ ಸೇವೆ ಮಾತ್ರ ವಿಶಿಷ್ಟವೇ? ಮುಂತಾದ ಪ್ರಶ್ನೆ ಕೇಳಿದರಂತೆ.

ತಗೋ, ಇದನ್ನು ನನ್ನ ಗಂಡ ಹಿಡಿದುಬಿಟ್ಟಿದ್ದರು. ಎಲಎಲಾ, ಹೌದಲ್ಲ ಅಂತ ಯೋಚಿಸಿದರು. ತಾನು ದೈಹಿಕ ಸಂಬಂಧ ಇರುವ ಸೇವೆಯನ್ನಷ್ಟೇ ಗಮನಿಸುತ್ತಿರುವೆ. ಅದಕ್ಕಷ್ಟೇ ಪ್ರಾಮುಖ್ಯ ಕೊಡುತ್ತಿರುವೆ, ಪತಿಪತ್ನಿ ಸಂಬಂಧ ಬರಿಯ ದೈಹಿಕವಲ್ಲ, ಅದರಾಚೆಗೂ ಇರಬೇಕು, ದೈಹಿಕವಲ್ಲದೆಯೂ ಉಳಿಯುವುದಾದರೆ ಮಾತ್ರ ಅದು ಪರಿಶುದ್ಧ ಪ್ರೇಮ ಅಂತ ಅನಿಸಿಬಿಟ್ಟಿತು. ರಾಯಚಂದ ಭಾಯಿ ಹತ್ತಿರ ಈ ಬಗ್ಗೆ ಸಾಕಷ್ಟು ಚರ್ಚೆ ನಡೆಸಿದರು. ಲೈಂಗಿಕತೆ ಆತ್ಮಕ್ಕೆ ಹಾನಿಕರ ಅನ್ನುವುದು ಜೈನ ನಂಬಿಕೆ. ಅದನ್ನು ಭಾಯಿ ಮನಸ್ಸಿಗೆ ತೆಗೆದುಕೊಂಡುಬಿಟ್ಟಿದ್ದರು. ನಾಲ್ಕೈದು ವರ್ಷ ಅದರ ಬಗ್ಗೆ ಗಾಢವಾಗಿ ಯೋಚಿಸಿ ಈಗ ಈ ನಿರ್ಧಾರಕ್ಕೆ ಬಂದಿದ್ದರು.



ಮದುವೆಯಾದ ನಂತರ ೧೯ನೇ ವಯಸ್ಸಿನಿಂದಲೇ ನಾವು ದೂರ ಉಳಿದಿದ್ದೆವು. ನಂತರವೂ ದೂರವೇ ಇದ್ದಿದ್ದು ಹೆಚ್ಚು. ನಾನು ಜೊತೆಯಲ್ಲಿಲ್ಲದೆ ತಾವು ಕಳೆದ ತಾರುಣ್ಯದ ವರ್ಷಗಳಲ್ಲಿ ಸ್ವನಿಗ್ರಹಕ್ಕೆ ಎಷ್ಟು ಕಷ್ಟಪಟ್ಟರು, ಅದಕ್ಕೆ ಏನೇನು ವಿಧಾನ ಅನುಸರಿಸಿದರು ಅಂತೆಲ್ಲ ವಿವರಿಸಿದರು. ಇಷ್ಟು ಹೇಳಿ, ಧರ್ಮಪತ್ನಿಯಾದ ನಾನು ಸಹಕರಿಸಬೇಕಂತ ಕೈಮುಗಿದು ಪ್ರಾರ್ಥಿಸಿದರು.

ಅಲ್ಲಿಯವರೆಗೆ ಒಂದೇ ಕೋಣೆಯೊಳಗೆ ಬೇರೆಬೇರೆ ಮಲಗುತ್ತಿದ್ದೆವು. ಈಗ ಇಬ್ಬರೂ ಬೇರೆಬೇರೆ ಮಲಗಲು ಶುರು ಮಾಡಿದೆವು.

ಭಾಯಿ ಯಾವಾಗಲೂ ಹಾಗೆ. ತನಗೆ ಬಲು ಇಷ್ಟವಾದದ್ದು ಯಾವುದೋ ಅದನ್ನೇ ನಿಗ್ರಹ ಮಾಡಬೇಕೆಂದು ಪಣ ತೊಡುವವರು, ಅದನ್ನೇ ಬಿಡಲಿಕ್ಕೆ ಎದೆ ಗಟ್ಟಿ ಮಾಡಿಕೊಳ್ಳುವವರು. ಅವರ ಉಪವಾಸದ ಸಮಯದಲ್ಲೂ ಅಷ್ಟೇ. ಈಗ ಬ್ರಹ್ಮಚರ್ಯ ಅನ್ನುವುದೂ ಅಷ್ಟೆ. ಒಂದು ಕಾಲದಲ್ಲಿ ಹೆಂಡತಿಗಿಂತ ಅವಳ ಮೈಯೇ ಇಷ್ಟವಾಗಿದ್ದ ಮೋಕ, ಈಗ ಅದನ್ನೇ ಬಿಡುವ ನಿರ್ಧಾರ ಮಾಡಿದ್ದರು.

ನಾನೇನು ಮಾಡಲಿ ಅಂತ ಯಾರ ಹತ್ತಿರ ಕೇಳಲಿ? ಕೇಳಿದರೆ ಅವರಿಗೆ ಅರ್ಥವಾದರೂ ಆಗುತ್ತೋ, ಇಲ್ಲವೋ? ನಮ್ಮ ಬಗೆಗೆ ಇಲ್ಲಸಲ್ಲದ್ದನ್ನು ಕಲ್ಪಿಸಿ ಅಪಾರ್ಥವಾದರೆ ಅನ್ನುವ ಭಯ ಬೇರೆ. ಅಮ್ಮ, ಸಣ್ಣತ್ತೆ ಯಾರೂ ಇರಲಿಲ್ಲ. ನನ್ನ ಅಕ್ಕತಂಗಿಯರಲ್ಲಿ ಯಾರನ್ನೂ ಕೇಳುವಂತಿರಲಿಲ್ಲ. ನಮ್ಮನೆಗೊಬ್ಬರು ಮಾತಾ ಬರುತ್ತಿದ್ದರು, ದೂರದ ಸಂಬಂಧಿ. ಕೊನೆಗೆ ಅವರಿಗೆ ಬಲು ಸೂಚ್ಯವಾಗಿ ಪತ್ರ ಬರೆಸಿದೆ. ಅವರು, 'ಪತಿಗೆ ತಕ್ಕಂತೆ ನಡೆದುಕೊಳ್ಳಬೇಕಾದ್ದು ಸತಿಧರ್ಮ. ಬ್ರಹ್ಮಚರ್ಯ ಇರಲಿ, ಮತ್ತೇನೇ ಇರಲಿ, ಅವರಿಚ್ಛೆಯಂತೆ ಇರುವುದೇ ನಿನ್ನ ಕರ್ತವ್ಯ. ಅವರ ಮೇಲೆ ಅನುಮಾನಿಸುವಂಥದೇನೂ ಇಲ್ಲದಿದ್ದರೆ ಒಪ್ಪಿಕೊ' ಅಂತ ಪತ್ರ ಬರೆಸಿದರು. ಅದಾದಮೇಲೆ ಬ್ರಹ್ಮಚರ್ಯದ ನಿಯಮಗಳನ್ನು ನಾನೂ ಮನಃಪೂರ್ವಕ ಪಾಲಿಸತೊಡಗಿದೆ.

ಭಾಯಿಗೆ ಹ್ಞೂಂ ಅಂತೇನೋ ಅಂದೆ. ಆದರೆ ನಿರಾಳವಾದೆ ಎನ್ನುವಂತಿಲ್ಲ. ಏನೋ ಒಂದು ಕೊರತೆ, ಒಂದು ಲೋಪ, ಒಂದು ಶೂನ್ಯ ನನ್ನೊಳಗೆ ಬೆಳೆಯುತ್ತಿದೆ, ನಮ್ಮಿಬ್ಬರ ಮಧ್ಯ ಒಂದು ದೂರ ಸೃಷ್ಟಿಯಾಗುತ್ತಿದೆ ಅನಿಸುತ್ತಿತ್ತು. ದೇಹಸಂಬಂಧ ಅಂದರೆ ಭಾಳ ಖುಷಿ ಅಂತಲ್ಲ, ಹೆಂಡತಿ ಅಂತ ನನಗಿರೋ ವಿಶೇಷ ಅಧಿಕಾರ ಅದು ಅಂತ ಭಾವಿಸಿದ್ದೆ. ಅದೂ ಇಲ್ಲ ಅಂದರೆ ಮತ್ತಿನ್ನೇನು ಉಳಿಯಿತು ಅಂತ ಅನಿಸಿತ್ತು ಅಷ್ಟೆ. ಆದರೆ ಆಶ್ರಮ ಜೀವನ ಶುರುವಾದಾಗಲೇ ಬ್ರಹ್ಮಚರ್ಯವನ್ನೂ ಹಿಡಿದಿದ್ದರಿಂದ ಇಬ್ಬರೂ ಒಂದು ರೀತಿಯ ಬಿಡುಗಡೆ ಹೊಂದಿದೆವು ಅನ್ನುವುದೂ ನಿಜವೇ.

ಆದರೂ ಅವರಿಗೆ ಕಾಮದ ಬಗೆಗೆ ಈ ಭಾವನೆ ಏಕೆ ಹುಟ್ಟಿರಬಹುದು ಅಂತ ಯೋಚಿಸಿದರೆ ಒಂದು ಘಟನೆ ಫಕ್ಕನೆ ನೆನಪಿಗೆ ಬರುತ್ತದೆ: ಮದುವೆಯಾದ ಹೊಸತರಲ್ಲಿ ಒಂದು ದಿನ. ಐನೀರಾಗಿ ಒಳ ಬಂದಿದ್ದೆ. ಮಾವನವರಿಗೆ ತುಂಬ ಆರೋಗ್ಯ ತಪ್ಪಿತ್ತು. ಅವರ ಸೇವೆ ಮೋಕನದೇ ಆಗಿತ್ತು. ಅವತ್ತು ರಾತ್ರಿ ಅಪ್ಪನ ಸೇವೆ ಮಾಡುತ್ತ ಇದ್ದೋರು ಅಣ್ಣ ಬಂದರು ಅಂತ ಒಂದು ಚಣ ಕೋಣೆಯೊಳಗೆ ಬಂದರು. ಐದೇ ನಿಮಿಷ, ಮೋಡ ಮಳೆಯಾಗಿತ್ತು ಅಷ್ಟೇ. ಬಾಗಿಲು ಟಕ ಟಕ ಅಂತು. ಸೇವಕ ಬಂದು ಕರೆದ, ಮಾವ ತೀರಿಹೋಗಿದ್ದರು. ಆಮೇಲೆ ಎಷ್ಟೋ ದಿನ, ಎಷ್ಟೋ ಕಾಲ ಈ ವಿಷಯ ಮೋಕನನ್ನು ಪಾಪಪ್ರಜ್ಞೆಯಲ್ಲಿ ಕೆಡವಿತು. ಸ್ವಲ್ಪ ದಿನ ಆದಮೇಲೆ ನನಗೆ ಹೆರಿಗೆಯಾಗಿ, ಮಗು ಒಂದೆರಡು ದಿನಗಳಲ್ಲಿ ತೀರಿಹೋದಾಗ ತನ್ನ ಕಾಮಪಿಪಾಸುತನಕ್ಕೆ ಆದ ಶಿಕ್ಷೆ ಅದು ಎಂದೇ ಮೋಕ ಭಾವಿಸಿದರು. ಇದೇ ಪಾಪಪ್ರಜ್ಞೆ ಮುಂದೆಯೂ ಉಳಿದು ಬಂದಿರಲಿಕ್ಕೆ ಸಾಕು.

ಅದೇನೇ ಇರಲಿ, ತನ್ನ ಜೊತೆ ಮಲಗದೇ ಬೇರೆ ವ್ಯವಸ್ಥೆ ಮಾಡಿಕೊಂಡಿರ ಬಹುದೆಂದು ನಾನು ಭಾವಿಸಿಯೇನು ಎಂದು ಭಾಯಿ ಸದಾ ಎಚ್ಚರವಾಗಿರುತ್ತಿದ್ದರು. ಉಳಿದವರಿಗೆ ಏನೂ ತಿಳಿಯದಂತೆ ಮೊದಲು ಹೇಗಿದ್ದರೋ ಹಾಗೇ ನಡೆದುಕೊಳ್ಳುತ್ತಿದ್ದರು. ನನಗೆ ಅನಾರೋಗ್ಯವಾದರೆ ಬೆನ್ನು ನೀವುವುದು, ತಲೆ ಒತ್ತುವುದು, ಜಲಚಿಕಿತ್ಸೆ, ಆವಿಚಿಕಿತ್ಸೆಗಳನ್ನೆಲ್ಲ ಮಾಡುತ್ತಿದ್ದದ್ದು ಅವರೇ. ಹೋದಲ್ಲೆಲ್ಲ ಜೊತೆಗೇ ಕರೆದೊಯ್ಯುತ್ತಿದ್ದರು. ಮುಟ್ಟುತ್ತಿದ್ದರು, ಹೆಗಲ ಮೇಲೆ ಕೈಯಿಟ್ಟು ನಡೆಯುತ್ತಿದ್ದರು, ದೇಹಸಂಬಂಧ ಮಾತ್ರ ಇರಲಿಲ್ಲ.

ದೂರವಿರಲು ಶುರುವಾಗಿ ಎರಡು ವರ್ಷವಾಗಿತ್ತು. ೧೯೦೮ರಲ್ಲಿ ಇರಬೇಕು, ತೀರಾ ರಕ್ತಸ್ರಾವವಾಗಿ ನಾನು ಸತ್ತುಸತ್ತು ಬದುಕಿದೆ. ಭಾಯಿ ಮತ್ತು ಉಳಿದ

ಸತ್ಯಾಗ್ರಹಿಗಳೆಲ್ಲ ದಕ್ಷಿಣ ಆಫ್ರಿಕಾದ ಜೈಲುಗಳನ್ನು ತುಂಬಿದ್ದರು. ಬೇಲ್ ಮೇಲೆ ಹೊರಬರುತ್ತಿದ್ದರು, ಒಳ ಹೋಗುತ್ತಿದ್ದರು, ಹೊರಬರುತ್ತಿದ್ದರು. ಆರೋಗ್ಯ ತಪ್ಪಿ ಕಂಗೆಟ್ಟು ಮಲಗಿದ ನನಗೆ ಭಾಯಿಯಿಂದ ಒಂದು ಪತ್ರ ಬಂತು. ಅದನ್ನು ಮಣಿ ಓದಿ ಹೇಳಿದ್ದ: 'ಧೈರ್ಯವಾಗಿದ್ದು ಸರಿಯಾದ ಪೌಷ್ಠಿಕ ಆಹಾರ ತೆಗೆದುಕೊಂಡರೆ ನೀನು ಸುಧಾರಿಸುವಿ. ಇಲ್ಲವಾದರೆ, ನನ್ನ ದುರದೃಷ್ಟ. ನಾನು ಬದುಕಿದ್ದರೂ ಸಹ ನನ್ನ ಬಿಟ್ಟು ನೀನೇ ಮೊದಲು ಹೊರಟು ಹೋಗಲು ಸಿದ್ಧಳಾದರೆ, ನನ್ನದೇನೂ ಅಭ್ಯಂತರವಿಲ್ಲ. ನಾನು ನಿನ್ನನ್ನು ಎಷ್ಟು ಪ್ರೀತಿಸುತ್ತೇನೆ ಎಂದರೆ ನೀನು ತೀರಿಹೋದರೂ ನನ್ನ ಪಾಲಿಗೆ ಜೀವಂತ ಇರುತ್ತೀಯೆ. ನಿನ್ನ ಆತ್ಮ ಅಮರ. ನಾನು ನಿನಗೆ ಪದೇಪದೇ ಕೊಟ್ಟ ಮಾತನ್ನು ಮತ್ತೆ ಹೇಳುತ್ತೇನೆ: ಕಾಯಿಲೆಯಿಂದ ನೀನು ತೀರಿಕೊಂಡರೆ ನಾನು ಮತ್ತೆ ಮದುವೆಯಾಗುವುದಿಲ್ಲ.'

ನಿನಗೇನಾದರೂ ಆದಲ್ಲಿ ನಾನು ಮತ್ತೆ ಮದುವೆಯಾಗುವುದಿಲ್ಲ ಎಂಬ ಮಾತನ್ನು ಭಾಯಿ ಮತ್ತೆಮತ್ತೆ ಹೇಳುತ್ತ ಇದ್ದರು. ಈ ಪತ್ರ ಬಂದಮೇಲೆ ನಾನು ಮತ್ತಷ್ಟು ನಿರಾಳವಾದೆ. ಮಣಿಸರ, ಪೇಟ, ಕೋಟು, ಸೂಟು, ಊಟ.. ಭಾಯಿ ಒಂದೊಂದಾಗಿ ಬಿಡುತ್ತ, ಕಳಚುತ್ತ ಬಂದಿದ್ದರು. ಈರುಳ್ಳಿಯಂತೆ ಒಂದೊಂದೇ ಸಿಪ್ಪೆ ಕಳಚುತ್ತ ಕೊನೆಗದು ಹೆಂಡತಿಯ ತನಕವೂ ಬಂದಿತು ಎಂದು ಅರ್ಥ ಮಾಡಿಕೊಂಡೆ.

'ಕಾಮವೇ ಶತ್ರು' ಅನ್ನುವುದು ಅವರ ಆಳವಾದ ನಂಬಿಕೆಯಾಯಿತು. ಸರಳ ಬದುಕು, ಸಹಜ ಬದುಕು, ಬ್ರಹ್ಮಚರ್ಯ, ಸೇವೆ, ಬಡತನದ ಬದುಕು, ಸಸ್ಯಾಹಾರ, ನಿಸರ್ಗ ಚಿಕಿತ್ಸೆ ಇವನ್ನೆಲ್ಲ ಪಾಲಿಸುತ್ತಿದ್ದರು. ಮದುವೆಯ ಒಂದು ಉದ್ದೇಶ ಮತ್ತು



ಸಾರ್ಥಕ್ಯದ ಕುರುಹು ಕಾಮವಾಗಿದ್ದರೂ ಕಾಮ ಬೇಡ, ಹೆಂಡತಿ ಜೊತೆಗೂ ಸಂಗ ಬೇಡ ಎಂದರು. ಒಟ್ಟಾರೆ ಗಂಡು ಹೆಣ್ಣು ಖುಷಿಯಿಂದ ಲೈಂಗಿಕ ಬದುಕು ನಡೆಸಬಹುದು ಅಂತ ಅವರು ಭಾವಿಸಲೇ ಇಲ್ಲ. ಅವರಿಗೆ ಪ್ರೀತಿಯಲ್ಲಿ ನಂಬಿಕೆ ಇತ್ತು, ಆದರೆ ಕಾಮದಲ್ಲಿ ಅನುಮಾನ ಇತ್ತು. ಅವರ ಸುತ್ತ ಸದಾ ಹೆಣ್ಮಕ್ಕಳಿದ್ದರು. ಅವರ ಸ್ಪರ್ಶದಿಂದ ಖುಷಿಗೊಳ್ಳುತ್ತಿದ್ದರು. ಆದರೆ ಕಾಮದಿಂದ ಮುಕ್ತರಾಗಬಯಸಿದ್ದರು. ಹೆಣ್ಣುಗಳಲ್ಲಿ ಹೆಣ್ಣಾಗಬೇಕು, ಹೆಣ್ಣುಗಳು ತನ್ನನ್ನು ಹೆಣ್ಣಿನಂತೆ ಭಾವಿಸಬೇಕು ಅಂತ ಬಯಸಿದ್ದರು! ವಿಚಿತ್ರ, ಆದರೆ ಸತ್ಯ. 'ನಾನು ಅರ್ಧ ಹೆಣ್ಣು' ಅನ್ನೋರು. ಊಟದ ಬಗ್ಗೆ ಹೇಗೋ ಹಾಗೇ ಕಾಮದ ಬಗ್ಗೆಯೂ ಅಷ್ಟೇ ಸಲೀಸಾಗಿ ಮಾತಾಡುತ್ತಿದ್ದರು. ಯಾವ ಹಿಂಜರಿಕೆ ಇಲ್ಲ. ಅನ್ನದ ಬಗ್ಗೆ ಹೇಗೋ ಮಲದ ಬಗ್ಗೆನೂ ಅಷ್ಟೇ ಸಲೀಸಾಗಿ ಮಾತಾಡೋರು. ಯಾವ ಮುಚ್ಚುಮರೆ ಇಲ್ಲದೆ ಹೇಳಿಬಿಡುತ್ತಿದ್ದದ್ದರಿಂದ ಎಲ್ಲರ ಬಾಯಿಗೂ ಆಹಾರವಾಗುತ್ತಿದ್ದರು. ಇಂಥದನ್ನೆಲ್ಲ ಅರ್ಥ ಮಾಡಿಕೊಳ್ಳುವುದು ಉಳಿದ ಜನರಿಗೆ ಸ್ವಲ್ಪ ಕಷ್ಟವೇ. ನನ್ನ ನೆಂಟರು, ಇಷ್ಟರು ಇದನ್ನೇ ತಿರುಗಿಸಿ ಮುರುಗಿಸಿ ಕೇಳಿ, ಕೇಳಿ ಬೇಸರ ಹುಟ್ಟಿಸುತ್ತಿದ್ದರು. ಬಾಪು ಹತ್ತಿರ ಈ ಬಗ್ಗೆ ಹೇಳಿದರೆ, 'ಅವರೇನಾದರೂ ತಿಳಿಯಲಿ, ಸತ್ಯ ಏನೋ ಅದನ್ನು ಹೇಳಿ ನಿಶ್ಚಿಂತಳಾಗಿರು. ನಿನಗನಿಸಿದ್ದು ನಿನ್ನ ಸತ್ಯ, ಏನಂದುಕೊಳ್ಳುತ್ತಾರೋ ಅದು ಅವರ ಪಾಲಿನ ಸತ್ಯ' ಎಂದು ಬಲು ಸರಳವಾಗಿ ಹೇಳಿಬಿಡುತ್ತಿದ್ದರು.

ನನ್ನ ಗಂಡ, ಅವನ ಪ್ರೀತಿಯ ರಾಮ ಇಬ್ಬರೂ ಹೆಚ್ಚುಕಮ್ಮಿ ಒಂದೇ. ಜೀವ ಕೊಡುವ ಹೆಂಡತಿಯರು, ತಮ್ಮಂದಿರು, ಬಳಗ, ಭಕ್ತರು ಅವರಿಗಿದ್ದರು. ಆದರೂ ತಮ್ಮ ಮೇಲೆ 'ಒಳ್ಳೆತನ'ಗಳನ್ನು ಹೇರಿಕೊಂಡು ಕಷ್ಟಪಟ್ಟರು. ಪ್ರೇಮ, ಕಾಮ ಬೇರೆಬೇರೆ ಅಂತ ನೋಡಿ ತುಂಬ ಕಷ್ಟಪಟ್ಟರು ಬಾಪು. ಅವು ಒಂದೇ ನಾಣ್ಯದ ಎರಡು ಮುಖಗಳ ತರಹ. ಬೇರೆಬೇರೆ ಅಕ್ಷರದಲ್ಲಿ, ಆಕಾರದಲ್ಲಿ ಬರೆದಿರುತ್ತೆ, ನಿಜ. ಆದರೆ ಬೆಲೆ ಒಂದೇ. ಅವರಿಗೆ ಇದನ್ನು ತಿಳಿಸಿ ಹೇಳುವುದರಲ್ಲಿ ನಾನು ಸೋತೆ. ಹೆಚ್ಚು ಹೇಳಿದರೆ ಎಲ್ಲಿ ನನಗೇ ಬೇಕಾಗಿದೆ ಅಂತ ಭಾವಿಸಿಯಾರೋ ಅನಿಸಿ ಸುಮ್ಮನಾದೆ.

ನನ್ನ ಗಂಡ ನನಗೆ ಪ್ರೀತಿ, ಕೀರ್ತಿಯನ್ನೂ ಕೊಟ್ಟರು, ಸಂಕಷ್ಟವನ್ನೂ ಕೊಟ್ಟರು. ಯಾವುದೆಷ್ಟು ಅಂತ ಹೇಗೆ ಅಳೆಯುವುದು? ಆಕಾಶವನ್ನು ಸಮುದ್ರದಿಂದ ಅಳೆಯಬಹುದೇ?

(ಇದೇ ಲೇಖಕಿಯ, ಸ್ವನಿರೂಪಣಾ ಶೈಲಿಯ ಕಸ್ತೂರಬಾ ಜೀವನಚರಿತ್ರೆ 'ನಾನು ಕಸ್ತೂರ್' ಸದ್ಯವೇ ಬಿಡುಗಡೆಯಾಗಲಿದೆ.)

**ಡಾ॥ ಎಚ್. ಎಸ್. ಅನುಪಮಾ**
ಜಲಜಾ ಜನರಲ್ ಮತ್ತು ಹೆರಿಗೆ ಆಸ್ಪತ್ರೆ, ಕವಲಕ್ಕಿ ಅಂಚೆ
ಹೊನ್ನಾವರ ತಾಲ್ಲೂಕು, ಉತ್ತರ ಕನ್ನಡ ಜಿಲ್ಲೆ – ೫೮೧ ೩೬೧

# ಆ ದೇಶಕ್ಕೆ ಮರುಕಪಡು




ಜನ ಕುರಿಗಳಾಗಿ, ಕುರುಬ ದಾರಿ ತಪ್ಪಿಸುವ
ದೇಶಕ್ಕೆ ಮರುಕ ಪಡು ॥

ನಾಯಕರು ಸುಳ್ಳ ರಾಗಿ, ಮುನಿಗಳು ಮೌನ ತಾಳಿ,
ಮತಾಂಧರು ಗಾಳಿ ತುಂಬಾ ತುಂಬಿರುವಾಗ
ತನ್ನ ಧ್ವನಿಯೆತ್ತದ
ದೇಶಕ್ಕೆ ಮರುಕ ಪಡು ।
ಪುಂಡರನ್ನು ಧೀರರೆಂದು ಮೇಲೆತ್ತುವ
ಹಿಂಸೆ ಭುಜಬಲಗಳಿಂದ
ಪ್ರಪಂಚವನ್ನೇ ಆಳಬೇಕೆನ್ನುವ
ತನ್ನ ಭಾಷೆಯ ಬಿಟ್ಟು ಅನ್ಯ ಭಾಷೆ ಅರಿಯದ
ತನ್ನ ಸಂಸ್ಕೃತಿಯಲ್ಲದೆ ಅನ್ಯ ಸಂಸ್ಕೃತಿ ತಿಳಿಯದ
ದೇಶಕ್ಕೆ ಮರುಕ ಪಡು ।
ಹಣವೇ ಉಸಿರಾಗಿರುವ
ತಿಂದುಂಡು ಮಲಗಿರುವವರ ಮತ್ತೆ ಮಲಗಿಸುವ
ದೇಶಕ್ಕೆ ಮರುಕ ಪಡು ।
ತನ್ನ ಹಕ್ಕುಗಳು ಗಾಳಿಯಲ್ಲಿ ಕರಗಿ ಹೋಗಲು ಬಿಡುವ
ದೇಶಕ್ಕೆ ಮರುಕ ಪಡು ।
ಹೋ! ಆ ಜನರಿಗೆ ಮರುಕ ಪಡು ।

ನನ್ನ ದೇಶವೇ, ನಿನ್ನ ಸ್ವಾತಂತ್ರ್ಯದ
ನೆಲಬೀಡಿನ ಕಣ್ಣೀರ ಹನಿಗಳಿವು ॥

ಮೂಲ : **ಕ್ರಿಸ್ಟೋ ಸ್ಮಿರ್ನೆನ್‌ಸ್ಕಿ**
ಅನುವಾದ : **ಎಸ್. ಎನ್. ಸ್ವಾಮಿ**

# ಕನಸು ಕನವರಿಕೆ

ವಿಜಯಾ ಶ್ರೀಧರ್

**ಬಾ**ಳಿನಲ್ಲಿ ಹಗಲು–ರಾತ್ರಿ ಸಹಜ. ರಾತ್ರಿಯಲ್ಲಿ ಸಕಲ ಜೀವರಾಶಿಗಳು ನಿದ್ರಿಸುವುದು ಸಾಮಾನ್ಯ ನಿಸರ್ಗ ನಿಯಮ. ಅಪವಾದಗಳು ಇಲ್ಲವೆಂದಲ್ಲ. ಯೋಗಿ, ಭೋಗಿ, ರೋಗಿಗೆ ರಾತ್ರಿ ನಿದ್ರೆ ಇಲ್ಲ ಎನ್ನುತ್ತಾರೆ. ಅದು ಬೇರೆ ಮಾತು. ಜನಸಾಮಾನ್ಯರು ಹಗಲಿಡೀ ದುಡಿದು, ಉಂಡು, ಉಟ್ಟು, ನಲಿದು, ದಣಿದು ರಾತ್ರಿ ನಿದ್ರೆಯ ಮಡಿಲಿಗೆ ಜಾರುತ್ತಾರೆ. ನಿದ್ರೆಯಲ್ಲಿ ಸ್ವಪ್ನಸುಂದರಿಯ ಜೊತೆ ವಿಹರಿಸುತ್ತಾರೆ. ಕೆಲವರಿಗೆ ಕನಸುಗಳು ನೆನಪಿರುತ್ತವೆ. ಹಲವರು ಮರೆತೇ ಬಿಡುತ್ತಾರೆ. ಕನಸುಗಳಿಗೂ ಅರ್ಥವಿದೆ ಎಂದು ಮನೋವಿಜ್ಞಾನ ಹೇಳುತ್ತದೆ. ಜ್ಯೋತಿಷ್ಯದಲ್ಲೂ ಕನಸುಗಳಿಗೆ ವಿವರಣೆ ಇದೆ. ಆದರೆ ನಾನು ಹೇಳಬಯಸುವುದು ವಿಶೇಷ ಕನಸುಗಳ ಬಗ್ಗೆ! ಅದು ಕನ್ನಡ ಸಾಹಿತ್ಯದಲ್ಲಿ ನನಗೆ ಪ್ರಿಯವಾದ, ಎಂದೆಂದಿಗೂ ನೆನಪಲ್ಲಿ ಉಳಿದು ಆನಂದ ನೀಡುವ ಕನಸುಗಳ ಬಗ್ಗೆ !

ನಾನಿನ್ನೂ ನಾಲ್ಕನೇ ತರಗತಿಯಲ್ಲಿ ಓದುತ್ತಿದ್ದೆ. ಗಣಿತದ ಪಾಠ ಕೇಳಿ ನಮ್ಮ ತಲೆ ಬಿಸಿಯಾದಾಗ ಗುರುಗಳು, "ಈಗ ನಿಮಗೊಂದು ಹಾಡು ಅದರಲ್ಲೇ ಕತೆ ಇದೆ" ಎಂದು ಒಂದು ವಿನೋದಮಯ ಕವನ ಹಾಡುತ್ತಿದ್ದರು. 'ಒಬ್ಬ ತಿರುಕನ ಕನಸು' ಎಂಬ ಆ ಪದ್ಯ ಬರೆದದ್ದು ಮುಪ್ಪಿನ ಷಡಕ್ಷರಿ ಎಂದು ಈಗ ತಿಳಿದಿದೆ. ಭಿಕ್ಷುಕ ಒಂದು ಹಾಳು ಛತ್ರದಲ್ಲಿ ಮಲಗಿದಾಗ ಕಾಣುವ ಕನಸಿನ ಕಥೆ. ಕನಸಿನಲ್ಲಿ ರಾಜಕುಮಾರಿಯನ್ನು ಮದುವೆಯಾಗಿ ಮಕ್ಕಳು–ಮರಿಯಾಗಿ, ಎಲ್ಲ ಭಾಗ್ಯದಲ್ಲಿ ಓಲಾಡುತ್ತಿದ್ದಾಗ, ಕನಸು ಒಡೆದುಹೋಗುವ ಸಂದರ್ಭ. ಬಾಲ್ಯದಲ್ಲಿ ತುಂಬ ನಗು ತರುತ್ತಿದ್ದ ಈ ತಿರುಕನ ಕನಸಿನ ಪದ್ಯ ಈಗ ಗಂಭೀರವಾದ ಆಲೋಚನೆಗೆ ಎಡೆಮಾಡುತ್ತದೆ. ಪದ್ಯದ ಕೊನೆಗೆ ಕವಿ "ಧರೆಯ ಭೋಗ ಕನಸಿನಂತೆ ಕೇಳು ಮಾನವ" ಎಂಬ ಗಹನವಾದ ತತ್ವಜ್ಞಾನವನ್ನು ತುಂಬಿದ್ದಾನೆ.

ಏಳನೇ ತರಗತಿಗೆ ಬಂದಾಗ ಓದಿದ ಕಾದಂಬರಿ 'ನಾಟ್ಯರಾಣಿ ಶಾಂತಲಾ.' ಕೆ. ವಿ. ಅಯ್ಯರ್ ಬರೆದಿರುವ ಈ ಕಾದಂಬರಿಯಲ್ಲಿ ಬರುವ ಪ್ರಸಂಗ. ಕುವರ ವಿಷ್ಣು, ಶಾಂತಲೆಯ ಬಳಿ ಬಂದು "ಕನಸೆಂದನೆ ಅಕ್ಕ, ಕನಸಲ್ಲ ಅದು ..." ಎಂದು ವರ್ಣಿಸುವ ಭಾಗ. ಅದನ್ನು ಓದಿ ಮನಸ್ಸು ಮಂತ್ರಮುಗ್ಧವಾಗಿತ್ತು. ಎಂದು ಬೇಲೂರು – ಹಳೇಬೀಡು ನೋಡುವೆನೋ ಎಂಬ ತವಕ. ನಡು ಹರೆಯದಲ್ಲಿ ನೋಡಿದಾಗ ಆ ಕನಸೇ, ವಾಸ್ತವಕ್ಕಿಂತ ಅದ್ಭುತವಾಗಿತ್ತು ಎಂಬ ಭಾವ! ಸೌಂದರ್ಯ ವಿರುವುದು ನೋಡುವವರ ದೃಷ್ಟಿಯಲ್ಲಿ ಎಂಬ ಅರಿವಾಗುವಾಗ ಇಳಿವಯಸ್ಸು !!

ಬಾಲ್ಯದಲ್ಲಿ ದೇವಸ್ಥಾನದಲ್ಲಿ ನಡೆಯುವ ಹರಿಕತೆಗೆ ಹೋಗುವ ಸಡಗರ. ದಾಸರು ಹೇಳುವ ಉಪಕತೆಗಳಿಗಾಗಿ ಕಾತುರದಿಂದ ಕಾಯುತ್ತಿದ್ದೆವು. ಆ ಬಾರಿ ದಾಸರು ಹಾಡಿದ್ದರು. "ಕಂಡೆ ನಾ ಕನಸಿನಲ್ಲಿ ಗೋವಿಂದನ" ಎಂದು ಮುಂದುವರಿಸುತ್ತಾ ಕೃಷ್ಣನ ಆಭರಣಗಳನ್ನೆಲ್ಲಾ ವರ್ಣಿಸಿದ್ದರು. "ಕಿರುಬೆರಳಿನ ಮುದ್ರೆ ಉಂಗುರ" ಕೂಡ ಪುರಂದರದಾಸರಿಗೆ ಕಂಡಿತ್ತು. ನನ್ನ ಮುಗ್ಧ (ಮೂರ್ಖ!) ಮನಸ್ಸಿಗೆ ಅದು ಹೇಗೆ ಅಷ್ಟು ಸ್ಪಷ್ಟವಾಗಿ ಕೃಷ್ಣನ ಅಲಂಕಾರ ಕಂಡಿರಬೇಕು ಎಂದು ಅಚ್ಚರಿಯಾಗಿತ್ತು. ಅದು ಕನಸು, ಸಾಮಾನ್ಯ ಕನಸಲ್ಲ, ಪುರಂದರದಾಸರು ಕಂಡ ಕನಸು ಎಂದು ಈಗ ಅರ್ಥವಾಗಿದೆ.

ಮತ್ತಷ್ಟು ಕಾಲ ಕಳೆದಿತ್ತು. ದೊಡ್ಡವಳಾದೆ, ಮದುವೆಯಾಯ್ತು, ಪತಿಗೃಹದಲ್ಲಿ ಸೇರಿ ಕೆಲಕಾಲದ ನಂತರ ಪತಿಯೊಡನೆ ತವರಿಗೆ ಬಂದ ಸಂದರ್ಭ. "ನನ್ನ ತವರು ಶಿರ್ಶಿ, ಶಿರೀಷ ಪುಷ್ಪದಷ್ಟು ಚೆಂದ!" ಎಂದು ನಾನು, "ನಮ್ಮ ಸಾಗರಕ್ಕೆ ಯಾವುದನ್ನೂ ಹೋಲಿಸುವುದು ಸಾಧ್ಯವಿಲ್ಲ, ಸಾಗರಕ್ಕೆ ಸಾಗರವೇ ಸಾಟಿ" ಎಂದು ಪತಿದೇವರು, ಹೀಗೆ ತಕರಾರು



ಪ್ರಾರಂಭವಾಯ್ತು. ಅದರಿಂದ ಮುನಿಸು. ಇಬ್ಬರೂ ಮಾತು ನಿಲ್ಲಿಸಿ ನಮ್ಮ ಪಾಡಿಗೆ ನಾವಿದ್ದಾಗ ಅಡಿಗೆ ಮನೆಯಿಂದ ಅಮ್ಮ ಮಧುರವಾಗಿ ಹಾಡಲು ಪ್ರಾರಂಭಿಸಿದ್ದಳು.

*ಒಂದಿರುಳು ಕನಸಿನಲ್ಲಿ*
*ನನ್ನವಳ ಕೇಳಿದೆನು*
*ಚೆಂದ ನಿನಗಾವುದೆಂದೂ*
*ನಮ್ಮೂರು ಚೆಂದವೊ ನಿಮ್ಮೂರು ಚೆಂದವೊ*
*ಎಂದೆನ್ನ ಕೇಳಲೇಕೆ?*
*ನಮ್ಮೂರ ದಾರಿಯಲಿ ನಿಮ್ಮೂರ*
*ಕನಸಿದೆನು ವಿಸ್ತರಿಸಿ ಹೇಳಬೇಕೇ?*

– ಮೈಸೂರು ಮಲ್ಲಿಗೆಯ ಕವಿ ಕೆ. ಎಸ್. ನರಸಿಂಹಸ್ವಾಮಿಯವರ ಕವನದಿಂದ ನಮ್ಮ ಮುನಿಸು ದೂರಾಗಿತ್ತು. ಕವಿ ಕನಸಿನಲ್ಲಿ ಮಧುರ ಸಲ್ಲಾಪ ನಡೆಸಿದ್ದರೆ ನಮ್ಮದು ವಾಸ್ತವ ಜಗತ್ತಿನ ಮನಸ್ತಾಪವಾಗಿತ್ತು. ಅಂತೂ ಕವಿಯ ಕನಸಿಗೊಂದು ವಿಶಿಷ್ಟ ಶಕ್ತಿ ಇದ್ದುದು ನಿಜ ಅಲ್ಲವೆ?

ಒಂದು ಹಿಂದೂಸ್ಥಾನೀ ಸಂಗೀತ ಕಛೇರಿ. ಮಲ್ಲಿಕಾರ್ಜುನ ಮನಸ್ಸೂರ ಅವರದು. ಕಾರ್ಯಕ್ರಮದ ಕೊನೆಗೆ ಮನಸಾರೆ ಹಾಡಿದ್ದು ಅಕ್ಕನ ವಚನ. ವೈರಾಗ್ಯನಿಧಿ ಅಕ್ಕಮಹಾದೇವಿ ಕಂಡ ಕನಸಿನ ವಚನ. "ಅಕ್ಕಾ ಕೇಳವ್ವಾ, ನಾನೊಂದ ಕನಸ ಕಂಡೆ" ಗಾಯಕರು ತುಂಬು ಕಂಠದಿಂದ ಹಾಡುತ್ತಿದ್ದರೆ ಚೆನ್ನಮಲ್ಲಿಕಾರ್ಜುನ ನಮ್ಮ ಕಣ್ಣ ಮುಂದೆ ಪ್ರತ್ಯಕ್ಷವಾದಂತೆ, ಅವನ ಬೆಂಬತ್ತಿ ಕೈವಿಡಿದೆನು ಎನ್ನುವ ಅಕ್ಕ ಅಲ್ಲೇ ಅವತರಿಸಿದ ಅನುಭವ! ಅಕ್ಕನದು ಎಂಥ ಸುಂದರ ಕನಸು. ಅದು ಅಕ್ಕ ಸದಾ ಜಾಗೃತ ಸ್ಥಿತಿಯಲ್ಲೂ ಚೆನ್ನಮಲ್ಲಿಕಾರ್ಜುನನನ್ನು ಕಾಣುವ ಸ್ಥಿತಿ ಎನಿಸತೊಡಗಿತ್ತು.

ಮುದ್ದು ಮಗಳಿಗೆ ಕನ್ನಡ ನಾಡಿನ ಬಗ್ಗೆ ಪಾಠ ಹೇಳಿಕೊಡುತ್ತಿದ್ದೆ. ನಮ್ಮ ಕನ್ನಡಮ್ಮ, ಕನ್ನಡ ಭುವನೇಶ್ವರಿ ಮುಂತಾಗಿ ಅಭಿಮಾನ ತುಂಬುವ ಪ್ರಯತ್ನ ನನ್ನದಾಗಿತ್ತು. ಆಗಲೇ ನೆನಪಾಗಿತ್ತು ವರಕವಿ ದ. ರಾ. ಬೇಂದ್ರೆಯವರ "ಕನಸಿನೊಳಗೊಂದು ಕಣಸು" ಕವನ! ತಾಯಿ–ಮಕ್ಕಳ ಸಂವಾದ ರೂಪದ ಈ ಕವನ ವರಕವಿ ಕಂಡ ಕನಸು.

*ಚಂಡಿ ಚಾಮುಂಡಿ ಪೇಳ್ ಬೇಕಾದುದೇನು?*
*ಗಂಡುಸಾದರೆ ನಿನ್ನ ಬಲಿ ಕೊಡುವೆಯೇನು?*

ಈಗ ಕವಿಗೆ ತಕ್ಷಣ ಎಚ್ಚರವಾಗಿದೆ. "ಹೊರಗೆ ಕಂಡೆ–ಬೆಳಗಾಯ್ತು" ಎನ್ನುವ ಮಾತಿ ನಿಂದ ಈ ಕನಸಿನಿಂದ ಕನ್ನಡ ನಾಡಿನ ಸ್ಥಿತಿ–ಗತಿ ಅರಿವಾಯ್ತು ಎನ್ನುವ ಭಾವ ಇದೆ.

ಇದು ವರಕವಿಯ ಕನಸಾದರೆ ರಾಷ್ಟ್ರಕವಿ ಕುವೆಂಪು ಚಿತ್ರಿಸಿದ ಕನಸು ಅದ್ಭುತ–ರಮ್ಯ. ಕುವೆಂಪು ಸೃಷ್ಟಿಸಿದ ರಾಮಾಯಣ ದರ್ಶನದಲ್ಲಿ ರಾವಣ ಸ್ವಪ್ನ ಸಿದ್ಧಿಯಲ್ಲಿ ಸೀತೆಯ ಮಗನಾದಂತೆ ಕನಸು ಕಾಣುವುದು ರಾವಣನ ವ್ಯಕ್ತಿತ್ವಕ್ಕೇ ಒಂದು ಹೊಸ ಆಯಾಮ ನೀಡಿದೆ.

ಕಡಲತೀರದ ಭಾರ್ಗವ ಶಿವರಾಮ ಕಾರಂತರ "ಮೂಕಜ್ಜಿಯ ಕನಸುಗಳು" ತ್ರಿವೇಣಿಯವರ ಕನಸುಗಳ ಆಧಾರಿತ ಮನೋವೈಜ್ಞಾನಿಕ ಕಾದಂಬರಿಗಳನ್ನು ಮರೆಯಲು ಸಾಧ್ಯವೆ? ಜನ್ನನ ಯಶೋಧರ ಚರಿತೆಯ ಪ್ರಸ್ತಾಪವಿಲ್ಲದೆ ನನ್ನ ಕನಸುಗಳ ಕನವರಿಕೆ ಮುಗಿಯುವುದು ಹೇಗೆ? ಕಥಾನಾಯಕ ಯಶೋಧರ ಒಂದು ದುಃಖಸ್ವಪ್ನವನ್ನು ಕಂಡುದಾಗಿ ಸುಳ್ಳು ಹೇಳುತ್ತಾನೆ. ಆ ಕನಸಿನ ದೋಷ ನಿವಾರಣೆಗಾಗಿ ತಾಯಿ–ಮಗ ಹಿಟ್ಟಿನ ಕೋಳಿ ಬಲಿ ಕೊಡುವ, ಅದರಿಂದಾಗಿ ಸಂಭವಿಸುವ ವಿಪತ್ ಪರಂಪರೆಯನ್ನು ನೋಡಿದಾಗ ಎಂಥ ವಿಷಾದ! ಕನಸಿನ (ಅದೂ ಯಶೋಧರ ಹೇಳಿದ ಸುಳ್ಳು!) ದೋಷ ನಿವಾರಣೆಗೆ ಹಿಂಸೆ ಮಾಡಿದರೂ ತಪ್ಪು ಎಂಬ ವಿಚಾರ, ನಾನಾ ರೀತಿಯ ಹಿಂಸೆಯೇ ವಿಜೃಂಭಿಸುತ್ತಿರುವ ಈ ಕಾಲದಲ್ಲಿ ಎಷ್ಟು ಔನ್ನತ್ಯದಿಂದ ಕೂಡಿದ್ದಲ್ಲವೆ?

**ವಿಜಯಾ ಶ್ರೀಧರ್**
'ಶ್ರೀವಿಜಯ', ೬ನೇ ಅಡ್ಡರಸ್ತೆ, ೧ನೇ ಮುಖ್ಯರಸ್ತೆ
ರಾಜೇಂದ್ರನಗರ, ಶಿವಮೊಗ್ಗ – ೫೭೭ ೨೦೪

# ನೀ ಮೌನಜಂಗಮನು...




**ನೂ**ರು ಗೌಜಿ–ಗದ್ದಲಗಳ
ಸಾವಿರ ವಾದ–ವಾಗ್ವಾದಗಳ
ನಡುವೆಯೂ
ನಿನ್ನ ಮೆದುನಡಿಗೆಯ ನೆರಳು
ಹೊರಟಿದೆ ಮೂಕಮೆರವಣಿಗೆ
ಶಬ್ದನಾದದ ಹೆಸರ ತೊರೆದು

ನುಡಿದ ನಿನ್ನುಡಿಗೆ
ನಿಡಿದ ನಿನ್ನುಸಿರಿಗೆ
ಅಪಾರ್ಥದ ವಿಪರೀತ ಅರ್ಥಗಳು
ಬಸುರ ತುಂಬ ವಿಷವ ಹೊತ್ತು
ಹೂಂಕರಿಸುವ ನೆಲದ ರಣಹದ್ದುಗಳು

ನಿನ್ನ ಧರ್ಮದ ಬಲವು ಅಧ್ಯಾತ್ಮದ
ಒಲವು
ಕಳಚಿಬಿದ್ದ ಗಳಿಗೆ
ಬಯಲ ತುಂಬಾ
ಕಂಪಿಸುವ ಶೋಕತಪ್ತ
ಮಳೆದುಂಬಿಗಳು

ನೀ ಕಲಿಸಿದ ಜೀವನದ ಶುಚಿಯು
ಬದುಕಿನ ರುಚಿಯು
ಗುಡಿಸಿ ಹಾಕಿದೆ
ಬೀದಿ–ಕೇರಿಯ ಕೊಚ್ಚೆ ಕೊಳೆಯನು

ನೀ ನಿವೃತ್ತನಾದರೂ
ಶತಮಾನದ ಅನುಮಾನಕ್ಕೆ
ತುತ್ತಾದರೂ
ನಿಜಪ್ರೇಮದ ಹಾದಿಯಲಿ

ನಡೆಯುತ್ತಲೇ ಇರುವೆ
ಕೋಲು ಹಿಡಿದು

ಬಾಗಿದ ಬೆನ್ನು
ಇನ್ನೆಂದೂ ಮುಖ ತೋರಿಸಲಾರೆ
ಎಷ್ಟೇ ಅಂದರೂ
ಬೆನ್ನು ಬಿಡರು ದುಂದುಮಾರರು

ಏನಾದರೂ
ನೀನೇ ಮೌನಜಂಗಮನು
ನೊಂದವರಿಗೂ
ನಿನ್ನ ಕೊಂದವರಿಗೂ

**ಡಾ॥ ದಿನೇಶ್ ನಾಯಕ್**
ಸಹಾಯಕ ಪ್ರಾಧ್ಯಾಪಕ, ಕನ್ನಡ ವಿಭಾಗ, ಸಂತ ಅಲೋಶಿಯಸ್ ಪದವಿ ಕಾಲೇಜು (ಸ್ವಾಯತ್ತ)
ಮಂಗಳೂರು–೫೭೫೦೦೩

